ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮ [redacted] ಣಂ.

( ಸ [redacted] ಸ )



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಪ್ರಸ್ತಾವನೆ.

---

ಇದು ಪಾತಾಳಖಂಡದ ಎರಡನೆಯ ಭಾಗವು. ಇದರಲ್ಲಿಯೂ ರಾಮನ ಕುದುರೆಯನ್ನು ರಾಜರುಗಳು ಕಟ್ಟುವುದನ್ನು ವರ್ಣಿಸುತ್ತ ರಾಮನ ವ್ಯಕ್ತಿಯಲ್ಲಿ ಅವರಿಗೆ ಎಷ್ಟರಮಟ್ಟಿನ ಭಕ್ತಿಯಿರುವುದೆಂದು ವರ್ಣಿತವಾಗಿದೆ.

ಸುರಥನೆಂಬುವನು ಯಾವಾಗಲೂ ರಾಮಧ್ಯಾನವನ್ನೇ ಮಾಡುತ್ತಿದ್ದು ಅದರ ಬಲದಿಂದ ಹನುಮಂತನನ್ನೂ ಕೂಡ ಸೋಲಿಸಿರುವನು, ಎಂದು ವರ್ಣಿಸಿ ಹನುಮಂತನಿಗಿಂತಲೂ ರಾಮಭಕ್ತರು ಇರುವರೆಂಬುದನ್ನು ವ್ಯಕ್ತಪಡಿಸಿದ್ದಾನೆ.

ಅನಂತರ ಕುದುರೆಯು ವಾಲ್ಮೀಕಿಯ ಆಶ್ರಮಕ್ಕೆ ಹೋಗಲು, ಲವನು ಅದನ್ನು ಕಟ್ಟುವುದನ್ನೂ, ಯುದ್ಧಕ್ಕೆ ಬಂದವರ ತೋಳುಗಳನ್ನು ಕತ್ತರಿಸಿದನೆಂದು ಹೇಳುತ್ತಾ ಸೀತೆಯ ಮಕ್ಕಳ ವಿಷಯದಲ್ಲಿ ಸಂದೇಹ ಬರಲು ಸೀತೆಗೆ ಬಂದ ಅಪವಾದವನ್ನು ವರ್ಣಿಸಿ, ಆ ಅಪವಾದವು ಬಂದ ಅಗಸನ ಪೂರ್ವಚರಿತ್ರೆಯನ್ನು ವರ್ಣಿಸಿ, ಆತನು ಈ ಸೀತಾರಾಮರನ್ನು ಅಗಲಿಸುವುದಕ್ಕೋಸ್ಕರಲೇ ಅವತರಿಸಿರುವನೆಂದೂ ವರ್ಣಿಸುತ್ತಾನೆ. ಈ ಸಂದರ್ಭದಲ್ಲಿ ರಾಮನು ಗೂಢಚಾರರನ್ನು ತನ್ನ ವಿಷಯವನ್ನು ತಿಳಿಯಲು ಕಳುಹಿಸುವುದು, ಅವರಿಂದ ಬಂದ ದುರುಕ್ತಿ, ಅದಕ್ಕೋಸ್ಕರ ತಮ್ಮಂದಿರ ಪರೀಕ್ಷೆ. ಕೊನೆಯಲ್ಲಿ ಲಕ್ಷ್ಮಣನೇ ತನ್ನ ಭಕ್ತಿಯನ್ನು ತೋರ್ಪಡಿಸುತ್ತಾ ಆಕೆಯನ್ನು ಕಾಡಿನಲ್ಲಿ ಬಿಟ್ಟುದು, ವಾಲ್ಮೀಕಿಯ ಶಿಷ್ಯರು ಆಕೆಯನ್ನು ಆಶ್ರಮಕ್ಕೆ ಕರೆದುಕೊಂಡು ಹೋದುದು, ಅಲ್ಲಿ ಲವಕುಶರ ಜನನ, ಆ ಸಮಯಕ್ಕೆ ಸರಿಯಾಗಿ ಶತ್ರುಘ್ನನ ಸಮಾಗಮ, ಅವನು ಈ ವಿಷಯವನ್ನು ರಾಮನಿಗೆ ಹೇಳದಂತೆ ಹೇಳುವುದು. ಇಷ್ಟನ್ನೂ ವರ್ಣಿಸಿರುವನು. ಇಂತಹ ಲವನ ಮೇಲೆ ದಂಡೆತ್ತಿ ಬರಲು ಆಗ ಕುಶಲರಿಬ್ಬರೂ ಎಲ್ಲರನ್ನೂ ಸೋಲಿಸಿ ಹನುಮಂತನನ್ನು ಸೀತೆಯ ಬಳಿಗೆ ಕರೆದುಕೊಂಡು ಹೋಗಲು ಆಕೆಯು ಅವರನ್ನೂ, ಆ ಕುದುರೆಯನ್ನೂ ಬಿಡುವಂತೆ ಹೇಳುವಳು. ಅಲ್ಲದೆ ತನ್ನ ಪಾತಿವ್ರತ್ಯ ಬಲದಿಂದ ಎಲ್ಲರನ್ನೂ ಬದುಕಿಸುವಳು. ಈ ವಿಷಯವನ್ನು ಸುಮಂತ್ರನು ರಾಮನಿಗೆ ತಿಳಿಸಲು ರಾಮನು ವಾಲ್ಮೀಕಿಯ ಅನುಮತಿಯಿಂದ ಕುಶಲವರನ್ನು ಕರೆಸಿದುದಲ್ಲದೆ, ಸೀತೆಯನ್ನು ಕರೆಸಿ ಯಾಗದಲ್ಲಿಟ್ಟುಕೊಂಡಿದ್ದ ಸುವರ್ಣ ಪ್ರತಿಮೆಯ ಸೀತೆಯ ಬದಲು ಎಲ್ಲರ ಅಪ್ಪಣೆ ಮತ್ತು ಆಗ್ರಹದಿಂದ ಸಹಧರ್ಮಿಣಿಯಾದ ಸೀತೆ

ಯನ್ನೇ ಪರಿಗ್ರಹಿಸಿ ಆ ಅಶ್ವಮೇಧಯಾಗವನ್ನು ಮಾಡಿದುದಲ್ಲದೆ ಇನ್ನೂ ಅನೇಕ ಯಾಗಗಳನ್ನು ಆಕೆಯೊಡನೆ ಮಾಡಿದನೆಂದು ವರ್ಣಿಸಿ, ಸೀತೆಯ ಲೋಕಾಪವಾದದ ದೆಸೆಯಿಂದ ಮುಕ್ತನಾದನೆಂಬುದು ವರ್ಣಿತವಾಗಿದೆ.

ಪುಣ್ಯಪ್ರಾಪ್ತಿ, ನೀತಿಗ್ರಹಣ, ಮತಗಳ ಹಿನ್ನೆಲೆಯಾದ ಆಚಾರ, ಇವುಗಳಿಗೆ ಮಾರ್ಗದರ್ಶಕಗಳಾದ ಇಂತಹ ಪುರಾಣವನ್ನು ದೇಶಭಾಷೆಯಲ್ಲಿ ಅನುವಾದಿಸಲು ಪ್ರೋತ್ಸಾಹಿಸುತ್ತಿರುವ ನಮ್ಮ ಮಹಾಸ್ವಾಮಿಯವರಿಗೆ ಧನ್ಯವಾದಗಳನ್ನು ಅರ್ಪಿಸಿ ಸರ್ವೇಶ್ವರನು ಸಕಲ ಸೌಭಾಗ್ಯಗಳನ್ನೂ ಕೊಡಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಅನುವಾದಕ

29-1-45, ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ

ಮೈಸೂರು. ಸಾಹಿತ್ಯವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದರಾಸ್)



# ವಿಷಯಾನುಕ್ರಮಣಿಕೆ.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೆ ಪಾತಾಳಖಂಡೇ ಅಷ್ಟತ್ರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಏತದಾಖ್ಯಾನಕಂ ಶ್ರುತ್ವಾ ವಾತ್ಸ್ಯಾಯನ ಉದಾರಧೀಃ ।
ಪರಮಂ ಹರ್ಷಮಾಪೇದೇ ಜಗಾದ ಚ ಫಣೀಶ್ವರಂ ॥ ೧ ॥

॥ ವಾತ್ಸ್ಯಾಯನ ಉವಾಚ ॥

ಕಥಾಂ ಸಂಶೃಣ್ವತೋ ಮಹ್ಯಂ ತೃಪ್ತಿರ್ನಾಸ್ತಿ ಫಣೀಶ್ವರ ।
ರಘುನಾಥಸ್ಯ ಭಕ್ತಾರ್ತಿಹಾರಿಕೀರ್ತಿಕರಸ್ಯ ವೈ ॥ ೨ ॥

ಧನ್ಯ ಆರಣ್ಯಕೋ ನಾಮ ಮುನಿರ್ವೇದಧರಃ ಪರಃ ।
ರಘುನಾಥಂ ಸಮಾಲೋಕ್ಯ ದೇಹಂ ತತ್ಯಾಜ ನಶ್ವರಂ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯ.

೧. ವ್ಯಾಸನು ಹೇಳಿದನು:—ಈ ಕಥೆಯನ್ನು ವ್ಯಾತ್ಸ್ಯಾಯನನು ಕೇಳಿ ಬಹು ಸಂತೋಷಪಟ್ಟು ಶೇಷನನ್ನು ಕುರಿತು ಇಂತೆಂದನು.

೨. ವ್ಯಾತ್ಸ್ಯಾಯನನು ಹೇಳಿದನು:—ಎಲೈ ಆದಿಶೇಷನೇ! ಭಕ್ತರ ತೊಂದರೆಯನ್ನು ನಾಶಮಾಡುವ ಕೀರ್ತಿಯುಳ್ಳ ರಾಮನ ಕಥೆಯನ್ನು ಕೇಳುತ್ತಿರುವ ನನಗೆ ತೃಪ್ತಿಯೇ ಇಲ್ಲ.

೩. ವೇದಗಳನ್ನು ಓದಿದ ಆ ಅರಣ್ಯಕನು ರಾಮನ ದರ್ಶನವನ್ನು ಮಾಡಿ ಒಡನೆಯೇ ಈ ನಶ್ವರವಾದ ದೇಹವನ್ನು ಬಿಟ್ಟುಬಿಟ್ಟನು.

ತತೋ ರಾಜ್ಞೋ ಹಯಃ ಕುತ್ರ ಗತಃ ಕೇನ ನಿಯಂತ್ರಿತಃ ।
ಕಥಂ ತತ್ರ ರಮಾನಾಥಕೀರ್ತಿರ್ಜಾತಾ ಫಣೀಶ್ವರ ॥ ४ ॥

ಸರ್ವಂ ಕಥಯ ಮೇ ತಥ್ಯಂ ಸರ್ವಜ್ಞೋಽಸ್ತಿ ಯತೋ ಭವಾನ್ ।
ಧರಾಧರವಪುರ್ಧಾರೀ ಸಾಕ್ಷಾತ್ತಸ್ಯ ಸ್ವರೂಪಧೃತ್ ॥ ೫ ॥

॥ ವ್ಯಾಸ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಪ್ರಹೃಷ್ಟೇನಾಂತರಾತ್ಮನಾ ।
ಉವಾಚ ರಾಮಚಾರಿತ್ರಂ ತತ್ತದ್ಗುಣಕಥೋದಯಂ ॥ ೬ ॥

॥ ಶೇಷ ಉವಾಚ ॥

ಸಾಧು ಪೃಚ್ಛಸಿ ವಿಪ್ರರ್ಷೇ ರಘುನಾಥಗುಣಾನ್ಮುಹುಃ ।
ಶ್ರುತಾನಶ್ರುತವತ್ಕೃತ್ವಾ ತೇಷು ಲೋಲುಪತಾಂ ಧಧತ್ ॥ ೭ ॥

ತತೋ ನಿರಗಮದ್ವಾಹಃ ಸೈನಿಕೈರ್ಬಹುಭಿರ್ವೃತಃ ।
ರೇವಾತೀರೇ ಮನೋಹಾರೇ ಮುನಿವೃಂದನಿಷೇವಿತೇ ॥ ೮ ॥

---

४. ರಾಜನ ಯಜ್ಞದ ಕುದುರೆಯು ಎಲ್ಲಿ ಹೋಯಿತು? ಯಾರು ಕಟ್ಟಿದರು? ಅಲ್ಲಿ ರಾಮನ ಕೀರ್ತಿ ಏನಾಯಿತು? ಹೇಳು.

೫. ನೀನು ಸಾಕ್ಷಾತ್ ಸ್ವಾಮಿಯನ್ನೇ ಧರಿಸಿದ್ದೀಯೆ. ಸರ್ವಜ್ಞನು. ಆದ್ದರಿಂದ ಎಲ್ಲವನ್ನೂ ನನಗೆ ಸರಿಯಾಗಿ ಹೇಳು.

೬. ವ್ಯಾಸನು ಹೇಳಿದನು :—ಇದನ್ನು ಕೇಳಿ ಸಂತೋಷಪಟ್ಟು ಆಯಾ ಗುಣದಿಂದ ಕೂಡಿದ ರಾಮಚರಿತ್ರೆಯನ್ನು ಹೇಳಿದನು.

೭. ಶೇಷನು ಹೇಳಿದನು :—ಕೇಳಿದುದನ್ನು ಕೇಳಿಲ್ಲದಿರುವಂತೆ ಆಸೆಯನ್ನು ತೋರಿಸುತ್ತ ಕೇಳುತ್ತಿರುವೆಯಲ್ಲಾ; ಆ ರಾಮನ ಗುಣಗಳಲ್ಲಿ ಎಷ್ಟು ಆಸಕ್ತಿಯಿರಬಹುದು? ಬಹು ಚೆನ್ನಾಗಿದೆ.

೮. ಅನಂತರ ಆ ಕುದುರೆಯು ಸೈನಿಕರಿಂದ ಹಿಂಬಾಲಿಸಲ್ಪಟ್ಟು ಮುನಿಗಳಿರುವ ಆ ರೇವಾತೀರದಲ್ಲಿಯೇ ಹೊರಟಿತು.

ಸೇನಾಚರಾಸ್ತತಸ್ಸರ್ವೇ ಯತ್ರ ವಾಹಸ್ತತಸ್ತತಃ ।
ಪ್ರಸರ್ಪಂತಿ ನಿರೀಕ್ಷಂತಸ್ತನ್ಮಾರ್ಗಂ ರಣಕೋವಿದಾಃ ॥ ೯ ॥

ವಾಜೀ ಗತೋಽಥ ರೇವಾಯಾ ಹ್ರದೇಽಗಾಧಜಲಾನ್ವಿತೇ ।
ಭಾಲೇ ಸ್ವರ್ಣಭವಂ ಪತ್ರಂ ಧಾರಯನ್ಪೂಜಿತಾಂಗಕಃ ॥ ೧೦ ॥

ತತೋ ಜಲೇ ಮಮಜ್ಜಾಸೌ ರಾಮಚಂದ್ರಹಯೋ ವರಃ ।
ತದಾ ಸರ್ವೇ ಮಹಾಶೂರಾಸ್ತತ್ರ ವಿಸ್ಮಯಮಾಗತಾಃ ॥ ೧೧ ॥

ತೈಃ ಪರಸ್ಪರಮೇವೋಚುಃ ಕಥಂ ಹಯಸಮಾಗಮಃ ।
ಕೋಽತ್ರ ಗಂತಾ ಜಲೇ ವಾಹಮಾನೇತುಂ ತಂ ಮಹೋದಯಂ ॥ ೧೨ ॥

ಇತಿ ಯಾವತ್ಸಮುದ್ವಿಗ್ನಾ ಮಂತ್ರಯಂತೇ ಪರಸ್ಪರಂ ।
ತಾವದ್ವೀರಶತೈಸ್ಸಾರ್ಧಮಾಜಗಾಮ ರಕ್ಷೋಃ ಪತಿಃ ॥ ೧೩ ॥

ತಾನ್ಸರ್ವಾನ್ವಿಮನಸ್ಕಾನ್ಸ ದೃಷ್ಟ್ವಾ ಶತ್ರುಘ್ನಸಂಜ್ಞಿತಃ ।
ಪಪ್ರಚ್ಛ ಮೇಘಗಂಭೀರವಾಚಾ ವೀರಶಿರೋಮಣಿಃ ॥ ೧೪ ॥

---

೯. ರಣಧೀರರಾದ ಆ ಸೈನಿಕರು ಆ ಕುದುರೆಯನ್ನು ರಕ್ಷಿಸುತ್ತ ಅದರ ಮಾರ್ಗವನ್ನು ನೋಡುತ್ತ ಅದು ಹೋದಕಡೆಯಲ್ಲೆಲ್ಲಾ ಹೋಗುತ್ತಿದ್ದರು.

೧೦. ಹಣೆಯಲ್ಲಿ ಪಟ್ಟವುಳ್ಳ ಕುದುರೆಯು ಪೂಜಿಸಲ್ಪಟ್ಟು, ರೇವಾನದಿಯ ಒಂದು ಆಳವಾದ ಮಡುವಿನ ಬಳಿಗೆ ಹೋಯಿತು.

೧೧. ಆ ನೀರಿನಲ್ಲಿ ಇಳಿಯಲು ಕುದುರೆಯು ಮುಳುಗಿಹೋಯಿತು. ಆಗ ಆ ಮಹಾಶೂರರೆಲ್ಲರೂ ಆಶ್ಚರ್ಯಪಟ್ಟರು.

೧೨. ಅವರಲ್ಲಿ ಒಬ್ಬರಿಗೊಬ್ಬರು ಕುದುರೆ ಬರುವುದುಹೇಗೆ ಎಂದೂ, ನೀರಿನಲ್ಲಿ ಅದನ್ನು ತರಲು ಯಾರು ಹೋಗುವರೆಂದೂ ಮಾತನಾಡಿಕೊಳ್ಳುತ್ತಿದ್ದರು.

೧೩. ಅವರು ತೊಂದರೆಗೊಳಗಾಗಿ ಮಾತನಾಡಿಕೊಳ್ಳುತ್ತಿರುವಷ್ಟರಲ್ಲಿ ಅನೇಕ ಜನ ಶೂರರೊಂದಿಗೆ ಶತ್ರುಘ್ನನು ಅಲ್ಲಿಗೆ ಬಂದನು.

೧೪. ಶತ್ರುಘ್ನನು ಯೋಚನೆಗೊಳಗಾಗಿರುವ ಅವರನ್ನು ನೋಡಿ ಧೀರತನದಿಂದ ಕೇಳಿದನು.

ಕಿಂ ಸ್ಥಿತಂ ನಿಖಿಲೈರತ್ರ ಯುಷ್ಮಾಭಿಸ್ಸಂಘಶೋ ಜಲೇ ।
ಕುತ್ರಾಶ್ವೋ ರಘುನಾಥಸ್ಯ ಸ್ವರ್ಣಪತ್ರೇಣ ಶೋಭಿತಃ ॥ ೧೫ ॥

ಜಲೇ ಕಿಂ ನಿಮಮಜ್ಜಾಸೌ ಹೃತೋ ವಾ ಕೇನ ಮಾನಿನಾ ।
ತನ್ಮೇ ಕಥಯತ ಕ್ಷಿಪ್ರಂ ಕಥಂ ಯೂಯಂ ವಿನೋಹಿತಾಃ ॥ ೧೬ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ರಾಜ್ಞೋ ರಘುವರಸ್ಯ ತೇ ।
ಕಥಯಾಮಾಸುಸ್ತಂ ಸರ್ವೇ ವೀರಾಃ ಶೂರಶಿರೋಮಣಿಂ ॥ ೧೭ ॥

॥ ಜನಾ ಊಚುಃ ॥

ಸ್ವಾಮಿನ್ವಯಂ ನ ಜಾನೀಮೋ ಮುಹೂರ್ತಮಭವಜ್ಜಲೇ ।
ನಿಮಮಜ್ಜ ತತೋ ನಾಯಾದ್ಧಯಸ್ತವ ಮನೋಹರಃ ॥ ೧೮ ॥

ತ್ವಮೇವ ತತ್ರ ಗತ್ವೇಮಂ ವಾಹಮಾನಯ ವೇಗತಃ ।
ಅಸ್ಮಾಭಿಸ್ತತ್ರ ಗಂತವ್ಯಂ ತ್ವಯಾ ಸಾರ್ಧಂ ಮಹಾಮತೇ ॥ ೧೯ ॥

---

೧೫. ನೀವೆಲ್ಲರೂ ಏತಕ್ಕೆ ಈ ನೀರಿನ ಹತ್ತಿರ ಗುಂಪಾಗಿದ್ದೀರಿ? ಚಿನ್ನದಪಟ್ಟಿ ಕಟ್ಟಿಕೊಂಡಿರುವ ಶ್ರೀರಾಮನ ಯಜ್ಞಾಶ್ವವೆಲ್ಲಿ?

೧೬. ಆ ಕುದುರೆಯು ನೀರಿನಲ್ಲಿ ಮುಳುಗಿತೆ? ಅಥವಾ ಗರ್ವಿಯಾದ ಯಾವನಾದರೂ ಹಿಡಿದುಕೊಂಡುಹೋದನೆ? ಅದನ್ನು ಜಾಗ್ರತೆಯಾಗಿ ಹೇಳಿರಿ. ನೀವೇತಕ್ಕೆ ಮಂಕಾಗಿದ್ದೀರಿ?

೧೭. ಶೇಷನು ಹೇಳಿದನು:—ಶತ್ರುಘ್ನನ ಈ ಮಾತನ್ನು ಕೇಳಿ ಅವನಿಗೆ ಅವರೆಲ್ಲರೂ ಇಂತೆಂದರು.

೧೮. ಜನಗಳು ಹೇಳಿದರು:—ಸ್ವಾಮಿ, ಇದೇನು ಎಂಬುದನ್ನು ಕಾಣೆವು. ನೀರಿನಲ್ಲಿ ಮುಳುಗಿತು. ಮುಹೂರ್ತಕಾಲವಾಯಿತು. ಅದು ಇನ್ನೂ ಬರಲಿಲ್ಲ.

೧೯. ನೀನೇ ಅಲ್ಲಿಗೆ ಹೋಗಿ ಕುದುರೆಯನ್ನು ತೆಗೆದುಕೊಂಡು ಬಾ, ನೀನು ಹೋದಕಡೆಗೆ ನಾವೂ ಬರಲು ಸಿದ್ಧರಾಗಿದ್ದೇವೆ.

ಇತಿ ಶ್ರುತ್ವಾ ವಚಸ್ತೇಷಾಂ ಸೈನಿಕಾನಾಂ ರಘೂದ್ವಹಃ ।
ಖೇದಂ ಪ್ರಾಪ್ಯ ಜನಾನ್ಪಶ್ಯನ್ ಜಲಸಂತರಣೋದ್ಯತಾನ್ ॥ ೨೦ ॥

ಉವಾಚ ಮಂತ್ರಿಮುಖ್ಯಂ ಸ ಕಿಂ ಕರ್ತವ್ಯಮತಃಪರಂ ।
ಕಥಂ ವಾಹಸ್ಯ ಸಂಪ್ರಾಪ್ತಿರ್ಭವಿಷ್ಯತಿ ತಥಾ ವದ ॥ ೨೧ ॥

ಕೇ ತತ್ರ ಶೂರಾಸ್ಸಂಯೋಜ್ಯಾ ಜಲೇಽನ್ವೇಷಯಿತುಂ ಹಯಂ ।
ಕೋ ವಾಽನಯಿಷ್ಯತೇ ವಾಹಂ ಕೇನೋಪಾಯೇನ ತದ್ವದ ॥ ೨೨ ॥

ಇತಿ ರಾಜ್ಞೋ ವಚಶ್ಶ್ರುತ್ವಾ ಸುಮತಿರ್ಮಂತ್ರಿಸತ್ತಮಃ ।
ಉವಾಚ ಸಮಯೇ ಯೋಗ್ಯಂ ಶತ್ರುಘ್ನಂ ಹರ್ಷಯನ್ನಿವ ॥ ೨೩ ॥

॥ ಸುಮತಿರುವಾಚ ॥

ಸ್ವಾಮಿನ್ನಸ್ತಿ ತವ ಶ್ರೀಮನ್ ಶಕ್ತಿರದ್ಭುತಕರ್ಮಣಃ ।
ಪಾತಾಳಗಮನೇ ಶಕ್ತಿರ್ಜಲಮಧ್ಯಾದಿಹ ಸ್ಫುಟಂ ॥ ೨೪ ॥

ಅನ್ಯಚ್ಚ ಪುಷ್ಕಲಸ್ಯಾಪಿ ಶಕ್ತಿರಸ್ತಿ ಮಹಾತ್ಮನಃ ।
ಹನೂಮತೋಽಪಿ ರಾಮಸ್ಯ ಪಾದಸೇವಾಪರಸ್ಯ ಚ ॥ ೨೫ ॥

---

೨೦. ಸೈನಿಕರ ಆ ಮಾತನ್ನು ಕೇಳಿ ನೀರಿನಲ್ಲಿಳಿಯಲು ಸಿದ್ಧರಾಗಿದ್ದವರನ್ನು ನೋಡಿ ಖೇದಗೊಂಡನು.

೨೧. ಆಗ ಮುಖ್ಯಮಂತ್ರಿಯನ್ನು ಕುರಿತು ಈಗ ಏನುಮಾಡಬೇಕು? ಹೇಳು. ಹೇಗೆತಾನೆ ಕುದುರೆಯು ಸಿಕ್ಕುತ್ತದೆ ? ಎಂದು ಕೇಳಿದನು.

೨೨. ನೀರಿನಲ್ಲಿ ಹುಡುಕಲು ಯಾವ ಶೂರರನ್ನು ನಿಯಮಿಸಲಿ ? ಯಾವನು ಕುದುರೆಯನ್ನು ತಂದಾನು ? ಅದಕ್ಕೆ ಉಪಾಯವೇನು ? ಅದನ್ನು ಹೇಳು.

೨೩. ರಾಜನ ಈ ಮಾತನ್ನು ಕೇಳಿ ಸುಮತಿಯು ಆತನಿಗೆ ಸಂತೋಷಪಡಿಸುತ್ತಾ ಸಮಯಕ್ಕೆ ಸರಿಯಾದ ಮಾತನ್ನು ಆಡಿದನು.

೨೪-೨೫. ಸುಮತಿಯು ಹೇಳಿದನು :—ಸ್ವಾಮಿ, ತಮಗೂ, ಪುಷ್ಕಲನಿಗೂ ರಾಮಭಕ್ತನಾದ ಹನುಮಂತನಿಗೂ ಪಾತಾಳಗಮನಶಕ್ತಿಯೂ. ನೀರಿನ ಮಧ್ಯೆ ಹೋಗುವ ಶಕ್ತಿಯೂ ಇದೆ.

ತಸ್ಮಾದ್ಯೂಯಂ ತತ್ರ ಗತ್ವಾ ಹಯಮಾನಯತ ಧ್ರುವಂ ।
ಯತೋ ಭವೇದ್ವಾಹಮೇಧೋ ರಘುನಾಥಸ್ಯ ಧೀಮತಃ ॥ ೨೬ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಶ್ರುತ್ಯ ಸತ್ರುಘ್ನಃ ಪರವೀರಹಾ ।
ಸ್ವಯಂ ವಿವೇಶ ತೋಯಾಂತರ್ಹನೂಮತ್ಪುಷ್ಕಲಾನ್ವಿತಃ ॥ ೨೭ ॥

ಯಾವಜ್ಜಲಂ ವಿವೇಶಾಸೌ ತಾವತ್ಪುರಮುದೃಶ್ಯತ ।
ಅನೇಕೋದ್ಯಾನಶೋಭಾಢ್ಯಮಮೇಯಂ ಪುಟಭೇದನಂ ॥ ೨೮ ॥

ತತ್ರ ಮಾಣಿಕ್ಯಖಚಿತೇ ಸ್ತಂಭೇ ಸ್ವರ್ಣಮಯೇ ಹಯಂ ।
ಬದ್ಧಂ ದದರ್ಶ ರಾಮಸ್ಯ ಸ್ವರ್ಣಪತ್ರೋಪಶೋಭಿತಂ ॥ ೨೯ ॥

ಸ್ತ್ರಿಯಸ್ತತ್ರ ಮನೋಹಾರಿರೂಪಧಾರಿಣ್ಯ ಉತ್ತಮಾಃ ।
ಸೇವಂತೇ ಸುಂದರೀಮೇಕಾಂ ಪರ್ಯಂಕೇ ಸುಖಮಾಸ್ಥಿತಾಂ ॥ ೩೦ ॥

---

೨೬. ಆದ್ದರಿಂದ ನೀವು ನೀರಿನಲ್ಲಿ ಮುಳುಗಿ ಕುದುರೆಯನ್ನು ತನ್ನಿರಿ. ಹಾಗಾದರೆ ಶ್ರೀರಾಮನ ಅಶ್ವಮೇಧಯಾಗವು ಸುಖವಾಗಿ ನೆರವೇರುತ್ತದೆ.

೨೭. ಶೇಷನು ಹೇಳಿದನು:—ಈ ಮಾತನ್ನು ಕೇಳಿ ಶತ್ರುಘ್ನನು ಹನುಮಂತ ಪುಷ್ಕಳರೊಡನೆ ನೀರಿಗೆ ಇಳಿದನು.

೨೮. ನೀರಿಗೆ ಇಳಿಯುತ್ತಲೂ ಅನೇಕ ಉದ್ಯಾನಗಳಿಂದ ಕೂಡಿದ ಒಂದು ರಮ್ಯವಾದ ಊರು ಕಂಡುಬಂದಿತು.

೨೯. ಅಲ್ಲಿ ಮಾಣಿಕ್ಯಮಣಿಯನ್ನು ಕೆತ್ತಿದ ಚಿನ್ನದ ಕಂಬದಲ್ಲಿ ರಾಮನ ಪೂಜ್ಯವಾದ ಅಶ್ವಮೇಧದ ಕುದುರೆಯು ಕಟ್ಟಲ್ಪಟ್ಟಿದ್ದನ್ನು ಕಂಡರು.

೩೦. ಅಲ್ಲಿ ಒಬ್ಬಳು ಬಹು ಸುಂದರಿಯು ಮಂಚದಮೇಲೆ ಕುಳಿತಿದ್ದಳು. ಅವಳನ್ನು ಮನೋಹರವಾದ ಅನೇಕ ಸ್ತ್ರೀಯರು ಸೇವಿಸುತ್ತಿದ್ದರು.

**ತಾನ್ ದೃಷ್ಟ್ವಾ ತಾಸ್ತ್ರಿಯಸ್ಸರ್ವಾಃ ಪ್ರಾವೋಚನ್ ಸ್ವಾಮಿನೀಂ ಪ್ರತಿ ।**
**ಏತೇ ಪೀವರವಕ್ಷಾರ್ಣೋ ಮಾಂಸಪುಷ್ಟಕಳೇಬರಾಃ** ॥ ೩೦ ॥

**ಭವಿಷ್ಯಂತಿ ತವ ಶ್ರೇಷ್ಠಮಾಹಾರಸ್ಯ ಫಲಂ ಮಹತ್ ।**
**ಏತೇಷಾಂ ಶೋಣಿತಂ ಸ್ವಾದು ಪುರುಷಾಣಾಂ ಗತಾಯುಷಾಂ** ॥ ೩೧ ॥

**ಏತದ್ವಚಸ್ಸಮಾಕರ್ಣ್ಯ ಸೇವಕೀನಾಂ ವರಾಂಗನಾ ।**
**ಜಹಾಸ ಕಿಂಚಿದ್ವದನಂ ನರ್ತಯಂತೀ ಭ್ರುವಾನಘಾ** ॥ ೩೨ ॥

**ತಾವತ್ತ್ರಯಸ್ತೇ ಸಂಪ್ರಾಪ್ತಾಃ ಸನ್ನಾಹಶ್ರೀವಿಶೋಭಿತಾಃ ।**
**ಶಿರಸ್ತ್ರಾಣಾನಿ ದಧತಃ ಶೌರ್ಯವೀರ್ಯಸಮನ್ವಿತಾಃ** ॥ ೩೪ ॥

**ತಾ ದೃಷ್ಟ್ವಾ ಮಹಿಳಾಸ್ತತ್ರ ಸೌಂದರ್ಯಶ್ರೀಸಮನ್ವಿತಾಃ ।**
**ಪ್ರೋಚುಸ್ತೇ ವಿಸ್ಮಯಂ ವಿಪ್ರ ಕಿಮಿದಂ ದೃಶ್ಯತೇ ಮಹತ್** ॥ ೩೫ ॥

**ನಮಶ್ಚಕ್ರುರ್ಮಹಾತ್ಮಾನಃ ಸರ್ವೇ ದೇವವರಾಂಗನಾಃ ।**
**ಕಿರೀಟಮಣಿವಿದ್ಯೋತದ್ಯೋದಿತಾಂಘ್ರಿಯುತಾಸ್ತತಃ** ॥ ೩೬ ॥

---

೩೦-೩೧. ಆಗ ಇವರನ್ನು ನೋಡಿ ಆ ಸ್ತ್ರೀಯರು, ಎಲೈ ಸ್ವಾಮಿನಿಯೇ, ಇಲ್ಲಿ ದಪ್ಪದಪ್ಪವಾಗಿ ಕೊಬ್ಬಿದ ದೇಹವುಳ್ಳವರು ಬಂದಿದ್ದಾರೆ. ನಿನಗೆ ಒಳ್ಳೆಯ ಪುಷ್ಕಳವಾದ ಆಹಾರವೂ ಒದಗಿತು. ಇವರ ರಕ್ತವು ಬಹು ರುಚಿಯಾಗಿವೆ. ನಿನಗೆ ಉತ್ತಮವಾದ ಹೆಚ್ಚಾದ ಆಹಾರವು ಸಿಕ್ಕಿತು.

೩೨. ಸೇವಕಿಯರ ಈ ಮಾತನ್ನು ಕೇಳಿ ಹುಬ್ಬನ್ನು ಕುಣಿಸುತ್ತ ಆಕೆಯು ನಕ್ಕಳು.

೩೪. ತಲೆಗೆ ಟೊಪ್ಪಿಗೆಯನ್ನು ಹಾಕಿಕೊಂಡು ವೀರರಾಗಿ ಯುದ್ಧಕ್ಕೆ ಸಿದ್ಧರಾಗಿ ಈ ಮೂರು ಜನರೂ ಅಷ್ಟುಹೊತ್ತಿಗೆ ಅಲ್ಲಿಗೆ ಬಂದರು.

೩೫. ಆ ಸೌಂದರ್ಯವತಿಯರನ್ನು ನೋಡಿ ಇದೇನು ಮಹತ್ವವೇನು ಹೇಳುತ್ತ ಆಶ್ಚರ್ಯಪಟ್ಟರು.

೩೬. ಆ ಮೂರು ಜನರೂ ಆ ಹೆಂಗಸರಿಗೆ ನಮಸ್ಕಾರಮಾಡಿದರು. ಅವರ ಕಿರೀಟಮಣಿಯಿಂದ ಇವರ ಪಾದಗಳು ರಂಜಿಸಿದುವು.

ಸಾ ತಾನ್ಪಪ್ರಚ್ಛ ಪುರುಷಾನ್ ಸರ್ವಶ್ರೇಷ್ಠಾ ಸುಭಾಮಿನೀ ।
ಕೇ ಯೂಯಮತ್ರ ಸಂಪ್ರಾಪ್ತಾಃ ಕಥಂ ಚಾಪಧರಾ ನರಾಃ ॥ ೩೭ ॥

ಮತ್ಸ್ಥಲಂ ಸರ್ವದೇವಾನಾಮಗಮ್ಯಂ ಮೋಹನಂ ಮಹತ್ ।
ಅತ್ರ ಪ್ರಾಪ್ತಸ್ಯ ತು ಕ್ವಾಪಿ ನಿವೃತ್ತಿರ್ನಭವೇತ್ಪುನಃ ॥ ೩೮ ॥

ಅಶ್ವೋಽಯಂ ಕಸ್ಯ ರಾಜ್ಞೋ ವೈ ಕಥಂ ಚಾಮರವೀಜನಃ ।
ಸ್ವರ್ಣಪತ್ರೇಣ ಶೋಭಾಢ್ಯಃ ಕಥಯಂತು ಮಮಾಗ್ರತಃ ॥ ೩೯ ॥

॥ ಶೇಷ ಉವಾಚ ॥

ಇತಿ ತಸ್ಯಾ ವಚಶ್ಶ್ರುತ್ವಾ ಮೋಹನಾಕ್ಷರಸಂಯುತಂ ।
ಹನೂಮಾಂಸ್ತಾಂ ಪ್ರತ್ಯುವಾಚ ಗತಭೀಃ ಪ್ರಹಸನ್ನಿವ ॥ ೪೦ ॥

ವಯಂ ವೈ ಕಿಂಕರಾ ರಾಜ್ಞಸ್ತ್ರೈಲೋಕ್ಯಸ್ಯ ಶಿಖಾಮಣೇಃ ।
ತ್ರಿಲೋಕೀ ಯಂ ಪ್ರಣಮತೇ ಸರ್ವದೇವಶಿರೋಮಣಿಂ ॥ ೪೧ ॥

---

೩೭. ಆ ಮುಖ್ಯಳಾದ ಹೆಂಗಸು ಇವರನ್ನು ಕುರಿತು ನೀವು ಯಾರು? ಏಕೆ ಬಂದಿದ್ದೀರಿ? ಧನುಸ್ಸನ್ನೇಕೆ ಧರಿಸಿದ್ದೀರಿ? ಎಂದಳು.

೩೮. ಈ ನನ್ನ ಜಾಗವು ದೇವತೆಗಳೂ ಬರಲಸಾಧ್ಯವಾದುದು. ಹೋಗಲೂ ಅಸಾಧ್ಯವಾದುದು. ಇಲ್ಲಿ ಬಂದವರು ಯಾವರೀತಿಯಲ್ಲಿಯೂ ಹೊರಗೆ ಹೋಗಲಾರರು.

೩೯. ಈ ಕುದುರೆಯು ಯಾವ ರಾಜನದು? ಇದಕ್ಕೆ ಚಾಮರಗಳನ್ನು ಏಕೆ ಕಟ್ಟಿದ್ದೀರಿ? ಹಣೆಯಲ್ಲಿ ಈ ಚಿನ್ನದ ತಗಡೇತಕ್ಕೆ? ನನಗೆ ಹೇಳಿರಿ.

೪೦. ಶೇಷನು ಹೇಳಿದನು :—ಅವಳ ಈ ಒಳ್ಳೆಯ ಮೃದುವಾದ ಮಾತುಗಳನ್ನು ಕೇಳಿ ಹನುಮಂತನು ಹೆದರಿಕೊಳ್ಳದೆ ನಗುತ್ತ ಇಂತೆಂದನು.

೪೧-೪೩. ಮೂರು ಲೋಕವೂ ಯಾವನನ್ನು ನಮಸ್ಕರಿಸುತ್ತದೆಯೋ ಅಂತಹ ಸರ್ವದೇವರಿಗೂ ಶ್ರೇಷ್ಠನಾದ, ರಾಜನಾದ ರಾಮಭದ್ರನ ಆಳುಗಳೆಂದು ನಮ್ಮನ್ನು

ರಾಮಭದ್ರಸ್ಯ ಜಾನೀಧ್ವಂ ಹಯಮೇಧಪ್ರವರ್ತಿತುಃ ।
ಮುಂಚಂತು ವಾಹಮಸ್ಮಾಕಂ ಕಥಂ ಬದ್ಧೋ ವರಾಂಗನೇ ॥ ೪೨ ॥

ವಯಂ ಸರ್ವಾಸ್ತ್ರಕುಶಲಾಃ ಸರ್ವಶಸ್ತ್ರಾಸ್ತ್ರಕೋವಿದಾಃ ।
ನಯಿಷ್ಯಾಮೋ ಬಲಾದ್ವಾಹಂ ಹತ್ವಾ ತತ್ಪ್ರತಿರೋಧಕಾನ್ ॥ ೪೩ ॥

ಇತಿ ವಾಕ್ಯಂ ಸಮಾಕರ್ಣ್ಯ ಪ್ಲವಂಗಸ್ಯ ವರಾಂಗನಾ ।
ವಿವರಸ್ಥಾ ಪ್ರತ್ಯುವಾಚ ಹಸಂತೀ ವಾಕ್ಯಕೋವಿದಾ ॥ ೪೪ ॥

ಮಯಾನೀತಮಿಮಂ ವಾಹಂ ನ ಕೋ ಮೋಚಯಿತುಂ ಕ್ಷಮಃ ।
ವರ್ಷಾಯುತೇನ ನಿಶಿತೈರ್ಬಾಣೈಃ ಕೋಟಿಭಿರುಚ್ಛ್ರಿತೈಃ ॥ ೪೫ ॥

ಪರಂ ರಾಮಸ್ಯ ಪಾದಾಬ್ಜಸೇವಕೀಕರ್ಮಕಾರಿಣೀ ।
ನ ಗ್ರಹೀಷ್ಯಾಮಿ ತದ್ವಾಹಂ ರಾಜರಾಜಸ್ಯ ಧೀಮತಃ ॥ ೪೬ ॥

ಮಹಾನವಿನಯೋ ಜಾತೋ ಮಮ ನೇತ್ರ್ಯಾಸ್ಸುವಾಜಿನಃ ।
ಕ್ಷಮತಾದ್ರಾಮಚಂದ್ರಸ್ತಚ್ಚರಣ್ಯೋ ಭಕ್ತವತ್ಸಲಃ ॥ ೪೭ ॥

---

೪೨. ಅವನು ಅಶ್ವಮೇಧಯಾಗವನ್ನು ಮಾಡುತ್ತಿದಾನೆ. ನಮ್ಮ ಕುದುರೆಯನ್ನು ಬಿಟ್ಟುಬಿಡಿ. ಏಕೆ ಕಟ್ಟಿದಿರಿ ?

೪೩. ನಾವು ಶಸ್ತ್ರಾಸ್ತ್ರವನ್ನು ಚನ್ನಾಗಿ ಬಲ್ಲೆವು. ಸಮಸ್ತ ಶಸ್ತ್ರಗಳು ಅಸ್ತ್ರಗಳು ಇವುಗಳಲ್ಲಿ ಪಂಡಿತರು ಗಟ್ಟಿಗರು ಕುದುರೆಯನ್ನು ತಡೆಯಲು ಬರುವವರನ್ನು ಕೊಂದು ಅದನ್ನು ನಾವು ತೆಗೆದುಕೊಂಡು ಹೋಗುತ್ತೇವೆ.

೪೪. ಕಪಿಯ ಈ ಮಾತನ್ನು ಕೇಳಿ ಆ ಪಾತಾಳದ ಹೆಂಗಸು ನಗುತ್ತಾ ಜಾಣ ತನದಿಂದ ಹೀಗೆ ಹೇಳಿದಳು.

೪೫. ನಾನು ತಂದಿರುವ ಈ ಕುದುರೆಯನ್ನು ಬಿಡಿಸಿಕೊಳ್ಳಲು ಸಾವಿರವರ್ಷ ಗಳಕಾಲ ಹರಿತವಾದ ಬಾಣಗಳಿಂದ ಯುದ್ಧಮಾಡಿದರೂ ಒಬ್ಬನೂ ಬಿಡಿಸಿಕೊಳ್ಳ ಲಾರನು.

೪೬. ಆದರೆ ನಾನು ರಾಮನ ಪಾದಕಮಲಸೇವಕಿಯು, ಅಲ್ಲು. ಆ ಸ್ವಾಮಿಯ ಕುದುರೆಯನ್ನು ಹಿಡಿಯುವುದಿಲ್ಲ.

೪೭. ನಾನು ಆ ಕುದುರೆಯನ್ನು ತಂದುದರಿಂದ ಮಹಾಪರಾಧವಾಯಿತು. ಭಕ್ತವತ್ಸಲನಾದ ಆ ರಾಮನು ನನ್ನ ಈ ತಪ್ಪನ್ನು ಕ್ಷಮಿಸಲಿ.

ಯೂಯಂ ಕ್ಲಿಷ್ಟಾಸ್ತತ್ಪುರುಷಾ ಹಯಾರ್ಥಂ ತಸ್ಯ ರಕ್ಷಿತುಃ ।
ಯಾಚಧ್ವಂ ವರಮಪ್ರಾಪ್ಯಂ ದೇವಾನಾಮಪಿ ಸತ್ತಮಾಃ ॥ ೪೮ ॥

ಯಥಾ ಮೇಽಪರಾಧಮತ್ಯುಗ್ರಂ ಕ್ಷಮೇತ ಪುರುಷೋತ್ತಮಃ ।
ವ್ರೀಡಾಂ ತ್ಯಕ್ತ್ವಾಖಿಲಾಂ ಸರ್ವೇ ವೃಣ್ವಂತು ವರಮುತ್ತಮಂ ॥ ೪೯ ॥

ತಸ್ಯಾ ವಚಃ ಪರಂ ಶ್ರುತ್ವಾ ಹನೂಮಾನ್ನಿಜಗಾದ ತಾಂ ।
ರಘುನಾಥಪ್ರಸಾದೇನ ಸರ್ವಮಸ್ಮಾಕಮೂರ್ಜಿತಂ ॥ ೫೦ ॥

ತಥಾಪಿ ಯಾಚೇ ವರಮೇಕಮುತ್ತಮಂ
ವಿಧೇಹಿ ತನ್ಮೇ ಮನಸಸ್ಸಮಾಹಿತಂ ।
ಭವೇ ಭವೇ ನೋ ರಘುನಾಥಕಃ ಪತಿ-
ರ್ವಯಂ ಚ ತತ್ಕರ್ಮಕರಾಶ್ಚ ಕಿಂಕರಾಃ ॥ ೫೧ ॥

ಏತದ್ವಚಸ್ಸಮಾಕರ್ಣ್ಯ ಪ್ಲವಂಗಸ್ಯ ತದಾಂಗನಾ ।
ಉವಾಚ ವಾಕ್ಯಂ ಮಧುರಂ ಪ್ರಹಸ್ಯ ಗುಣಪೂಜಿತಂ ॥ ೫೨ ॥

---

೪೮. ಆ ರಾಮನ ಸೇವಕರಾದ ನೀವು ಕುದುರೆಗೋಸ್ಕರ ಬಹು ಕಷ್ಟಪಟ್ಟಿರಿ. ದೇವತೆಗಳಿಗೂ ಹೊಂದಲಸಾಧ್ಯವಾದ ವರಗಳನ್ನು ಕೇಳಿಕೊಳ್ಳಿರಿ.

೪೯. ನಮ್ಮ ಈ ಸೇವಕಿಯರು ಹೇಳಿದ ಕೆಟ್ಟಮಾತನ್ನು ಕ್ಷಮಿಸಿರಿ. ನೀವೆಲ್ಲರೂ ನಾಚಿಕೆಯನ್ನು ಬಿಟ್ಟು ವರವನ್ನು ಕೇಳಿಕೊಳ್ಳಿರಿ.

೫೦. ಅವಳ ಆ ಮಾತನ್ನು ಕೇಳಿ ಹನುಮಂತನು ರಾಮನ ಪ್ರಸಾದದಿಂದ ಎಲ್ಲವೂ ನಮಗೆ ಪೂರ್ತಿಯಾಗಿದೆ ಎಂದನು.

೫೧. ಆದರೂ ಕೂಡ ನಮಗೆ ಜನ್ಮಜನ್ಮಕ್ಕೂ ರಾಮನೇ ಒಡೆಯನಾಗಿರುವಂತೆಯೂ, ನಾವು ಅವನ ಆಳಾಗಿರುವಂತೆಯೂ, ವರವನ್ನು ಕೊಡು; ಇದೇ ನಮಗೆ ಇಷ್ಟವಾದ ವರವು ಎಂದನು.

೫೨. ಕಪಿಯ ಈ ಗುಣವುಳ್ಳ ಮಾತನ್ನು ಕೇಳಿ ಆಕೆಯು ನಕ್ಕು ಹೀಗೆಂದಳು.

ಭವದ್ಭಿಃ ಪ್ರಾರ್ಥಿತಂ ಯತ್ತು ದುರ್ಲಭಂ ಸರ್ವದೈವತೈಃ ।
ತದ್ಭವಿಷ್ಯತ್ಯಸಂದೇಹಃ ಸೇವಕಾಸ್ತ್ರದ್ರಘೋಃ ಪತೇಃ ॥ ೫೩ ॥

ಅಥಾಪಿ ವರಮೇಕಂ ವೈ ದಾಸ್ಯಾಮಿ ಕೃತಹೇಳನಾ ।
ರಘುನಾಥಸ್ಯ ತುಷ್ಟ್ಯರ್ಥಂ ತದ್ವೃತಂ ಮೇ ಭವಿಷ್ಯತಿ ॥ ೫೪ ॥

ಅಗ್ರೇ ವೀರಮಣಿರ್ಭೂಪೋ ಮಹಾಬಲಸಮನ್ವಿತಃ ।
ಗ್ರಹೀಷ್ಯತಿ ಭವದ್ವಾಹಂ ಶಿವೇನ ಪರಿರಕ್ಷಿತಃ ॥ ೫೫ ॥

ತಜ್ಜಯಾರ್ಥಂ ಮಹಾಸ್ತ್ರಂ ಮೇ ಗೃಹ್ಣೀತ ಸುಮಹಾಬಲಾಃ ।
ದ್ವೈರಥೇ ಸ ತು ಯೋದ್ಧವ್ಯಃ ಶತ್ರುಘ್ನೇನ ತ್ವಯಾ ಮಹಾನ್ ॥ ೫೬ ॥

ಇದಮಸ್ತ್ರಂ ಯದಾ ತ್ವಂ ತು ಕ್ಷೇಪಯಿಷ್ಯಸಿ ಸಂಗರೇ ।
ಅನೇನ ಪೂತೋ ರಾಮಸ್ಯ ಸ್ವರೂಪಂ ಜ್ಞಾಸ್ಯತೇ ಪುನಃ ॥ ೫೭ ॥

---

೫೩. ನೀವು ಕೇಳಿದುದು ದೇವತೆಗಳಿಗೂ ಅಸಾಧ್ಯವು. ಆದರೆ ಸಂದೇಹ ವಿಲ್ಲದೆ ರಘುಪತಿಯ ಸೇವಕರಾಗಿರುತ್ತೀರಿ. ಸಂದೇಹವಿಲ್ಲ.

೫೪. ಆದರೆ ಸಂಕೋಚದಿಂದ ರಾಮನ ತೃಪ್ತ್ಯರ್ಥವಾಗಿ ಒಂದು ವರವನ್ನು ಕೊಡುತ್ತೇನೆ. ಅದು ನಿಜವಾಗಿ ಫಲಿಸುತ್ತದೆ.

೫೫. ಮುಂದೆ ವೀರಮಣಿಯೆಂಬ ರಾಜನಿರುವನು. ಅವನು ಮಹಾಬಲಿಷ್ಠನು. ಶಿವನೇ ಅವನನ್ನು ಕಾಪಾಡುತ್ತಾನೆ. ಅವನು ನಿಮ್ಮ ಕುದುರೆಯನ್ನು ಹಿಡಿಯುತ್ತಾನೆ.

೫೬. ಅವನನ್ನು ಜಯಿಸಲು ಈ ಮಹಾಸ್ತ್ರವನ್ನು ಕೊಡುತ್ತೇನೆ. ಅವ ನೊಡನೆ ಎರಡು ರಥದಲ್ಲಿದ್ದುಕೊಂಡು ಈ ಶತ್ರುಘ್ನನು ಯುದ್ಧಮಾಡಬೇಕು. ಅವನು ಗಟ್ಟಿಗನು.

೫೭. ನೀನು ಯುದ್ಧದಲ್ಲಿ ಈ ಬಾಣವನ್ನು ಬಿಟ್ಟರೆ ಪರಿಶುದ್ಧನಾಗಿ ರಾಮನ ಸ್ವರೂಪವನ್ನು ಆತನು ಮತ್ತೆ ತಿಳಿಯುತ್ತಾನೆ.

ಜ್ಞಾತ್ವಾ ತಂ ವಾಜಿನಂ ದತ್ವಾ ಚರಣೇ ಪ್ರಪತಿಷ್ಯತಿ ।
ತಸ್ಮಾದ್ಗೃಹ್ಣೀತ ಚಾಸ್ತ್ರಂ ತನ್ಮಮ ವೈರಿವಿದಾರಣಂ ॥ ೫೮ ॥

ತಚ್ಛ್ರುತ್ವಾ ರಘುನಾಥಸ್ಯ ಭ್ರಾತಾ ಜಗ್ರಾಹ ಚಾಸ್ತ್ರಕಂ ।
ಉದಙ್ಮುಖಃ ಪವಿತ್ರಾಂಗೋ ಯೋಗಿನ್ಯಾ ದತ್ತಮದ್ಭುತಂ ॥ ೫೯ ॥

ತತ್ಪ್ರಾಪ್ಯಾಸ್ತ್ರಂ ಮಹಾತೇಜಾ ಬಭೂವ ರಿಪುಕರ್ಕಶಃ ।
ದುಷ್ಪ್ರಧೃಷ್ಯೋ ದುರಾರಾಧ್ಯೋ ವೈರಿವಾರಣಸಚ್ಛೃಣಿಃ ॥ ೬೦ ॥

ತಾಂ ನತ್ವಾ ರಾಘವಶ್ರೇಷ್ಠಃ ಶತ್ರುಘ್ನೋ ಹಯಸತ್ತಮಂ ।
ಗೃಹೀತ್ವಾಗಾಜ್ಜಲಾತ್ತಸ್ಮಾದ್ರೇವಾತೀರೇ ಸುಖೋಚಿತೇ ॥ ೬೧ ॥

ತಂ ದೃಷ್ಟ್ವಾ ಸೈನಿಕಾಸ್ಸರ್ವೇ ಪ್ರಹೃಷ್ಟಾಂಗಾ ಮುದಾನ್ವಿತಾಃ ।
ಸಾಧು ಸಾಧು ಪ್ರಶಂಸಂತಃ ಪಪ್ರಚ್ಛುರ್ಹಯನಿರ್ಗಮಂ ॥ ೬೨ ॥

---

೫೮. ಆಗ ನಿಮ್ಮನ್ನು ತಿಳಿದು ಆ ಕುದುರೆಯನ್ನು ಕೊಟ್ಟು ಪಾದಕ್ಕೆ ಬೀಳುತ್ತಾನೆ. ಆದ್ದರಿಂದ ವೈರಿನಾಶಕವಾದ ಈ ಅಸ್ತ್ರವನ್ನು ತೆಗೆದುಕೋ.

೫೯. ಅದನ್ನು ಕೇಳಿ ಶತ್ರುಘ್ನನು ಉತ್ತರಮುಖವಾಗಿ ಕುಳಿತು ಪವಿತ್ರಾಂಗನಾಗಿ ಆ ಅಸ್ತ್ರವನ್ನು ಯೋಗಿನಿಯಿಂದ ಹೊಂದಿದನು.

೬೦. ಆ ಅಸ್ತ್ರವನ್ನು ಹೊಂದಿ ಆ ಶತ್ರುಘ್ನನು ಮಹಾತೇಜಸ್ಸುಳ್ಳವನಾಗಿಯೂ ಎದುರಿಸಲಸಾಧ್ಯವಾಗಿಯೂ ವೈರಿಗಳೆಂಬ ಆನೆಗೆ ಅಂಕುಶವಾಗಿಯೂ ಆದನು.

೬೧. ಆಕೆಗೆ ನಮಸ್ಕರಿಸಿ ಶತ್ರುಘ್ನನು ಕುದುರೆಯನ್ನು ಹಿಡಿದುಕೊಂಡು ಆ ನೀರಿನಿಂದ ಹೊರಕ್ಕೆ ರೇವಾನದಿಯ ದಡಕ್ಕೆ ಬಂದರು.

೬೨. ಅವನನ್ನು ನೋಡಿ ಸೈನಿಕರೆಲ್ಲರೂ ಸಂತೋಷಗೊಂಡು ಸಾಧು ಸಾಧು ಎಂದು ಹೇಳುತ್ತ ಕುದುರೆಯನ್ನು ಹೇಗೆ ತಂದೆ? ಎಂದು ಕೇಳಿದರು.

**ಹನೂಮಾನ್ಕಥಯಾಮಾಸ ಹಯಸ್ಯಾಗಮನಂ ಮಹತ್ ।**
**ವರಪ್ರಾಪ್ತಿಂ ಚ ತೇಭ್ಯೋ ವೈ ತೇಽಪಿ ಶ್ರುತ್ವಾ ಮುದಂ ಗತಾಃ ॥ ೬೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷ ವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ ಜಲಮಧ್ಯಾ ದ್ವಾಹಪ್ರಾಪ್ತಿರ್ನಾಮ ಅಷ್ಟತ್ರಿಂಶೋಽಧ್ಯಾಯಃ**

---

೬೩. ಹನುಮಂತನು ಕುದುರೆಯ ಬರುವಿಕೆಯನ್ನೆಲ್ಲಾ ಹೇಳಿದನು. ವರ ಪ್ರಾಪ್ತಿಯನ್ನೂ ಹೇಳಿದನು. ಅದನ್ನು ಕೇಳಿ ಅವರು ಸಂತೋಷಪಟ್ಟರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ ಸಂವಾದದ ರಾಮಾಶ್ವಮೇಧದಲ್ಲಿ ನೀರಿನ ಮಧ್ಯದಿಂದ ಕುದುರೆ ಬಂದಿತೆಂಬಲ್ಲಿಗೆ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ಮಹಾಪುರಾಣೇ ಪಾದ್ಮೆ ಪಾತಾಳಖಂಡೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಶೇಷ ಉವಾಚ ॥

ನಿನದತ್ಸು ಮೃದಂಗೇಷು ವೀಣಾನಾದೇನ ಸರ್ವತಃ ।
ಮುಕ್ತೋ ವಾಹಸ್ತತೋ ದೇವಪುರಂ ದೇವವಿನಿರ್ಮಿತಂ ॥ ೧ ॥

ಯತ್ರ ಸ್ಫಾಟಿಕಕುಡ್ಯಾನಾಂ ರಚನಾಭಿರ್ಗೃಹಾ ನೃಣಾಂ ।
ಹಸಂತಿ ವಿಂಧ್ಯಂ ವಿಮಲಂ ಪರ್ವತಂ ನಾಗಸೇವಿತಂ ॥ ೨ ॥

ರಾಜತಾನಿ ಗೃಹಾಣ್ಯತ್ರ ದೃಶ್ಯಂತೇ ಪ್ರಕೃತೇರಪಿ ।
ವಿಚಿತ್ರಮಣಿಸಂನದ್ಧಾ ನಾನಾಮಾಣಿಕ್ಯಗೋಪುರಾಃ ॥ ೩ ॥

---

### ಮೂವತ್ತೊಂಬತ್ತನೆಯ ಅಧ್ಯಾಯವು

೧. ಶೇಷನು ಹೇಳಿದನು :—ಭೇರಿಗಳು ಧ್ವನಿಮಾಡುತ್ತ, ವೀಣೆಯು ನಾದ ಮಾಡುತ್ತಾ ಇರಲು ಕುದುರೆಯು ಬಿಡಲ್ಪಟ್ಟಿತು. ಹಾಗೆ ಬಿಡಲ್ಪಟ್ಟ ಕುದುರೆಯು ದೇವಪುರಕ್ಕೆ ಹೋಯಿತು.

೨. ಆ ಊರಿನಲ್ಲಿ ಸ್ಫಟಿಕಮಣಿಯ ಗೋಡೆಗಳಿಂದಲೇ ಮನುಷ್ಯರ ಮನೆಗಳು ಕಟ್ಟಲ್ಪಟ್ಟಿವೆ. ಆ ಮನೆಗಳು ನಾಗಸೇವಿತವಾದ ವಿಂಧ್ಯಪರ್ವವನ್ನು ಹಾಸ್ಯ ಮಾಡುವಂತಿವೆ.

೩. ಅಲ್ಲಿರತಕ್ಕ ಮನೆಗಳು ಪ್ರಕೃತಿಯ ಬೆಳ್ಳಿಯ ಮನೆಗಳೋ ಎಂಬಂತಿವೆ. ಚಿತ್ರವಿಚಿತ್ರವಾದ ಮಣಿಗಳಿಂದ ಕೂಡಿದ ಮಾಣಿಕ್ಯಗೋಪುರಗಳು ಆ ಮನೆಗಳಲ್ಲಿವೆ.

ಪದ್ಮಿನ್ಯೋ ಯತ್ರ ಲೋಕಾನಾಂ ಗೇಹೇ ಗೇಹೇ ಮನೋಹರಾಃ ।
ಹರಂತಿ ಚಿತ್ತಾನಿ ನೃಣಾಂ ಮುಖಪದ್ಮಕಲಕ್ಷಿತಾಃ ॥ ೪ ॥

ಪದ್ಮರಾಗಮಣಿರ್ಯತ್ರ ಗೇಹೇ ಗೆಹೇ ಸುಭೂಮಿಷು ।
ಬದ್ಧಃ ಸಂಲಕ್ಷ್ಯತೇ ವಿಪ್ರ ತದೋಷ್ಠಸ್ಪರ್ಧಯಾ ನು ಕಿಂ ॥ ೫ ॥

ಕ್ರೀಡಾಶೈಲಾಃ ಪ್ರತ್ಯಗಾರಂ ನೀಲರತ್ನವಿನಿರ್ಮಿತಾಃ ।
ಕುರ್ವಂತಿ ಶಂಕಾಂ ಮೇಘಸ್ಯ ಮಯೂರಾಣಾಂ ಕಲಾಪಿನಾಂ ॥ ೬ ॥

ಹಂಸಾ ಯತ್ರ ನೃಣಾಂ ಗೇಹೇ ಸ್ಫಾಟಿಕೇಷು ನಿಯಂತ್ರಿತಾಃ ।
ಕುರ್ವಂತಿ ಮೇಘಾನ್ನೀ ಭೀತಿಂ ಮಾನಸಂ ಚ ಸ್ಮರಂತಿ ಚ ॥ ೭ ॥

ನಿರಂತರಂ ಶಿವಸ್ಥಾನೇ ಧ್ವಸ್ತಂ ಚಂದ್ರಿಕಯಾತಮಃ ।
ಶುಕ್ಲಕೃಷ್ಣವಿಭೇದೋ ನ ಪಕ್ಷಯೋಸ್ತತ್ರ ವೈ ನೃಣಾಂ ॥ ೮ ॥

---

೪. ಪ್ರತಿಯೊಂದು ಮನೆಯಲ್ಲೂ ಪದ್ಮದಿಂದ ಕೂಡಿದ ಕೊಳಗಳು ಮನೋಹರವಾಗಿದ್ದುಕೊಂಡು ಮುಖದಂತಿರುವ ಪದ್ಮಗಳಿಂದ ಕೂಡಿದಂತೆ ಕಾಣುತ್ತ ಮನುಷ್ಯರ ಮನಸ್ಸನ್ನು ಅಪಹರಿಸುತ್ತಿವೆ.

೫. ಪದ್ಮರಾಗಮಣಿಗಳನ್ನು ಮನೆಮನೆಯಲ್ಲೂ ಭೂಮಿಗೆ ಹದ್ದಿರುವುದನ್ನು ನೋಡಿದರೆ ಅವರ ತುಟಿಗಳೊಡನೆ ಸ್ಪರ್ಧಿಸುತ್ತವೆಯೋ ಎಂಬಂತೆ ಕಾಣುತ್ತವೆ.

೬. ಪ್ರತಿ ಮನೆಯಲ್ಲಿಯೂ ನೀಲರತ್ನಮಣಿಗಳನ್ನು ಹಾಕಿ ಮಾಡಿರುವ ಆಟದ ಬೆಟ್ಟಗಳು ನವಿಲುಗಳಿಗೆ ಮೇಘವೆಂಬ ಸಂದೇಹವನ್ನು ತರುತ್ತವೆ.

೭. ಸ್ಫಟಿಕ ಭೂಮಿಯಲ್ಲಿ ಹಂಸಗಳನ್ನು ನೆಟ್ಟಿರುವುದರಿಂದ ಆ ಸ್ಫಾಟಿಕ ಸ್ಥಳವನ್ನು ನೋಡಿದವರು ಹಂಸವಿರುವುದರಿಂದ ಇದು ಮೇಘವಲ್ಲ. ಮಾನಸ ಸರೋವರದಂತಿದೆ ಎಂದು ಸ್ಮರಿಸುವಂತೆ ಮಾಡುತ್ತವೆ.

೮. ಅಲ್ಲಿ, ಯಾವಾಗಲೂ ಶಿವನಿರುವುದರಿಂದ ಶಿವಸ್ಥಾನವು. ಆ ಶಿವನ ತಲೆಯಲ್ಲಿ ಚಂದ್ರನಿರುವುದರಿಂದ ಚಂದ್ರಿಕೆಯಿಂದ ಕತ್ತಲೆಯು ನಾಶವಾಗಿ ಶುಕ್ಲಕೃಷ್ಣಪಕ್ಷಗಳ ಭೇದವೇ ಆ ಜನರಿಗೆ ಗೊತ್ತಿಲ್ಲ.

ತತ್ರ ವೀರಮಣೀ ರಾಜಾ ಧಾರ್ಮಿಕೇಷ್ವಗ್ರಣೀರ್ಮಹಾನ್ ।
ರಾಜ್ಯಂ ಕರೋತಿ ವಿಪುಲಂ ಸರ್ವಭೋಗಸಮನ್ವಿತಂ ॥ ೯ ॥

ತಸ್ಯ ಪುತ್ರೋ ಮಹಾಶೂರೋ ನಾಮ್ನಾ ರುಕ್ಮಾಂಗದೋ ಬಲೀ ।
ವನಿತಾಭಿರ್ಗತೋ ರಮ್ಯದೇಹಾಭಿಃ ಕ್ರೀಡಿತುಂ ವನಂ ॥ ೧೦॥

ತಾಸಾಂ ಮಂಜೀರಸಂರಾವಃ ಕಂಕಣಾನಾಂ ರವಸ್ತಥಾ ।
ಮನೋ ಹರತಿ ಕಾಮಸ್ಯ ಕಿಮನ್ಯಸ್ಯ ಕಥಾ ಪ್ರಭೋ ॥ ೧೧ ॥

ವನಂ ಜಗಾಮ ಸುಮಹತ್ಸುಪುಷ್ಪನಗಸಂಯುತಂ ।
ಸದಾಶಿವಕೃತಾವಾಸಮೃತುಷಟ್ಕೈರ್ವಿರಾಜಿತಂ ॥ ೧೨ ॥

ಚಂಪಕಾ ಯತ್ರ ಬಹುಶಃ ಫುಲ್ಲಕೋರಕಶೋಭಿತಾಃ ।
ಕುರ್ವಂತಿ ಕಾಮಿನಾಂ ತತ್ರ ಹೃಚ್ಛಯಾರ್ತಿಂ ವಿಲೋಕಿತಾಃ ॥ ೧೩ ॥

---

೯. ಅಲ್ಲಿ ಧಾರ್ಮಿಕನಾದ ವೀರಮಣಿಯೆಂಬುವನು ಸರ್ವಭೋಗಗಳಿಂದ ಕೂಡಿ ರಾಜ್ಯಭಾರಮಾಡುತ್ತಿದ್ದಾನೆ.

೧೦. ಅವನ ಮಗ ಬಲಿಷ್ಠನಾದ ರುಕ್ಮಾಂಗದನೆಂಬುವನು ಸುಂದರಿಯರಾದ ಸ್ತ್ರೀಯರೊಡನೆ ಕ್ರೀಡಿಸಲು ಹೋಗಿದ್ದನು.

೧೧. ಆ ಹೆಂಗಸರ ಕಾಲುಬಳೆಯ ಧ್ವನಿಯೂ ಕೈಬಳೆಯ ನಾದವೂ ಮನ್ಮಥನ ಮನಸ್ಸನ್ನೂ ಅಪಹರಿಸುತ್ತವೆ ಎಂದ ಮೇಲೆ ಮಿಕ್ಕವರಿಗೆ ಹೇಳತಕ್ಕದ್ದೇನು ?

೧೨. ಹೂಬಿಟ್ಟ ಮರಗಳುಳ್ಳ, ಯಾವಾಗಲೂ ನದಿಗಳಿರುವ, ಆರು ಋತುಗಳ ಧರ್ಮವೂ ಯಾವಾಗಲೂ ಇರುವ, ಸದಾ ಶಿವನ ಸ್ಥಾನವಾದ ಒಂದು ದೊಡ್ಡ ವನವನ್ನು ಹೊಂದಿದನು.

೧೩. ಅಲ್ಲಿರುವ ಸಂಪಿಗೆಯ ಮರಗಳು ಮೊಗ್ಗುಗಳಿಂದ ಕೂಡಿ ಕಾಮಿಗಳಿಗೆ ನೋಡಿದೊಡನೆಯೇ ಮನ್ಮಥ ಬಾಧೆಯನ್ನುಂಟುಮಾಡುತ್ತವೆ.

ಚೂತಾಃ ಫಲಾದಿಭಿರ್ನಮ್ರಾ ಮಂಜರೀಕೋಟಿಸಂಯುತಾಃ ।
ನಾಗಾಃ ಪುನ್ನಾಗವೃಕ್ಷಾಶ್ಚ ಶಾಲಾಸ್ತಾಲಾಸ್ತಮಾಲಕಾಃ ॥ ೧೪ ॥

ಕೋಕಿಲಾನಾಂ ಸಮಾರಾವಾ ಯತ್ರ ಚ ಶ್ರುತಿಗೋಚರಾಃ ।
ಸದಾ ಮಧುಪಝುಂಕಾರಗತನಿದ್ರಾಃ ಸುಮಲ್ಲಿಕಾಃ ॥ ೧೫ ॥

ದಾಡೀಮಾನಾಂ ಸಮೂಹಾಶ್ಚ ಕರ್ಣಿಕಾರೈಸ್ಸಮನ್ವಿತಾಃ ।
ಕೇತಕೀಕಾನಕೀವನ್ಯವೃಕ್ಷರಾಜಿವಿರಾಜಿತಾಃ ॥ ೧೬ ॥

ತಸ್ಮಿನ್ವನೇ ಪ್ರಮದಸಂಯುತಚಿತ್ತವೃತ್ತಿ-
ರ್ಗಾಯನ್ಸ್ಕಲಂ ಮಧುರವಾಗ್ವಿಚಿಕೀರ್ಷಯೋಚ್ಚೈಃ ।
ಉದ್ಯತ್ಕುಚಾಭಿರಭಿತೋ ವನಿತಾಭಿರಾಗಾ-
ಚ್ಛೋಭಾನಿಧಾನವಪುರುಜ್ಝಿತಭೀವಿಶೇಷಃ ॥ ೧೭ ॥

ಕಾಶ್ಚಿತ್ತಂ ನೃತ್ತವಿದ್ಯಾಭಿಸ್ತೋಷಯಂತಿ ಸ್ಮ ಶೋಭನಂ ।
ಕಾಶ್ಚಿದ್ಗಾನಕಲಾಭಿಶ್ಚ ಕಾಶ್ಚಿದ್ವಾಕ್ಚತುರೋಚಿತೈಃ ॥ ೧೮ ॥

---

೧೪. ಮಾವಿನ ಮರಗಳು ಫಲದಿಂದ ಕೂಡಿಕೊಂಡು ಅನೇಕ ಗೊಂಚಲುಗಳಿಂದ ಕೂಡಿ ಬಗ್ಗಿಕೊಂಡಿವೆ. ನಾಗಗಳು, ಸುರಹೊನ್ನೆಗಳು, ಸಾಲಗಳು, ತಾಳಗಳು, ಹೊಂಗೆಗಳೂ ಕೂಡ ಫಲಗಳಿಂದ ಭರಿತವಾಗಿವೆ.

೧೫. ಅಲ್ಲಿ ಯಾವಾಗಲೂ ಕೋಗಿಲೆಗಳೂ ಕೂಗುತ್ತಿರುತ್ತವೆ. ಅಲ್ಲಿರುವ ಮಲ್ಲಿಗೆಗಳಲ್ಲಿ ಯಾವಾಗಲೂ ದುಂಬಿಗಳು ಝುಂಕಾರವನ್ನು ಮಾಡುತ್ತಿವೆ. ಅಂತೀ ಮಲ್ಲಿಗೆಯ ಹೂ ಅರಳಿರುತ್ತದೆ.

೧೬. ದಾಡಿಂಬದ ಮರಗಳು ಗುಂಪುಗುಂಪಾಗಿವೆ. ಕರ್ಣಿಕಾರಗಳು ಜೊತೆಗಿದ್ದವೆ. ತಾಳೆಯ ಮರದ ಸಾಲುಸಾಲುಗಳೇ ಇವೆ.

೧೭. ಆ ಕಾಡಿನಲ್ಲಿ ಹೆಂಗಸರೊಡನೆ ಕೂಡಿಕೊಂಡು ಮಧುರವಾಗಿ, ಹಾಡುತ್ತ ಮಾತನಾಡುತ್ತ ಯುವತಿಯರಿಂದ ಸುತ್ತುವರಿಯಲ್ಪಟ್ಟು, ಆ ಸುಂದರನಾದ ರಾಕ್ಷಸ ಭೀತಿಯನ್ನು ಬಿಟ್ಟು ವಿಹರಿಸುತ್ತಿದ್ದನು.

೧೮. ಕೆಲವರು ಹೆಂಗಸರು ಆತನನ್ನು ಕುಣಿತದಿಂದಲೂ ಕೆಲವರು ಗಾನದಿಂದಲೂ ಕೆಲವರು ಚಮತ್ಕಾರವಾದ ಮಾತುಗಳಿಂದಲೂ ಆತನನ್ನು ಸಂತೋಷಪಡಿಸುತ್ತಿದ್ದರು.

ಭ್ರೂಸಂಜ್ಞಯಾ ಪರಾಃ ಕಾಶ್ಚಿತ್ತೋಷಯಾಮಾಸುರುನ್ಮದಾಃ ।
ಪರಿರಂಭಣಚಾತುರ್ಯೈಸ್ತಂ ಸ್ಪೃಷ್ಟಂ ವಿದಧುಃ ಸ್ತ್ರಿಯಃ ॥ ೧೯ ॥

ತಾಭಿಃ ಪುಷ್ಪೋಚ್ಚಯಂ ಕೃತ್ವಾ ಭೂಷಯಾಮಾಸ ತಾಃ ಸ್ತ್ರಿಯಃ ।
ವಾಣ್ಯಾ ಕೋಮಲಯಾ ಶಂಸನ್ರೇಮೇ ಕಾಮವಪುರ್ಧರಃ ॥ ೨೦ ॥

ಏವಂ ಪ್ರವೃತ್ತೇ ಸಮಯೇ ರಾಜರಾಜಸ್ಯ ಧೀಮತಃ ।
ಪ್ರಾಯಾತ್ತದ್ವನದೇಶಂ ಸ ಹಯಃ ಪರಮಶೋಭನಃ ॥ ೨೧ ॥

ತಂ ಸ್ವರ್ಣಪತ್ರರಚಿತೈಕಲಲಾಟದೇಶಂ
ಗಂಗಾಸಮಂ ಘುಸೃಣಕುಂಕುಮಪಿಂಜರಾಂಗಂ ।
ಗತ್ವಾ ಸಮಂ ಪವನವೇಗತಿರಸ್ಕರಿಣ್ಯಾ
ದೃಷ್ಟ್ವಾ ಸ್ತ್ರಿಯಃ ಪರಮಕೌತುಕಧಾಮದೇಹಂ ॥ ೨೨ ॥
ಊಚುಃ ಪತಿಂ ಕಮಲಮಧ್ಯಪಿಶಂಗವರ್ಣಾ-
ಸ್ತಾಮ್ರಾಧರಪ್ರತಿಭಯಾಹತವಿದ್ರುಮಾಭಾಃ ।
ದಂತವ್ರಜಪ್ರಮಿತಹಾಸ್ಯಸುಶೋಭಿವಕ್ತ್ರಾಃ
ಕಾಮಸ್ಯ ಬಾಣನಯನಾದಿವಿಮೋಹನಾಭಾಃ ॥ ೨೩ ॥

---

೧೯. ಕೆಲವರು ಹುಬ್ಬು ಕುಣಿಸುವುದರಿಂದಲೂ ಕೆಲವರು ಆಲಿಂಗನಗಳಿಂದಲೂ ಅವನನ್ನು ಸಂತೋಷಗೊಳಿಸುತ್ತಿದ್ದರು.

೨೦. ಅವರೆಲ್ಲರಿಗೂ ಹೂವನ್ನು ಕೊಯ್ದು ಅಲಂಕರಿಸುತ್ತ, ಒಳ್ಳೆಯ ಮಾತಿನಿಂದ ಹೊಗಳುತ್ತ ಅವರೊಡನೆ ಆತನು ರಮಿಸಿದನು.

೨೧. ಆ ರಾಜನು ಹೀಗೆ ಸುಖಪಡುತ್ತಿರುವಾಗ ಈ ರಾಮಚಂದ್ರನ ಕುದುರೆಯು ಅಲ್ಲಿಗೆ ಹೋಯಿತು.

೨೨. ಆ ಕುದುರೆಯ ಹಣೆಯಲ್ಲಿ ಚಿನ್ನದ ತಗಡು ಕಟ್ಟಿದ್ದಿತು. ಆ ಕುದುರೆಯು ಬೆಳ್ಳಗಿದ್ದಿತು. ದೇಹಕ್ಕೆ ಕುಂಕುಮಕೇಸರಿಯನ್ನು ಅರೆದು ಬಳಿದಿದ್ದರು. ಆದ್ದರಿಂದ ಹೊಂಬಣ್ಣವಾಗಿ ಮನೋಹರವಾಗಿದ್ದಿತು. ವಾಯುವೇಗದಿಂದ ಹೋಗುತ್ತಿದ್ದ ಆ ಕುದುರೆಯನ್ನು ಆ ಸ್ತ್ರೀಯರು ನೋಡಿದರು.

೨೩. ಹೊಂಬಣ್ಣವಾಗಿರುವ, ಹೆದರಿಕೆಯಿಂದ ಮುಖವನ್ನು ಕೆಂಪಗೆಮಾಡಿಕೊಂಡಿರುವ, ಮುಗುಳುನಗೆಯಿಂದ ಕೂಡಿರುವ ಮುಖವುಳ್ಳ, ಕಾಮಬಾಣದಂತಿರುವ ಕಟಾಕ್ಷಗಳಿಂದ ಮನೋಹರರಾದ, ಆ ಹೆಂಗಸರು ಗಂಡನನ್ನು ಕುರಿತು ಇಂತೆಂದರು.

॥ ಸ್ತ್ರಿಯ ಊಚುಃ ॥
ಕಾಂತ ಕೋಽಯಂ ಮಹಾನಶ್ವ ಸ್ವರ್ಣಪತ್ರೈಕಶೋಭಿತಃ ।
ಕಸ್ಯ ವಾ ಭಾತಿ ಶೋಭಾಢ್ಯೋ ಗೃಹಾಣ ಸ್ವಬಲಾದಿಮಂ ॥ ೨೪ ॥

॥ ಶೇಷ ಉವಾಚ ॥
ತದುಕ್ತಂ ವಚ ಆಕರ್ಣ್ಯ ಲೀಲಾಲಲಿತಲೋಚನಃ ।
ಜಗ್ರಾಹ ಹಯಮೇಕೇನ ಕರಪದ್ಮೇನ ಲೀಲಯಾ ॥ ೨೫ ॥

ವಾಚಯಿತ್ವಾ ಭಾಲಪತ್ರಂ ಸ್ಪಷ್ಟವರ್ಣಸಮನ್ವಿತಂ ।
ಜಹಾಸ ಮಹಿಳಾಮಧ್ಯೇ ಜಗಾದ ವಚನಂ ಪುನಃ ॥ ೨೬ ॥

॥ ರುಕ್ಮಾಂಗದ ಉವಾಚ ॥
ಪೃಥಿವ್ಯಾಂ ನಾಸ್ತಿ ಮೇ ಪಿತ್ರಾ ಸಮಶ್ಶೌರ್ಯೇಣ ಚ ಶ್ರಿಯಾ ।
ತಸ್ಮಿನ್ ರಾಜ್ಞಿ ಕಥಂ ಧತ್ತೆ ಉತ್ಸೇಕಂ ರಾಮಭೂಮಿಪಃ ॥ ೨೭ ॥

ಯಸ್ಯ ರಕ್ಷಾಂ ಪ್ರಕುರುತೇ ಸದಾ ರುದ್ರಃ ಪಿನಾಕಭೃತ್ ।
ಯಂ ದೇವಾ ದಾನವಾ ಯಕ್ಷಾ ನಮಂತಿ ಮಣಿಮೌಳಿಭಿಃ ॥ ೨೮ ॥

---

೨೪. ಸ್ತ್ರೀಯರು ಹೇಳಿದರು :—ಪತಿಯೇ, ಚಿನ್ನದ ತಗಡನ್ನು ಹಣೆಯಲ್ಲಿ ಕಟ್ಟಿರುವ ಈ ದೊಡ್ಡ ಕುದುರೆಯು ಯಾವುದು ? ಈ ಕಾಂತಿಯಿಂದ ಕೂಡಿರುವ ಕುದುರೆಯು ಯಾರದಿರಬಹುದು ? ನಿನ್ನ ಬಲದಿಂದ ಇದನ್ನು ಹಿಡಿ.

೨೫. ಶೇಷನು ಹೇಳಿದನು :—ಆತನು ಅವರ ಮಾತನ್ನು ಕೇಳಿ ಒಂದೇ ಒಂದು ಕೈಯಿಂದ ಆ ಕುದುರೆಯನ್ನು ಸರಾಗವಾಗಿ ಹಿಡಿದುತಂದನು.

೨೬. ಆ ತಗಡಿನಲ್ಲಿ ತಿಳಿಯುವಂತಿರುವ ಅಕ್ಷರಗಳನ್ನು ಓದಿ ಆ ಹೆಂಗಸರ ಮಧ್ಯದಲ್ಲಿ ನಗುತ್ತ ಇಂತೆಂದನು.

೨೭. ರುಕ್ಮಾಂಗದನು ಹೇಳಿದನು :—ಭೂಮಂಡಲದಲ್ಲಿ ನನ್ನ ತಂದೆಯ ಶೌರ್ಯವೂ ಸಂಪತ್ತೂ ಮತ್ತೊಬ್ಬನಿಗಿಲ್ಲ. ಇಂತಹವನಿರುತ್ತಿರಲಾಗಿ ರಾಮನು ಹೇಗೆ ತಾನೆ ಈ ಹೆಮ್ಮೆಯನ್ನು ಹೊಂದಿದನು ?

೨೮. ಪ್ರತ್ಯಕ್ಷವಾಗಿ ಶಿವನು ಪಿನಾಕವೆಂಬ ಧನುಸ್ಸನ್ನು ಧರಿಸಿ ನಮ್ಮ ತಂದೆಯನ್ನು ರಕ್ಷಿಸುತ್ತಿದ್ದಾನೆ. ದೇವದಾನವ ಯಕ್ಷರೆಲ್ಲರೂ ನಮ್ಮ ತಂದೆಯನ್ನು ಬಂದು ನಮಸ್ಕರಿಸುತ್ತಿದ್ದಾರೆ.

ಕುರುತಾಪ್ವಾಜಿಮೇಧಂ ವೈ ಜನಕೋ ಮೇ ಮಹಾಬಲಃ ।
ಯಾತ್ವೇಷ ವಾಜಿಶಾಲಾಯಾಂ ಬಧ್ನಂತು ಮಮ ಉದ್ಭಟಾಃ ॥ ೨೯ ॥

ಇತಿ ವಾಕ್ಯಂ ಸಮಾಕರ್ಣ್ಯ ಮಹಿಳಾಸ್ತಾ ಮನೋಹರಾಃ ।
ಪ್ರಹರ್ಷವದನಾ ಜಾತಾಃ ಕಾಂತಂ ತು ಪರಿರೇಭಿರೇ ॥ ೩೦ ॥

ಗೃಹೀತ್ವಾ ತಂ ಹಯಂ ಪುತ್ರೋ ರಾಜ್ಞೋ ವೀರಮಣೇರ್ಮಹಾನ್ ।
ಪುರಂ ಪತ್ನೀಸಮಾಯುಕ್ತೋ ಮಹೋತ್ಸಾಹಮವೀವಿಶತ್ ॥ ೩೧ ॥

ಮೃದಂಗಧ್ವನಿಷು ಪ್ರೋಚ್ಚೈರಾಹತೇಷು ಸಮಂತತಃ ।
ವಂದಿಭಿಸ್ಸಂಸ್ತುವನ್ ಪ್ರಾಗಾತ್ ಸ್ವಪಿತುರ್ಮಂದಿರಂ ಮಹತ್ ॥ ೩೨ ॥

ತಸ್ಮೈ ಸ ಕಥಯಾಮಾಸ ಹಯಂ ನೀತಂ ರಘೋಃ ಪತೇಃ ।
ವಾಜಿಮೇಧಾಯ ನಿರ್ಮುಕ್ತಂ ಸ್ವಚ್ಛಂದಗತಿಮುತ್ತಮಂ ॥ ೩೩ ॥

ರಕ್ಷಿತಂ ಶತ್ರುಸೂದೇನ ಮಹಾಬಲಸಮೇತಿನಾ ।
ತಚ್ಛ್ರುತ್ವಾ ವಚನಂ ತಸ್ಯ ನೃಪೋ ವೀರಮಣಿರ್ಮಹಾನ್ ॥ ೩೪ ॥

ನಾತಿಪ್ರಶಂಸಯಾಮಾಸ ತತ್ಕರ್ಮ ಸುಮಹಾಮತಿಃ ।
ನೀತ್ವಾ ಪುನಃ ಸಮಾಯಾತಂ ಚೋರಸ್ಯೇವ ವಿಚೇಷ್ಟಿತಂ ॥ ೩೫ ॥

---

೨೯. ಶೂರನಾದ ನನ್ನ ತಂದೆಯು ಅಶ್ವಮೇಧಯಾಗವನ್ನು ಮಾಡಲಿ. ಈ ಕುದುರೆಯನ್ನು ಶೂರರಾದ ನನ್ನ ಆಳುಗಳು ಲಾಯದಲ್ಲಿ ಕಟ್ಟಲಿ.

೩೦. ಈ ಶೂರತನದ ಮಾತನ್ನು ಕೇಳಿ ಆ ಹೆಂಗಸರು ಸಂತೋಷದಿಂದ ಈತನನ್ನು ಆಲಂಗಿಸಿಕೊಂಡರು.

೩೧. ವೀರಮಣಿಯ ಮಗನು ಈ ಕುದುರೆಯನ್ನು ಹಿಡಿದು ಸಂತೋಷದಿಂದ ಪತ್ನಿಯರೊಡನೆ ಪಟ್ಟಣಕ್ಕೆ ಹೋದನು.

೩೨. ಮೃದಂಗಗಳನ್ನು ಗಟ್ಟಿಯಾಗಿ ಬಾರಿಸುತ್ತಿರಲು, ವಂದಿಗಳಿಂದ ಹೊಗಳಲ್ಪಡುತ್ತಾ ರುಕ್ಮಾಂಗದನು ತಂದೆಯ ಮನೆಗೆ ಹೋದನು.

೩೩. ಅಶ್ವಮೇಧಕ್ಕೋಸ್ಕರ ಬಿಟ್ಟಿರುವ, ಸ್ವಚ್ಛಂದವಾಗಿ ತಿರುಗುತ್ತಿರುವ, ಶತ್ರುಘ್ನನಿಂದ ರಕ್ಷಿತವಾದ ಆ ಕುದುರೆಯನ್ನು ತಂದಿದ್ದೇನೆಂದು ತಂದೆಗೆ ಹೇಳಿದನು.

೩೪-೩೫. ಕಳ್ಳನ ಹಾಗೆ ಒಬ್ಬರಿಗೂ ತಿಳಿಯದಂತೆ ತಂದ ಆ ಕುದುರೆಯ ವಿಷಯವನ್ನು ಕೇಳಿ ಆ ವೀರಮಣಿಯು ಮಗನನ್ನು ಹೆಚ್ಚಾಗಿ ಅಭಿನಂದಿಸಲಿಲ್ಲ.

**ಕಥಯಾಮಾಸ ಜಾಮಾತ್ರೇ ಶಿವಾಯಾದ್ಭುತಕರ್ಮಣೇ ।**
**ರುಕ್ಮಾಂಗದಧರಾಯಾಂಗಭೂಷಾಯ ಚಂದ್ರಶೋಭಿನೇ　　　॥ ೩೬ ॥**

**ತೇನ ಸಮ್ಮಂತ್ರಯಾಮಾಸ ನೃಪೋ ವೀರಮಣಿರ್ಮಹಾನ್ ।**
**ಪುತ್ರಸೃಷ್ಟಂ ಮಹತ್ಕರ್ಮ ವಿನಿಂದ್ಯಂ ಮಹತಾಂ ಮತಂ　　　॥ ೩೭ ॥**

**॥ ಶಿವ ಉವಾಚ ॥**

**ರಾಜನ್ಪುತ್ರೇಣ ಭವತಃ ಕೃತಂ ಕರ್ಮ ಮಹಾದ್ಭುತಂ ।**
**ಯೋಽಜೀಹರನ್ಮಹಾವಾಹಂ ರಾಮಚಂದ್ರಸ್ಯ ಧೀಮತಃ　　　॥ ೩೮ ॥**

**ಅದ್ಯ ಯುದ್ಧಂ ಮಹದ್ಭಾತಿ ಸುರಾಸುರವಿಮೋಹನಂ ।**
**ಶತ್ರುಘ್ನೇನ ಮಹಾರಾಜ್ಞಾ ವೀರಕೋಟ್ಯೇಕರಕ್ಷಿತುಃ　　　॥ ೩೯ ॥**

**ಮಯಾ ಯೋ ಧ್ಯಾಯತೇ ಸ್ವಾಂತೇ ಜಿಹ್ವಯಾ ಪ್ರೋಚ್ಯತೇ ಹಿ ಯಃ ।**
**ತಸ್ಯ ರಾಮಸ್ಯ ಯಜ್ಞಾಂಗಂ ಜಹಾರ ತವ ಪುತ್ರಕಃ　　　॥ ೪೦ ॥**

---

೩೬. ಸ್ವರ್ಣದ ಒಡವೆಗಳನ್ನು ತೊಟ್ಟು ಚಂದ್ರನಿಂದ ಪ್ರಕಾಶಿಸುವ ಅಳಿಯನಾದ ಶಿವನಿಗೆ ಈ ವಿಷಯವನ್ನು ಅರಿಕೆಮಾಡಿದನು.

೩೭. ರಾಜನಾದ ವೀರಮಣಿಯು ಮಗನು ಮಾಡಿದ ಈ ಅಯೋಗ್ಯಕೆಲಸವನ್ನು ದೇವನಾದ, ಶಿವನೊಡನೆ ಯೋಚಿಸಿದನು.

೩೮. ಶಿವನು ಹೇಳಿದನು:—ಎಲೈ ವೀರಮಣಿಯೇ, ರಾಮಚಂದ್ರನ ಯಾಗದ ಕುದುರೆಯನ್ನು ತಂದ ನಿನ್ನ ಮಗನು ಅದ್ಭುತವಾದ ಕೆಲಸಮಾಡಿದನು. ಮಹಾ ಶೂರನೂ ಆಗಿರುವನು.

೩೯. ವೀರರಿಂದ ಕೂಡಿದ ಶತ್ರುಘ್ನನೊಡನೆ ಈಗ ಸುರಾಸುರರಿಂದಲೂ ಅಭಿನಂದನೀಯವಾದ ಯುದ್ಧವು ನಡೆಯುತ್ತದೆ.

೪೦. ನಾನು ಯಾವ ರಾಮನನ್ನು ಮನಸ್ಸಿನಲ್ಲಿ ಸ್ಮರಿಸುತ್ತ ಬಾಯಿಲ್ಲೂ ಹೇಳುತ್ತಿರುತ್ತೇನೆಯೋ ಅಂತಹ ರಾಮನ ಯಜ್ಞದ ಕುದುರೆಯನ್ನು ನಿನ್ನ ಮಗನು ತಂದಿರುವನು.

ಪರಪುತ್ರ ಮಹಾಲಾಭೋ ಭವಿಷ್ಯತಿ ರಣಾಂಗಣೇ ।
ಯದ್ರಾಮಚರಣಾಂಭೋಜಂ ಪ್ರೇಕ್ಷ್ಯಾಮಃ ಸ್ವೀಯಸೇವಿತಂ ॥ ೪೧ ॥

ಅತ್ರ ಯತ್ನೋ ಮಹಾನ್ಕಾರ್ಯೋ ಹಯಸ್ಯ ಪರಿರಕ್ಷಣೇ ।
ನಯಿಷ್ಯಂತೇ ಬಲಾದ್ವಾಹಂ ಮಯಾ ರಕ್ಷಿತಮಪ್ಯಮುಂ ॥ ೪೨ ॥

ತಸ್ಮಾದಿಮಂ ಮಹಾರಾಜ ರಾಜ್ಯೇನ ಸಹ ಸನ್ನತಃ ।
ವಾಜಿನಂ ಶೋಭನಂ ದತ್ವಾ ಪ್ರೇಕ್ಷಸ್ವಾಂಘ್ರಿಯುಗಂ ತತಃ ॥ ೪೩ ॥

ಇತಿ ವಾಕ್ಯಂ ಸಮಾಕರ್ಣ್ಯ ಶಿವಸ್ಯ ಸ ನೃಪೋತ್ತಮಃ ।
ಉವಾಚ ತಂ ಸುರೇಂದ್ರಾದಿವಂದ್ಯಪಾದಾಂಬುಜದ್ವಯಂ ॥ ೪೪ ॥

॥ ವೀರಮಣಿರುವಾಚ ॥

ಕ್ಷತ್ರಿಯಾಣಾಮಯಂ ಧರ್ಮೋ ಯತ್ಪ್ರತಾಪಸ್ಯ ಲಕ್ಷಣಂ ।
ತದಸೌ ಕ್ರಾಂತುಮುದ್ಯುಕ್ತಃ ಕ್ರತುನಾ ಹಯಸಂಜ್ಞಿನಾ ॥ ೪೫ ॥

---

೪೧. ನಾವು ಯಾವಾಗಲೂ ಭಜಿಸುವ ರಾಮನ ಪಾದಪದ್ಮವನ್ನು ನೋಡುವ ಮಹಾಲಾಭವು ಈ ಯುದ್ಧದಿಂದ ಉಂಟಾಗುತ್ತದೆ.

೪೨. ನಾನು ರಕ್ಷಿಸುತ್ತಿದ್ದರೂ ಬಲಾತ್ಕಾರದಿಂದ ಕುದುರೆಯನ್ನು ಕೊಂಡು ಹೋಗುತ್ತಾರಾದ್ದರಿಂದ ಇದರ ಕಾವಲಿಗೆ ಬಲವಾದ ಪ್ರಯತ್ನಗಳನ್ನು ನಡೆಸಬೇಕು.

೪೩. ಆದ್ದರಿಂದ ರಾಜ್ಯದೊಡನೆ ಈ ಅಶ್ವಮೇಧದ ಕುದುರೆಯನ್ನು ಶತ್ರುಘ್ನನಿಗೆ ಒಪ್ಪಿಸಿಬಿಟ್ಟು ಅನಂತರ ಆ ರಾಮಚಂದ್ರನ ಪಾದಪದ್ಮವನ್ನು ದರ್ಶಿಸು.

೪೪. ಶಿವನು ಹೀಗೆ ಹೇಳಿದುದನ್ನು ಕೇಳಿ ವೀರಮಣಿಯು ದೇವತೆಗಳಿಂದ ನಮಸ್ಕರಿಸಲ್ಪಡುವ ಆ ಶಿವನಿಗೆ ಇಂತೆಂದನು.

೪೫. ವೀರಮಣಿಯು ಹೇಳಿದನು :—ಈ ಕುದುರೆಯನ್ನು ಹಿಡಿದುದು ಕ್ಷತ್ರಿಯರಿಗೆ ಧರ್ಮವು. ಇದು ಪ್ರತಾಪಕ್ಕೆ ಲಕ್ಷಣವು. ನೀನು ಯಾಗದ ಕುದುರೆ ಎಂಬ ನೆಪದಿಂದ ಆ ಕ್ಷತ್ರಿಯ ಧರ್ಮವನ್ನು ಮೀರುವಂತೆ ಮಾಡುತ್ತಿ.

ತಸ್ಮಾದ್ರಕ್ಷ್ಯಃ ಸ್ವಪ್ರತಾಪೋ ಯೇನ ಕೇನಾಪಿ ಮಾನಿನಾ ।
ಯಾವಚ್ಛಕ್ಯಂ ಕರ್ಮ ಕೃತ್ವಾ ಶರೀರವ್ಯಯಕಾರಕಂ ॥ ೪೬ ॥

ಸರ್ವಂ ಕೃತಂ ಸುತೇನೇದಂ ಗೃಹೀತೋಽಶ್ವಃ ಪುನರ್ಯತಃ ॥
ಕೋಪಿತಂ ರಾಮಭೂಪಾಲಂ ಸಮಯಾರ್ಹಂ ಕುರು ಪ್ರಭೋ ॥ ೪೭ ॥

ಕ್ಷತ್ರಿಯಾಣಾಮಿದಂ ಕರ್ಮ ಕರ್ತವ್ಯಾರ್ಹಂ ಭವೇನ್ನ ಹಿ ।
ಯದಕಸ್ಮಾದ್ರಿಪೋಃ ಪಾದೌ ಪ್ರಣಮೇದ್ಭಯವಿಹ್ವಲಃ ॥ ೪೮ ॥

ರಿಪವೋ ವಿಹಸಂತ್ಯೇನಂ ಕಾತರೋಽಯಂ ನೃಪಾಧಮಃ ।
ಕ್ಷುದ್ರಃ ಪ್ರಾಕೃತವನ್ನೀಚೋ ನತವಾನ್ ಭಯವಿಹ್ವಲಃ ॥ ೪೯ ॥

ತಸ್ಮಾದ್ಭವಾನ್ಯಥಾಯೋಗ್ಯಂ ಯೋದ್ಧವ್ಯೇ ಸಮುಪಸ್ಥಿತೇ ।
ಯದ್ವಿಧೇಯಂ ವಿಚಾರ್ಯೈವಂ ಕರ್ತವ್ಯಂ ಭಕ್ತರಕ್ಷಣಂ ॥ ೫೦ ॥

---

೪೬. ಆದ್ದರಿಂದ ಏನೇ ಆಗಲಿ, ಯಾವ ರೀತಿಯಿಂದಾದರೂ ಸಾಧ್ಯವಾದಷ್ಟು ಮಟ್ಟಿಗೆ, ಕೊನೆಗೆ ಶರೀರವು ಬೀಳುವವರೆಗೆ ಪ್ರಯತ್ನಮಾಡಿ ನಮ್ಮ ಪ್ರತಾಪವನ್ನು ಕಾಪಾಡಿಕೊಳ್ಳಬೇಕು.

೪೭. ಮಗನು ಈ ಕುದುರೆಯನ್ನು ಹಿಡಿದುದರಿಂದ ಇದೆಲ್ಲವೂ ಪ್ರಾಪ್ತ ವಾಯಿತು. ಕೋಪಿತನಾದ ರಾಮನಿಗೆ ನನ್ನೊಡನೆ ಸಂಧಿಯಾಗುವಂತೆ ಮಾಡು.

೪೮. ಕ್ಷತ್ರಿಯರ ಈ ಕರ್ತವ್ಯಕರ್ಮವನ್ನು ಪಾಲಿಸಿದಂತಾಗಬೇಡವೆ? ಆದ್ದರಿಂದ ಅಕಸ್ಮಾತ್ತಾಗಿ ಕೋಪಗೊಳಿಸಿದ ರಾಮನ ಪಾದಗಳನ್ನು ಭಯದಿಂದ ನಮಸ್ಕರಿಸಿದಂತಾಗಬಾರದು.

೪೯. ಇವನು ಕಾತರನು, ನೃಪಾಧಮ, ಕ್ಷುದ್ರನು, ಮೂರ್ಖನು, ನೀಚನು, ಭಯಸ್ಥನು, ದೆಡ್ಡರಂತೆ ಶರಣಾಗತನಾದನೆಂದು ಶತ್ರುಗಳು ಹಾಸ್ಯಮಾಡುತ್ತಾರೆ.

೫೦. ಯುದ್ಧವು ಪ್ರಾಪ್ತವಾದಾಗ್ಯೆ ಭಕ್ತರಕ್ಷಣೆಯನ್ನು ಹ್ಯಾಗೆ ಮಾಡಬೇಕೋ ಆರೀತಿ ವಿಚಾರಮಾಡಿ ಕಾಪಾಡು.

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಚಂದ್ರಚೂಡೋऽವದದ್ವಚಃ ।
ಪ್ರಹಸನ್ಮೇಘಗಂಭೀರವಾಣ್ಯಾ ಸಂಮೋಹಯನ್ಮನಃ ॥ ೫೧ ॥

ಯದಿ ದೇವಾಸ್ತ್ರಯಸ್ತ್ರಿಂಶತ್ಕೋಟಯಃ ಸಮುಪಸ್ಥಿತಾಃ ।
ತಥಾಪಿ ತ್ವತ್ತಃ ಕೇನಾಶ್ವೋ ಗೃಹ್ಯತೇ ಮಮ ರಕ್ಷಿತುಃ ॥ ೫೨ ॥

ಯದಿ ರಾಮಸ್ಸಮಾಗತ್ಯ ಸ್ವಾತ್ಮಾನಂ ದರ್ಶಯಿಷ್ಯತಿ ।
ತದಾಹಂ ಚರಣೌ ತಸ್ಯ ಪ್ರಣಮಾಮಿ ಸುಕೋಮಲೌ ॥ ೫೩ ॥

ಸ್ವಾಮಿನಾ ಸಹ ಯೋದ್ಧವ್ಯಂ ಮಹಾನನಯ ಉಚ್ಯತೇ ।
ಅನ್ಯೇ ವೀರಾಸ್ತೃಣಪ್ರಾಯಾಃ ಕಿಂಚಿತ್ಕರ್ತುಂ ನ ವೈ ಕ್ಷಮಾಃ ॥ ೫೪ ॥

ತಸ್ಮಾದ್ಯುಧ್ಯಸ್ವ ರಾಜೇಂದ್ರ ರಕ್ಷಕೇ ಮಯಿ ಸಂಸ್ಥಿತೇ ।
ಕೋ ಗೃಹ್ಣಾತಿ ಬಲಾದ್ವಾಹಂ ತ್ರಿಲೋಕೀ ಯದಿ ಸಂಗತಾ ॥ ೫೫ ॥

---

೫೧. ಶೇಷನು ಹೇಳಿದನು :—ಈ ಮಾತನ್ನು ಕೇಳಿ ಶಿವನು ಪ್ರೀತಿಕರವಾಗಿ ನಗುತ್ತ ಗಂಭೀರವಾದ ಮಾತಿನಿಂದ ಇಂತೆಂದನು.

೫೨. ನಾನು ಅಶ್ವವನ್ನು ರಕ್ಷಿಸುತ್ತಿರಲಾಗಿ ಮೂವತ್ತಮೂರು ಕೋಟಿ ದೇವತೆಗಳು ಬಂದರೂ ಆ ಕುದುರೆಯನ್ನು ಹಿಡಿಯಲಾರರು.

೫೩. ರಾಮನೇ ಸಾಕ್ಷಾತ್ತಾಗಿ ಬಂದು ಕಾಣಿಸಿಕೊಂಡರೆ ಆಗ ನಾನು ಅವನ ಪಾದಗಳನ್ನು ನಮಸ್ಕರಿಸುತ್ತೇನೆ.

೫೪. ಸ್ವಾಮಿಯೊಡನೆ ಯುದ್ಧಮಾಡುವುದು ಅಯೋಗ್ಯತನವೆಂದು ಹೇಳಿದೆ. ಮಿಕ್ಕ ವೀರರು ಹುಲ್ಲಿಗೆ ಸಮಾನರು. ಏನೂ ಮಾಡಲಾರರು.

೫೫. ಆದ್ದರಿಂದ ನಾನು ರಕ್ಷಕನಾಗಿರುತ್ತೇನೆ. ನೀನು ಯುದ್ಧಮಾಡು. ನಾನಿರುವಾಗ ಮೂರು ಲೋಕವೇ ಬಂದರೂ ಕುದುರೆಯನ್ನು ಹಿಡಿಯಲಾರರು.

॥ ಶೇಷ ಉವಾಚ ॥
ಏತದ್ವಚಃ ಪರಂ ಶ್ರುತ್ವಾ ಚಂದ್ರಚೂಡಸ್ಯ ಭೂಮಿಪಃ ।
ಜಹರ್ಷ ಮಾನಸೇಽತ್ಯಂತಂ ಯುದ್ಧಕರ್ಮಣಿ ಕೌತುಕೀ    ॥ ೪೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನ ಸಂವಾದೇ ಸೊಮಾಶ್ವಮೇಧೇ
ಹಯಗ್ರಹಣಂ ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

೫೬. ಶೇಷನು ಹೇಳಿದನು:—ಈಶ್ವರನ ಮಾತನ್ನು ಕೇಳಿ ವೀರಮಣಿಯು ಸಂತೋಷಪಟ್ಟು ಯುದ್ಧದಲ್ಲಿ ಆಸಕ್ತನಾದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಹಯಗ್ರಹಣವೆಂಬ
ಮೂವತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ಮಹಾಪುರುಣೇ ಪಾದ್ಮೇ ಪಾತಾಳಖಂಡೇ

## ಚತ್ವಾರಿಂಶೋಽಧ್ಯಾಯಃ

---

॥ ಶೇಷ ಉವಾಚ ॥

**ಸೇನಾಚರಾ ಮಹಾರಾಜ್ಞೋ ಮಹಾಬಲಸಮೇತಿನಃ ।**
**ಸಮಾಗತಂ ತಂ ಪಶ್ಯಂತೋ ಹಯಂ ರಾಮಸ್ಯ ಭೂಪತೇಃ ॥ ೧ ॥**

**ಕೋಽಸಾವಶ್ವಃ ಕೇನ ನೀತಃ ಕಥಂ ವಾ ದೃಶ್ಯತೇ ನ ಸಃ ।**
**ಕೋ ಗಂತಾ ಯಮಪುರ್ಯಾಂ ವೈ ವಾಹಂ ಹೃತ್ವಾ ಸಮುಂದಧೀಃ ॥ ೨ ॥**

**ವಿಲೋಕಯಂತಸ್ತನ್ಮಾರ್ಗಂ ಯಾವತ್ಸೇನಾಚರಾ ರಘೋಃ ।**
**ತಾವತ್ಪ್ರಾಪ್ತೋ ಮಹಾರಾಜೋ ಮಹಾಸೈನ್ಯಪರಿವೃತಃ ॥ ೩ ॥**

---

## ನಾಲ್ವತ್ತನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಶತ್ರುಘ್ನನ ಸೇನೆಯವರು ಹಯವನ್ನು ಹುಡು ಕುತ್ತಾ ಅದೆಲ್ಲಿಗೆ ಹೋಗಿದೆ ಎಂಬುದನ್ನು ತಿಳಿಯದೆ ಬರುತ್ತಿದ್ದರು.

೨. ಯಾರು ಕುದುರೆಯನ್ನು ಹಿಡಿದಿರಬಹುದು ? ಕಾಣದಿರಲು ಕಾರಣ ವೇನು ? ಆ ಕುದುರೆಯನ್ನು ಕೊಂಡೊಯ್ದು ಯಮಪುರಕ್ಕೆ ಹೋಗಲು ಯಾವನು ತಾನೆ ಸಿದ್ಧನಾಗಿರುವನು ?

೩. ಸೈನಿಕರು ಆ ಕುದುರೆಯ ದಾರಿಯನ್ನು ನೋಡುತ್ತ ಬರುವಷ್ಟರಲ್ಲಿ ಶತ್ರು ಘ್ನನೂ ದೊಡ್ಡ ಸೈನ್ಯದೊಡನೆ ಅಲ್ಲಿಗೆ ಬಂದನು.

ಪಪ್ರಚ್ಛ ಸೇವಕಾನ್ಸರ್ವಾನ್ ಕುತ್ರಾಶ್ವೋ ಮಮ ಸಾಂಪ್ರತಂ ।
ನ ದೃಶ್ಯತೇ ಕಥಂ ವಾಹಃ ಸ್ವರ್ಣಪತ್ರಸುಶೋಭಿತಃ ॥ ೪ ॥

ಇತಿ ತದ್ವಚನಂ ಶ್ರುತ್ವಾ ಸೇವಕಾಸ್ತೇ ಹಯಾನುಗಾಃ ।
ಪ್ರೋಚುರ್ನಾಥ ಮಹಾವೇಗೋ ವಾಹಃ ಕೇನಾಪಿ ಕಾನನೇ ॥ ೫ ॥

ಹೃತೋ ನ ಲಕ್ಷ್ಯತೇ ತಸ್ಮಾದಸ್ಮಾಭಿರ್ಮಾರ್ಗಕೋವಿದೈಃ ।
ತದತ್ರ ಯತ್ನಃ ಕರ್ತವ್ಯೋ ಹಯಪ್ರಾಪ್ತಿಂ ಪ್ರತಿ ಪ್ರಭೋ ॥ ೬ ॥

ತೇಷಾಂ ವಚನಮಾಕರ್ಣ್ಯ ಪಪ್ರಚ್ಛ ಸುಮತಿಂ ನೃಪಃ ।
ಶತ್ರುಘ್ನಶ್ಶತ್ರುಸಂಹಾರಕಾರೀ ಮೋಹನರೂಪಧೃತ್ ॥ ೭ ॥

॥ ಶತ್ರುಘ್ನ ಉವಾಚ ॥

ಕೋತ್ರ ರಾಜಾ ನಿವಸತಿ ಕಥಂ ವಾಹಸ್ಯ ಸಂಗಮಃ ।
ಕಿಯದ್ಬಲಂ ಭೂಮಿಪತೇರ್ಯೇನ ಮೇಧ್ಯ ಹೃತೋ ಹಯಃ ॥ ೮ ॥

॥ ಸುಮತಿರುವಾಚ ॥

ರಾಜನ್ದೇವಪುರಂ ಹ್ಯೇತದ್ದೇವೇನೈವ ವಿನಿರ್ಮಿತಂ ।
ಕೈಲಾಸಮಿವ ದುರ್ಗಮ್ಯಂ ವೈರಿಸಂಘೈಃ ಸುಸಂಹತೈಃ ॥ ೯ ॥

---

೪. ಸೇವಕರನ್ನು ಕುರಿತು ನನ್ನ ಯಾಗದ ಕುದುರೆಯು ಈಗ ಎಲ್ಲಿ ಹೋಯಿತು ? ಏಕೆ ಕಾಣುವುದಿಲ್ಲ ? ಎಂದು ಕೇಳಿದನು.

೫-೬. ಶತ್ರುಘ್ನನ ಈ ಮಾತನ್ನು ಕೇಳಿ ಆ ಸೇವಕರು ಸ್ವಾಮಿಾ ! ಮನೋವೇಗವುಳ್ಳ ಈ ಕುದುರೆಯನ್ನು ಈ ಕಾಡಿನಲ್ಲಿ ಯಾರೋ ಹಿಡಿದಿರಬೇಕು, ಕಾಣುತ್ತಿಲ್ಲ. ನಾವೂ ದಾರಿಯನ್ನು ನೋಡುತ್ತಲೇ ಬಂದೆವು. ಹುಡುಕುತ್ತೇವೆ, ಎಂದರು.

೭. ಅವರ ಮಾತನ್ನು ಕೇಳಿ ಶೂರನಾದ ಶತ್ರುಘ್ನನು ಸುಮತಿಯನ್ನು ಇಂತು ಕೇಳಿದನು.

೮. ಶತ್ರುಘ್ನನು ಹೇಳಿದನು:—ಇಲ್ಲಿ ವಾಸಮಾಡುವ ರಾಜನಾರು ? ಕುದುರೆಯನ್ನು ಹೊಂದುವುದು ಹೇಗೆ ? ಇವನ ಬಲವೆಷ್ಟು ? ನನ್ನ ಕುದುರೆಯನ್ನು ಹಿಡಿಯಲು ಕಾರಣವೇನು ?

೯. ಸುಮತಿಯು ಹೇಳಿದನು :—ಎಲೈ ದೊರೆಯೆ ! ಇದು ದೇವಪುರವು. ಇದು ದೇವತೆಗಳಿಂದ ನಿರ್ಮಿತವಾದುದು. ದುರ್ಜನರಿಂದ ಹೇಗೆ ಕೈಲಾಸವು ಹೋಗಲಸಾಧ್ಯವೋ ಹಾಗೆ ಇದೂ ವೈರಿಗಳಿಂದ ಹೊಗಲಸಾಧ್ಯವು.

ಅಸ್ಮಿನ್ವೀರಮಣೀ ರಾಜಾ ಮಹಾಶೂರಃ ಪ್ರತಾಪವಾನ್ ।
ರಾಜ್ಯಂ ಕರೋತಿ ಧರ್ಮೇಣ ಶಿವೇನ ಪರಿರಕ್ಷಿತಃ ॥ ೧೦ ॥

ಯೋಽಸೌ ಪ್ರಳಯಕಾರೀ ಸ ಆಸ್ತೇ ಭಕ್ತ್ಯಾ ವಶೀಕೃತಃ ।
ಚಂದ್ರಚೂಡಸ್ಸ್ವಭಕ್ತಸ್ಯ ಪಕ್ಷಪಾತಂ ಸೃಜನ್ಸದಾ ॥ ೧೧ ॥

ಸ್ಯಾತ್ತತ್ರ ಮಹದ್ಯುದ್ಧಂ ಗೃಹೀತಶ್ಚೇದ್ಭವಿಷ್ಯತಿ ।
ಯತ್ನಾತ್ಸಂತಃ ಪ್ರಕುರ್ವಂತು ರಕ್ಷಣಂ ಕಟಕಸ್ಯ ಹಿ ॥ ೧೨ ॥

ಏವಂ ಶ್ರುತ್ವಾ ಸ ಶತ್ರುಘ್ನಃ ಸರ್ವಭೂಪಶಿರೋಮಣಿಃ ।
ಸೈನ್ಯವ್ಯೂಹಂ ರಚಿತ್ವಾಸೌ ತಿಷ್ಠತಿ ಸ್ಮ ಮಹಾಯಶಾಃ ॥ ೧೩ ॥

ಅಥ ತಂ ಸುಖಮಾಸೀನಂ ಮಂತ್ರಯಂತಂ ಸುಮಂತ್ರಿಣಾ ।
ಆಜಗಾಮ ಸ ದೇವರ್ಷಿರ್ಯುದ್ಧಕೌತುಕಸಂಯುತಃ ॥ ೧೪ ॥

ತಮಾಗತಂ ಮುನಿಂ ದೃಷ್ಟ್ವಾ ಶತ್ರುಘ್ನಸ್ತಪಸಾಂ ನಿಧಿಂ ।
ಅಭ್ಯುತ್ಥಾಯಾಸನೇ ಸ್ಥಾಪ್ಯ ಮಧುಪರ್ಕಮಥಾಚರತ್ ॥ ೧೫ ॥

---

೧೦. ಇಲ್ಲಿ ಮಹಾಶೂರನಾದ ವೀರಮಣಿಯೆಂಬ ರಾಜನು ಶಿವನಿಂದ ರಕ್ಷಿತನಾಗಿ ರಾಜ್ಯವನ್ನು ಆಳುತ್ತಿದ್ದಾನೆ.

೧೧. ಪ್ರಳಯವನ್ನು ಮಾಡುವ ರುದ್ರನು ವೀರಮಣಿಯ ಭಕ್ತಿಯಿಂದ ಅವನಿಗೆ ವಶೀಕೃತನಾಗಿ ಅವನಲ್ಲಿ ಪ್ರೀತಿಯನ್ನು ತೋರುತ್ತ ಅವನ ಪಟ್ಟಣದಲ್ಲಿಯೇ ಇದ್ದಾನೆ.

೧೨. ಇವನು ಹಿಡಿದಿದ್ದರೆ ಇವನೊಡನೆ ಬಹು ದೊಡ್ಡ ಯುದ್ಧವಾಗುತ್ತದೆ. ಆದ್ದರಿಂದ ಬುದ್ಧಿವಂತಿಕೆಯಿಂದ ಶಿಬಿರವನ್ನು ಕಾಪಾಡಿರಿ.

೧೩. ಇದನ್ನು ಕೇಳಿ ರಾಜನಾದ ಶತ್ರುಘ್ನನು ವ್ಯೂಹವನ್ನು ರಚಿಸಿ ಎಚ್ಚರಿಕೆಯಿಂದ ಕಾಯುತ್ತಿದ್ದನು.

೧೪. ಶತ್ರುಘ್ನನು ಮಂತ್ರಿಯೊಡನೆ ಮಾತನಾಡುತ್ತ ಕುಳಿತಿರುವಾಗ ದೇವರ್ಷಿಯಾದ ನಾರದನು ಅಲ್ಲಿಗೆ ಬಂದನು.

೧೫. ಆ ಋಷಿಯು ಬರಲು ಶತ್ರುಘ್ನನು ಎದುರುಗೊಂಡು ಪೀಠದಲ್ಲಿ ಕೂರಿಸಿ ಮಧುಪರ್ಕವನ್ನು ಕೊಟ್ಟನು.

ಸ್ವಾಗತೇನ ಚ ಸಂತುಷ್ಟಂ ನಾರದಂ ಮುನಿಸತ್ತಮಂ ।
ಉವಾಚ ಪ್ರೀಣಯನ್ವಾಚಾ ವಾಕ್ಯವಾದವಿಶಾರದಃ ॥ ೧೬ ॥

॥ ಶತ್ರುಘ್ನ ಉವಾಚ ॥

ಮದೀಯೋಽಶ್ವಃ ಕುತ್ರ ವಿಪ್ರ ಕಥಯಸ್ವ ಮಹಾಮತೇ ।
ನ ಲಕ್ಷ್ಯತೇ ಗತಿಸ್ತಸ್ಯ ಸೇವಕೈರ್ಮಾಮ ಕೋವಿದೈಃ ॥ ೧೭ ॥

ಶಂಸ ತಂ ಯೇನ ವಾ ನೀತಂ ಕ್ಷತ್ರಿಯೇಣ ಚ ಮಾನಿನಾ ।
ಕಥಂ ತತ್ರ ಹಯಪ್ರಾಪ್ತಿರ್ಭವಿಷ್ಯತಿ ತಪೋಧನ ॥ ೧೮ ॥

ಇತಿ ವಾಕ್ಯಂ ಸಮಾಕರ್ಣ್ಯ ಶತ್ರುಘ್ನಸ್ಯ ಸ ನಾರದಃ ।
ಉವಾಚ ವೀಣಾಂ ರಣಯನ್ ಗಾಯನ್ ರಾಮಕಥಾಂ ಮುಹುಃ ॥ ೧೯ ॥

॥ ನಾರದ ಉವಾಚ ॥

ಏತದ್ದೇವಪುರೇ ರಾಜನ್ ಭೂಪೋ ವೀರಮಣಿರ್ಮಹಾನ್ ।
ತತ್ಪುತ್ರೇಣ ವನಸ್ಥೇನ ಗೃಹೀತಸ್ತವ ವಾಜಿರಾಟ್ ॥ ೨೦ ॥

---

೧೬. ಸಂತೋಷದಿಂದ ಕುಳಿತಿರುವ ನಾರದನನ್ನು ಕುರಿತು ಶತ್ರುಘ್ನನು ಇಂತೆಂದನು.

೧೭. ಶತ್ರುಘ್ನನು ಹೇಳಿದನು :—ನಾರದರೆ! ನನ್ನ ಕುದುರೆಯು ಎಲ್ಲಿ ಹೋಯಿತು? ಹೇಳಿ. ನನ್ನ ಸೇವಕರು ಜಾಗರೂಕತೆಯಿಂದಿದ್ದರೂ ಗೊತ್ತಾಗ ಲಿಲ್ಲವಲ್ಲ?

೧೮. ಎಲೈ ತಪೋಧನನೇ! ಯಾವ ಶೂರನಾದ ಕ್ಷತ್ರಿಯನು ಕಟ್ಟಿರು ವನು? ಅಲ್ಲಿ ಕುದುರೆಯು ಹೇಗೆ ದೊರಕುವುದು?

೧೯. ಶತ್ರುಘ್ನನ ಈ ಮಾತನ್ನು ಕೇಳಿ ನಾರದನು ವೀಣೆಯನ್ನು ಬಾರಿಸಿ ರಾಮನಾಮವನ್ನು ಗಾನಮಾಡುತ್ತ ಇಂತೆಂದನು.

೨೦. ನಾರದನು ಹೇಳಿದನು :—ಈ ದೇವಪುರದಲ್ಲಿ ವೀರಮಣಿಯೆಂಬ ರಾಜ ನಿದ್ದಾನೆ. ಅವನ ಮಗನು ಕಾಡಿನಲ್ಲಿದ್ದಾಗ ನಿನ್ನ ಕುದುರೆಯನ್ನು ಹಿಡಿದನು.

ತತ್ರ ಯುದ್ಧಂ ಮಹತ್ತ್ವೇಽದ್ಯ ಭವಿಷ್ಯತಿ ಸುದಾರುಣಂ ।
ಅತ್ರ ವೀರಾಃ ಪತಿಷ್ಯಂತಿ ಬಲಶೌರ್ಯಸಮನ್ವಿತಾಃ ॥ ೨೧ ॥

ತಸ್ಮಾದತ್ರ ಮಹಾಯತ್ನಾತ್ ಸ್ಥಾತವ್ಯಂ ತೇ ಮಹಾಬಲ ।
ರಚಯ ವ್ಯೂಹರಚನಾಂ ದುರ್ಗಮಾಂ ಪರಸೈನಿಕೈಃ ॥ ೨೨ ॥

ಜಯಸ್ತೇ ಭವಿತಾ ರಾಜನ್ ಕೃಚ್ಛ್ರೇಣ ತು ನೃಪೋತ್ತಮಾತ್ ।
ರಾಮಂ ಕೋ ನು ಪರಾಜೀಯಾದ್ಭುವನೇ ಸಕಲೇಽಪಿ ವಾ ॥ ೨೩ ॥

ಇತ್ಯುಕ್ತ್ವಾಂತರ್ದಧೇ ವಿಪ್ರೋ ನಭಸಿ ಸ್ಥಿತವಾಂಸ್ತತಃ ।
ಯುದ್ಧಂ ಸುದಾರುಣಂ ದ್ರಕ್ಷ್ಯನ್ ದೇವದಾನವಯೋರಿವ ॥ ೨೪ ॥

॥ ಶೇಷ ಉವಾಚ ॥

ಅಥ ರಾಜಾ ವೀರಮಣಿಃ ಸರ್ವಶೂರಶಿರೋಮಣಿಃ ।
ಪಟಹಂ ಘೋಷಿತುಂ ಸ್ವೀಯೇ ಪುರಮಧ್ಯೇ ಮಹಾರವಂ ॥ ೨೫ ॥

ಆಹ್ವಯಾಮಾಸ ಸೇನಾನ್ಯಂ ರಿಪುವಾರಂ ಮನೋನ್ಮದಂ ।
ಕಥಯಾಮಾಸ ಚ ಕ್ಷಿಪ್ರಂ ಮೇಘಗಂಭೀರಯಾ ಗಿರಾ ॥ ೨೬ ॥

---

೨೧. ಇಲ್ಲಿ ಮಹಾಯುದ್ಧವು ಪ್ರಾಪ್ತವಾಗಿದೆ. ವೀರರೆಲ್ಲರೂ ನಾಶವಾಗುತ್ತಾರೆ.

೨೨. ಆದ್ದರಿಂದ ಇಲ್ಲಿ ನೀನು ಬಹು ಜಾಗರೂಕನಾಗಿರಬೇಕು. ಪರಸೈನ್ಯವು ಭೇದಿಸದಿರುವಂತೆ ವ್ಯೂಹವನ್ನು ರಚಿಸು.

೨೩. ನಿನಗೆ ಬಹು ಕಷ್ಟದಿಂದ ಜಯವು ಲಭಿಸುತ್ತದೆ. ಮೂರು ಲೋಕದಲ್ಲಿ ರಾಮನನ್ನು ಯಾರು ತಾನೇ ಜಯಿಸಿ ಯಾರು ?

೨೪. ಆ ನಾರದನು ಹೀಗೆಂದು ಹೇಳಿ ಘೋರವಾದ ಯುದ್ಧವನ್ನು ನೋಡಲು ಅಂತರಿಕ್ಷದಲ್ಲಿ ನಿಂತನು.

೨೫-೨೬. ಶೇಷನು ಹೇಳಿದನು :—ಅನಂತರ ವೀರಮಣಿಯು ಪಟ್ಟಣವಲ್ಲಿ ರಣಭೇರಿಯನ್ನು ಹೊಡೆಯಲು ಸೇನಾಪತಿಯಾದ ರಿಪುವಾರನನ್ನು ಕರೆಸಿ ಇಂತೆಂದನು.

॥ ವೀರಮಣಿರುವಾಚ ॥

ಸೇನಾನೀಃ ಪಟಹಸ್ಯಾಜ್ಞಾಂ ದೇಹಿ ಮೇ ಶೋಭನೇ ಪುರೇ ।
ಯಚ್ಛ್ರುತ್ವಾ ಮೇ ಸುಸನ್ನದ್ಧಾಃ ಶತ್ರುಘ್ನಂ ಪ್ರತಿ ಯಾಂತಿ ತೇ ॥ ೨೭ ॥

ಇತಿ ವಾಕ್ಯಂ ಸಮಾಕರ್ಣ್ಯ ರಾಜ್ಞೋ ವೀರಮಣೇಸ್ತದಾ ।
ಕಾರಯಾಮಾಸ ಪಟಹಂ ಮಹಾರವನಿನಾದಿತಂ ॥ ೨೮ ॥

ಗೇಹೇ ಗೇಹೇ ಚ ರಥ್ಯಾಯಾಂ ಶ್ರೂಯತೇ ಪಟಹಧ್ವನಿಃ ।
ಶತ್ರುಘ್ನಂ ಯಾಂತು ಯೇ ಸರ್ವೇ ವೀರಾ ರಾಜಪುರೇ ಸ್ಥಿತಾಃ ॥ ೨೯ ॥

ಯೋ ವೈ ರಾಜ್ಞಸ್ಸಮುಲ್ಲಂಘ್ಯ ಶಾಸನಂ ವೀರಮಾನಿನಃ ।
ಪುತ್ರಾ ವಾ ಭ್ರಾತರೋ ವಾಪಿ ತೇ ವಧಾರ್ಹಾ ನೃಪಾಜ್ಞಯಾ ॥ ೩೦ ॥

ಶೃಣ್ವಂತು ವೀರಾಃ ಪುನರಪ್ಯಾಹತೇ ಪಟಹೇ ರವಂ ।
ಶ್ರುತ್ವಾ ವಿಧೀಯತಾಮಾಶು ಕರ್ತವ್ಯಂ ಮಾ ವಿಲಂಬಿತಂ ॥ ೩೧ ॥

---

೨೭. ಸೇನಾಪತಿಯೇ ! ರಣಭೇರಿಯನ್ನು ಹೊಡೆಯಲು ಪಟ್ಟಣದಲ್ಲಿ ಆಜ್ಞಾಪಿಸು. ಅದನ್ನು ಕೇಳಿ ಸೈನಿಕರು ಸಿದ್ಧರಾಗಿ ಶತ್ರುಘ್ನನಿಗೆ ಎದುರಾಗಿ ಹೋಗಲಿ.

೨೮. ವೀರಮಣಿಯ ಈ ಮಾತನ್ನು ಕೇಳಿ ಪಟ್ಟಣದಲ್ಲಿ ಆ ಸೇನಾನಿಯು ರಣಭೇರಿಯನ್ನು ಹೊಡೆಸಿದನು.

೨೯. ರಾಜಪುರದಲ್ಲಿರುವ ವೀರರೆಲ್ಲ ಶತ್ರುಘ್ನನನ್ನು ಎದುರಿಸಲು ಹೊರಡ ಬೇಕು. ಎಂದು ಮನೆಮನೆಯಲ್ಲೂ ಬೀದಿಯಲ್ಲೂ ತಮಟೆಯನ್ನು ಬಡಿಯುತ್ತ ಸಾರುತ್ತಿದ್ದರು.

೩೦. ರಾಜನ ಅಪ್ಪಣೆಯನ್ನು ಮೀರಿ ರಾಜಪುರದಲ್ಲಿ ಭಟರು ಇದ್ದರೆ ಅವ ರಾಗಲಿ ಅವರ ಮಕ್ಕಳಾಗಲಿ ಸೋದರರಾಗಲಿ ಎಲ್ಲರೂ ವಧಾರ್ಹರು.

೩೧. ವೀರರಾದವರು ಕೇಳಿರಿ. ಈ ಧ್ವನಿಯನ್ನು ಕೇಳಿ ಬೇಕಾದ ಸನ್ನಾಹ ವನ್ನು ಬೇಗ ಮಾಡಿಕೊಳ್ಳಿ. ವಿಳಂಬಮಾಡಬೇಡಿ.

॥ ಶೇಷ ಉವಾಚ ॥

ಇತಿ ಪಟಹರವಂ ಸ್ವಕರ್ಣಗೋಚರಂ
ನರವರವೀರವರಾ ಯಯುರ್ನೃಪೋತ್ತಮಂ ।
ತೇ ಚ ಕವಚಪರಿಭೂಷಿತಸ್ವದೇಹಾಃ
ಸಮರಮಹೋತ್ಸವಹೃಷ್ಟಚಿತ್ತಕೋಶಾಃ ॥ ೩೨ ॥

ಕೇಚಿದ್ಯಯುಶ್ಶಿರಸ್ತ್ರಾಣಂ ಧೃತ್ವಾ ಶಿರಸಿ ಶೋಭನೇ ।
ಕವಚೇನ ಸುಶೋಭಾಢ್ಯಾಃ ಶತಕೋಟಿಸುಶೋಭನಾಃ ॥ ೩೩ ॥

ರಥೇನ ಹಯಯುಗ್ಮೇನ ಮಣಿಕಾಂಚನಶೋಭಿನಾ ।
ಯಯುಸ್ತೇ ರಾಜಸಂದೇಶಾದ್ಭೂಪಾಲಾ ಯುದ್ಧದುರ್ಮದಾಃ ॥ ೩೪ ॥

ಕೇಚಿನ್ಮತಂಗಜೈರ್ಮತ್ತೈಃ ಕೇಚಿದ್ವಾಹೈಸ್ಸುಶೋಭಿತೈಃ ।
ಯಯುರ್ನೃಪಗೃಹಂ ಸರ್ವೇ ರಾಜಸಂದೇಶಹಾರಕಾಃ ॥ ೩೫ ॥

ನಿವಿಕ್ತಸ್ವರ್ಣಕವಚಾಃ ಶಿರಸ್ತ್ರಾಣೇನ ಶೋಭಿತಾಃ ।
ರುಕ್ಮಾಂಗದೋಽಪಿ ಚ ನಿಜೇ ರಥೇ ತಿಷ್ಠನ್ಮನೋಜವೇ ॥ ೩೬ ॥

---

೩೨. ಶೇಷನು ಹೇಳಿದನು:—ಈರೀತಿ ಆಧ್ವನಿಯು ಕಿವಿಗೆ ಬೀಳಲು ಎಲ್ಲರೂ ರಾಜನನ್ನು ಸೇರಿದರು. ಅವರು ಕವಚಾದಿಗಳಿಂದ ಅಲಂಕೃತರಾಗಿ ಯುದ್ಧದಲ್ಲಿ ಬಹು ಆಸಕ್ತರಾಗಿ ಸಂತೋಷದಿಂದಿದ್ದರು.

೩೩. ಕೆಲವರು ತಲೆಗೆ ಟೊಪ್ಪಿಗೆಗಳನ್ನು ಧರಿಸಿ ಹೊರಟರು. ಕೆಲವರು ಕವಚವನ್ನು ತೊಟ್ಟು ಹೊರಟರು.

೩೪. ಉತ್ತಮವಾದ ರಥದಲ್ಲಿ ಎರಡು ಕುದುರೆಗಳನ್ನು ಕಟ್ಟಿಸಿಕೊಂಡು ರಾಜಾಜ್ಞೆಯ ಮೇರೆಗೆ ಯುದ್ಧಕ್ಕೆ ಹೊರಟರು.

೩೫. ಕೆಲವರು ಆನೆಯ ಮೇಲೂ ಕೆಲವರು ಕುದುರೆಗಳ ಮೇಲೂ, ರಾಜಾಜ್ಞೆಯಿಂದ ರಾಜನ ಮನೆಗೆ ಹೋದರು.

೩೬. ಕೆಲವರು ಚಿನ್ನದ ಕವಚಗಳನ್ನು ತೊಟ್ಟು, ಸೀಸದ ಟೊಪ್ಪಿಗೆಗಳನ್ನು ಹಾಕಿಕೊಂಡು ಹೊರಟರು. ರುಕ್ಮಾಂಗದನೂ ಕೂಡ ಸಿದ್ಧನಾಗಿ ರಥದಲ್ಲಿ ಕುಳಿತು ಹೊರಟನು.

ಶುಭಾಂಗದೋಽನುಜಸ್ತಸ್ಯ ಮಹಾರತ್ನಮಯಂ ದಧತ್ ।
ಕವಚಂ ವಪುಷಿ ಶ್ರೇಷ್ಠೇ ನಿಜಂ ಪ್ರಾಗಾದ್ರಣೋತ್ಸವೇ ॥ ೩೭ ॥

ರಾಜಭ್ರಾತಾ ವೀರಸಿಂಹಃ ಸರ್ವಶಸ್ತ್ರಾಸ್ತ್ರಕೋವಿದಃ ।
ಯಯೌ ನೃಪಾಜ್ಞಯಾ ತತ್ರ ಶಾಸನಂ ಭೂಮಿಪಸ್ಯ ಹಿ ॥ ೩೮ ॥

ಜಾಮೇಯಸ್ತಸ್ಯ ರಾಜ್ಞೋಽಪಿ ಬಲಮಿತ್ರ ಇತಿ ಸ್ಮೃತಃ ।
ಸನ್ನದ್ಧಃ ಕವಚೀ ಖಡ್ಗೀ ಜಗಾಮ ನೃಪಮಂದಿರಂ ॥ ೩೯ ॥

ಸೇನಾನೀ ರಿಪುವಾರೋಽಪಿ ಸೇನಾಂ ತಾಂ ಚತುರಂಗಿಣೀಂ ।
ಸಜ್ಜಾಂ ವಿಧಾಯ ಭೂಪಾಯ ನ್ಯವೇದಯದಥೋ ಮಹಾನ್ ॥ ೪೦ ॥

ಅಥ ರಾಜಾ ವೀರಮಣಿಃ ಸರ್ವಶಸ್ತ್ರಾಸ್ತ್ರಪೂರಿತಂ ।
ಮಣಿಸ್ಪಷ್ಟೋಚ್ಚ ಚಕ್ರೋಚ್ಚಮಾರೋಹತ್ಸ್ಯಂದನೋತ್ತಮಂ ॥ ೪೧ ॥

ತತೋ ವೀರಾರವಶ್ಶಂಖನಿನಾದಶ್ಚ ಸಮಂತತಃ ।
ಶ್ರೂಯತೇ ಕಾತರಾನ್ವೀರಾನ್ ಪ್ರೇರಯನ್ನಿವ ಸಂಗರೇ ॥ ೪೨ ॥

---

೩೭. ಅವನ ತಮ್ಮನಾದ ಶುಭಾಂಗದನೂ ಕೂಡ ರತ್ನಮಯವಾದ ಕವಚವನ್ನು ತೊಟ್ಟು ಹೊರಟನು.

೩೮. ರಾಜಸೋದರನೂ ಎಲ್ಲಾ ಶಸ್ತ್ರಾಸ್ತ್ರಗಳನ್ನು ಬಲ್ಲವನೂ ಆದ ವೀರಸಿಂಹನೂ ಸಿದ್ಧನಾಗಿ ರಾಜಾಜ್ಞೆಯಿಂದ ಹೊರಟನು.

೩೯. ಭಾವಮೈದುನನಾದ ಬಲಮಿತ್ರನೆಂಬುವನೂ ಖಡ್ಗಾದಿಗಳನ್ನು ಧರಿಸಿ ಹೊರಟನು.

೪೦. ಸೇನಾಪತಿಯಾದ ರಿಪುವಾರನು ಚತುರಂಗ ಸೇನೆಯನ್ನು ಸಿದ್ಧಪಡಿಸಿ ರಾಜನಿಗೆ ವಿಜ್ಞಾಪಿಸಿದನು.

೪೧. ಆನಂತರ ವೀರಮಣಿಯು ಮಣಿಯಿಂದಲೂ ಚಕ್ರದಿಂದಲೂ ಉನ್ನತವಾದ ರಥವನ್ನು ಹತ್ತಿದನು.

೪೨. ಅನಂತರ ವೀರಗರ್ಜನೆಯೂ ಶಂಖದ ಝಂಕಾರವೂ ಹೇಡಿಗಳನ್ನು ಕೂಡ ಯುದ್ಧಕ್ಕೆ ಹೋಗುವಂತೆ ಮಾಡುತ್ತ ಎಲ್ಲೆಡೆಯಲ್ಲೂ ಧ್ವನಿಮಾಡಿದುವು.

ಭೇರ್ಯಸ್ಸಮಂತತೋ ಜಘ್ನುಃ ಶುಭನಾದಕವಾದಿತಾಃ ।
ಅನೀಕಾನ್ಯತ್ರ ತಸ್ಯಾಸನ್ ಸಂಗ್ರಾಮಾಯ ಪ್ರತಸ್ಥುಷಃ ॥ ೪೩ ॥

ಸರ್ವೇ ಕೃತಸ್ವಸ್ತ್ಯಯನಾಃ ಸರ್ವಾಭರಣಭೂಷಿತಾಃ ।
ಸರ್ವಶಸ್ತ್ರಾಸ್ತ್ರಸಂಪೂರ್ಣಾ ಯಯುಸ್ಸಮರಮಂಡಲಂ ॥ ೪೪ ॥

ಭೇರೀಶಂಖನಿನಾದೇನ ಪೂರಿತಾಶ್ಚ ನಗಾ ಗುಹಾಃ ।
ಆಕಾರಿತುಂ ಗತಃ ಕಿಂ ತು ತದ್ರವಃ ಸ್ವರ್ಗಸಂಸ್ಥಿತಾನ್ ॥ ೪೫ ॥

ತಸ್ಮಿನ್ಕೋಲಾಹಲೇ ವೃತ್ತೇ ರಾಜಾ ವೀರಮಣಿರ್ಮಹಾನ್ ।
ರಣೋತ್ಸಾಹೇನ ಸಂಯುಕ್ತೋ ಯಯೌ ಪ್ರಧನಮಂಡಲಂ ॥ ೪೬ ॥

ಆಗತ್ಯ ಸಂಸ್ಥಿತಂ ತಾವದ್ರಥಪತ್ತಿಸಮಾಕುಲಂ ।
ಸಮುದ್ರ ಇವ ತತ್ಸ್ಥಾನಾತ್ ಪ್ಲಾವಿತುಂ ಪುರುಷಾನಯಾತ್ ॥ ೪೭ ॥

ತದಾಗತಂ ಬಲಂ ದೃಷ್ಟ್ವಾ ರಥಿಭಿಶ್ಶಸ್ತ್ರಕೋವಿದೈಃ ।
ಕೋಲಾಹಲೀಕೃತಂ ಸರ್ವಮುವಾಚ ಸುಮತಿಂ ನೃಪಃ ॥ ೪೮ ॥

---

೪೩. ಯುದ್ಧಕ್ಕೆ ಹೋಗುವ ಸೈನ್ಯವಿರುವೆಡೆಯಲ್ಲಿ ಭೇರಿಗಳು ಬಡಿಯಲ್ಪಟ್ಟವು.

೪೪. ಎಲ್ಲರೂ ಸ್ವಸ್ತಿವಾಚನವನ್ನು ಮಾಡಿಸಿಕೊಂಡು, ಆಭರಣಗಳನ್ನು ತೊಟ್ಟು, ಅಸ್ತ್ರಶಸ್ತ್ರಗಳಿಂದ ಸಜ್ಜಿತರಾಗಿ ಯುದ್ಧಭೂಮಿಗೆ ಹೊರಟರು.

೪೫. ಭೇರಿಶಂಖಗಳ ಧ್ವನಿಯಿಂದ ಪರ್ವತ ಗುಹೆಗಳು ಪ್ರತಿಧ್ವನಿಮಾಡುವುದನ್ನು ನೋಡಿದರೆ ಸ್ವರ್ಗದಲ್ಲಿರುವವರನ್ನು ಕರೆಯುವುದಕ್ಕೆ ಆ ಧ್ವನಿಯು ಹೋಗಿದೆಯೋ ಎಂಬಂತಿದ್ದಿತು.

೪೬. ಈ ಕೋಲಾಹಲವಾಗುತ್ತಿರುವಲ್ಲಿ ರಾಜನಾದ ವೀರಮಣಿಯು ರಣೋತ್ಸಾಹದಿಂದ ಯುದ್ಧಭೂಮಿಗೆ ಹೋದನು.

೪೭. ರಥ, ಆನೆ, ಮುಂತಾದವುಗಳಿಂದ ಕೂಡಿದ ಸೇನೆಯು ಸಮುದ್ರವು ಜನಗಳನ್ನು ತೇಲಿಸಲು ಬಂದಿದೆಯೋ ಎನ್ನುವಂತೆ ಹೊರಟಿತು.

೪೮. ಆ ಶತ್ರುಸೈನ್ಯ ಬಂದುದನ್ನು ನೋಡಿ ಆ ಕೋಲಾಹಲದ ಸದ್ದನ್ನು ಕೇಳಿ ಸುಮತಿಯನ್ನು ಕುರಿತು ರಾಜನು ಇಂತೆಂದನು.

॥ ಶತ್ರುಘ್ನ ಉವಾಚ ॥

ಸಮಾಗತೋ ವೀರಮಣಿರ್ಮಮ ವಾಜಿಧರೋ ಬಲೀ ।
ಯೋದ್ಧುಂ ಮಾಂ ಮಹತಾ ಭೂಪಃ ಸೈನ್ಯೇನ ಚತುರಂಗಿಣಾ ॥ ೪೯ ॥

ಕಥಂ ಯುದ್ಧಂ ಪ್ರಕರ್ತವ್ಯಂ ಕೇ ಯೋತ್ಸ್ಯಂತಿ ಬಲೋತ್ಕಟಾಃ ।
ತಾನ್ ಸರ್ವಾನ್ದಿಶ ಮೇ ವೀರಾನ್ ಯಥಾಸ್ಯಾಜ್ಜಯ ಈಪ್ಸಿತಃ ॥ ೫೦ ॥

॥ ಸುಮತಿರುವಾಚ ॥

ಸ್ವಾಮಿನ್ನಸೌ ಮಹಾರಾಜೋ ಮಹಾಸೈನ್ಯಪರಿವೃತಃ ।
ಸಮಾಗತಸ್ಸ ಯುದ್ಧಾರ್ಥೀ ಶಿವಭಕ್ತಿಸಮನ್ವಿತಃ ॥ ೫೧ ॥

ಸಾಂಪ್ರತಂ ಯುಧ್ಯತಾಂ ವೀರಃ ಪುಷ್ಕಲಃ ಪರಮಾಸ್ತ್ರವಿತ್ ।
ಅನ್ಯೇಽಪಿ ನೀಲರತ್ನಾದ್ಯಾ ಯೋದ್ಧಾರೋ ಯುದ್ಧಕೋವಿದಾಃ ॥ ೫೨ ॥

ಶಿವೇನ ಸಹ ಯೋದ್ಧವ್ಯಂ ರಾಜ್ಞಾ ವಾ ಭವತಾನಘ ।
ದ್ವಂದ್ವಯುದ್ಧೇನ ಜೇತವ್ಯೋ ಮಹಾಬಲಪರಾಕ್ರಮಃ ॥ ೫೩ ॥

---

೪೯. ಶತ್ರುಘ್ನನು ಹೇಳಿದನು :—ನನ್ನ ಕುದುರೆಯನ್ನು ಹಿಡಿದಿರುವ ಶೂರನಾದ ವೀರಮಣಿಯು ಸೈನ್ಯದೊಂದಿಗೆ ನನ್ನೊಡನೆ ಯುದ್ಧಮಾಡಲು ಬಂದಿದ್ದಾನೆ.

೫೦. ಯುದ್ಧವನ್ನು ಹೇಗೆ ಮಾಡಬೇಕು? ಬಲಿಷ್ಠರಾದವರು ಯಾರು ಯುದ್ಧಮಾಡುವರು? ನಮಗೆ ಹೇಗೆ ಜಯವಾಗುತ್ತದೆ? ಅದೆಲ್ಲವನ್ನೂ ಹೇಳು.

೫೧. ಸುಮತಿಯು ಹೇಳಿದನು:—ಈ ಸೈನ್ಯದಿಂದ ಸುತ್ತುವರಿಯಲ್ಪಟ್ಟ ವೀರಮಣಿಮಹಾರಾಜನು ಯುದ್ಧಕ್ಕೋಸ್ಕರ ಬಂದಿದ್ದಾನೆ. ಇವನು ಶಿವಭಕ್ತನು.

೫೨. ಈಗ ಅಸ್ತ್ರಶಸ್ತ್ರಗಳನ್ನು ಬಲ್ಲ ಪುಷ್ಕಲನು ಯುದ್ಧಮಾಡಲಿ. ಮಿಕ್ಕ ನೀಲರತ್ನಾದಿಗಳು ಅವನೊಡನೆ ಸೇರಿ ಯುದ್ಧಮಾಡಲಿ.

೫೩. ನೀನು ಶಿವನೊಡನೆಯಾಗಲಿ ವೀರಮಣಿಯೊಡನೆಯಾಗಲಿ ಯುದ್ಧಮಾಡಬೇಕು. ಆ ಪರಾಕ್ರಮಿಯನ್ನು ದ್ವಂದ್ವಯುದ್ಧದಿಂದ ಜಯಿಸಬೇಕು.

ಅನೇನ ವಿಧಿನಾ ರಾಜನ್ ಜಯಸ್ತೇತ್ರ ಭವಿಷ್ಯತಿ ।
ಪಶ್ಚಾದ್ಯದ್ರೋಚತೇ ಸ್ವಾಮಿಂಸ್ತತ್ಕುರುಷ್ವ ಮಹಾಮತೇ ॥ ೫೪ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಶತ್ರುಘ್ನಃಪರವೀರಹಾ ।
ಸುಭಟಾನಾದಿದೇಶಾಥ ಯುದ್ಧಾಯ ಕೃತನಿಶ್ಚಯಃ ॥ ೫೫ ॥

ಸರ್ವೈಸ್ಸಸೈನ್ಯೈರ್ಯುದ್ಧಾರ್ಥಂ ರಾಜಭಿಃ ಶಸ್ತ್ರಕೋವಿದೈಃ ।
ಯಥಾ ಸ್ಯಾನ್ಮೇ ಜಯಃ ಕ್ಷಿಪ್ರಂ ಯತಿತವ್ಯಂ ತಥಾ ಪುನಃ ೫೬ ॥

ರಣಾರ್ಥಂ ರಾಘವಸ್ಯೈವಂ ಶ್ರುತ್ವಾ ತೇ ರಣಕೋವಿದಾಃ ।
ಮಹೋತ್ಸಾಹೇನ ಸಂಯುಕ್ತಾ ಯಯುರ್ಯೋದ್ಧುಂ ತು ಸೈನಿಕೈಃ ॥ ೫೭ ॥

ಇತಿ ಶ್ರಿ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ ಯುದ್ಧ
ನಿಶ್ಚಯೋ ನಾಮ ಚತ್ವಾರಿಂಶೋಧ್ಯಾಯಃ

---

೫೪. ಹೀಗಾದರೆ ನಿನಗೆ ಜಯವು ಲಭಿಸುತ್ತದೆ. ಇದರ ಮೇಲೆ ನಿನ್ನ ಇಷ್ಟ ವಂತೆ ಮಾಡು. ನೀನೂ ಬುದ್ಧಿವಂತನು.

೫೫. ಶೇಷನು ಹೇಳಿದನು:—ಈ ಮಾತನ್ನು ಕೇಳಿ ಶತ್ರುಘ್ನನು ಯುದ್ಧ ಮಾಡುವ ನಿಶ್ಚಯದಿಂದ ಭಟರಿಗೆ ಆಜ್ಞೆಯನ್ನು ಕೊಟ್ಟನು.

೫೬. ಎಲ್ಲಾ ರಾಜರೂ ಸೈನ್ಯದೊಡನೆ ನನಗೆ ಯುದ್ಧವು ಜಾಗ್ರತೆ ಲಭಿಸು ವಂತೆ ಪ್ರಯತ್ನಪಟ್ಟು ಯುದ್ಧಮಾಡಿರಿ.

೫೭. ಆ ರಣಕೋವಿದರಾದವರು ಶತ್ರುಘ್ನನ ಈ ಅಪ್ಪಣೆಯನ್ನು ಕೇಳಿ ಬಹು ಉತ್ಸಾಹದಿಂದ ಯುದ್ಧಕ್ಕೆ ಹೊರಟರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಯುದ್ಧ ನಿಶ್ಚಯವೆಂಬ
ನಾಲ್ವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
# ಏಕಚತ್ವಾರಿಂಶೋಽಧ್ಯಾಯಃ

---

॥ ಶೇಷ ಉವಾಚ ॥

ಯುದ್ಧಾಯ ತೇ ಸುಸನ್ನದ್ಧಾಃ ಶತ್ರುಘ್ನಸ್ಯ ಮಹಾಬಲಾಃ ।
ಯಯುರ್ವೀರಮಣೇಃ ಸೈನ್ಯಮಧ್ಯೇ ಶೌರ್ಯಸಮನ್ವಿತಾಃ ॥ ೧ ॥

ಶರಾನ್ವಿಮುಂಚಮಾನಾಸ್ತೇ ಭಿಂದಂತಃ ಸೈನಿಕಾನ್ಪರಾನ್ ।
ವ್ಯದೃಶ್ಯಂತ ರಣಾಂತಸ್ತೇ ಶರಾಸನಧರಾ ನರಾಃ ॥ ೨ ॥

ಅನೇಕೇ ನಿಹತಾಸ್ತತ್ರ ಗಜಾ ಮಣಿಮಯಾ ರಥಾಃ ।
ಭಗ್ನಾ ವಾಹಸಮೇತಾಶ್ಚ ದೃಶ್ಯಂತೇ ರಣಮಂಡಲೇ ॥ ೩ ॥

ನಿಹಿತಂ ಕದನಂ ತೇಷಾಂ ಶ್ರುತ್ವಾ ರುಕ್ಮಾಂಗದೋ ಬಲೀ ।
ರಥೇ ಮಣಿಮಯೇ ತಿಷ್ಠನ್ ಯಯೌ ಯೋದ್ಧುಂ ತು ಸೈನಿಕಾನ್ ॥ ೪ ॥

---

## ನಾಲ್ವತ್ತೊಂದನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಯುದ್ಧಕ್ಕೆ ಸಿದ್ಧರಾದ ಆ ಶತ್ರುಘ್ನನ ಸೈನಿಕರು ಶೌರ್ಯದಿಂದ ವೀರಮಣಿಯ ಸೈನ್ಯದಮೇಲೆ ನುಗ್ಗಿದರು.

೨. ಅವರು ಬಾಣಗಳನ್ನು ಬಿಡುತ್ತ ಪರಸೈನಿಕರನ್ನು ಸೀಳುತ್ತ ಚಾಪಧಾರಿಗಳಾಗಿ ಎಲ್ಲೆಲ್ಲಿಯೂ ಕಾಣಿಸಿಕೊಂಡರು.

೩. ಅಲ್ಲಿ ಅನೇಕ ಆನೆಗಳು ಸತ್ತವು. ರಥಗಳು ಮುರಿದುವು. ಭಟರು ಕುದುರೆಯೊಡನೆ ಬಿದ್ದರು.

೪. ಹಾಗೆ ಅವರು ಯುದ್ಧಕ್ಕೆ ಬಂದುದನ್ನು ಕೇಳಿ ವೀರನಾದ ರುಕ್ಮಾಂಗದನು ರಥವನ್ನೇರಿ ಯುದ್ಧಕ್ಕೆ ಹೊರಟನು.

ಶರಾಸನೇ ಶರಾನ್ಧಾಸ್ಯನ್ನಿಷುಧೀ ಅಕ್ಷಯೌ ದಧತ್ ।
ಶೋಣನೇತ್ರಾಂತರೋ ಭೀಮೋ ಮಹಾಕೋಪಸಮನ್ವಿತಃ ॥ ೫ ॥

ಅನೇಕಬಾಣಸಂವಿಗ್ನಾನ್ ಕುರ್ವನ್ವೀರಾನ್ ಸಹಸ್ರಶಃ ।
ಹಾಹಾಕಾರಂ ಕಾರಯಂಸ್ತದ್ವ್ಯಯೌ ರುಕ್ಮಾಂಗದೋ ಬಲೀ ॥ ೬ ॥

ರಾಜಪುತ್ರಸ್ಸ್ವಸದೃಶಂ ಬಲೇನ ಯಶಸಾ ಶ್ರಿಯಾ ।
ಆಹ್ವಯಾಮಾಸ ಶತ್ರುಘ್ನಂ ಭಾರತಂ ಪುಷ್ಕಲಂ ಬಲೀ ॥ ೭ ॥

॥ ರುಕ್ಮಾಂಗದ ಉವಾಚ ॥

ಆಗಚ್ಛ ವೀರಕಮಣೇ ಮಹಾಬಲಪರಾಕ್ರಮ ।
ಮಯಾ ಯೋದ್ಧುಂ ತು ಬಲಿನಾ ರಾಜಪುತ್ರೇಣ ಭಾಸ್ವತಾ ॥ ೮ ॥

ಕಿಮನ್ಯೈಸ್ತ್ರಾಸಿತೈರ್ವೀರ ನಿಹತೈಃ ಕೋಟಿಭಿರ್ನರೈಃ ।
ಮಯಾ ಸಮಂ ಮಹಾಯುದ್ಧಂ ವಿಧಾಯ ಜಯಮಾಪ್ನುಹಿ ॥ ೯ ॥

---

೫. ಅಕ್ಷಯ ಬಾಣಗಳ ಬತ್ತಳಿಕೆಯನ್ನು ಧರಿಸಿ ಬಾಣವನ್ನು ಬಿಲ್ಲಿನಲ್ಲಿ ಹೂಡುತ್ತಾ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಹೊರಟನು.

೬. ವೀರರಿಗೆ ಅನೇಕ ಬಾಣಗಳನ್ನು ಬಿಡುತ್ತ ಅವರನ್ನು ಸೀಳುತ್ತ ರುಕ್ಮಾಂಗದನು ಹಾಹಾಕಾರವನ್ನುಂಟುಮಾಡಿದನು.

೭. ಆ ರಾಜಪುತ್ರನಾದ ರುಕ್ಮಾಂಗದನು ತನ್ನ ಯೋಗ್ಯತೆಗೆ ಸರಿಯಾಗಿ ಯುದ್ಧಮಾಡುತ್ತ ಶತ್ರುಘ್ನನನ್ನೂ ಪುಷ್ಕಳನನ್ನೂ ಯುದ್ಧಕ್ಕೆ ಕರೆದನು.

೮. ರುಕ್ಮಾಂಗದನು ಹೇಳಿದನು:—ಎಲೈ ವೀರನೇ, ಮಹಾಪರಾಕ್ರಮಿಯೇ, ನಾನು ರಾಜಪುತ್ರನು ನನ್ನೊಡನೆ ಯುದ್ಧಕ್ಕೆ ಬಾ.

೯. ಮಿಕ್ಕವರನ್ನು ಹೆದರಿಸಿದರಾಗಲಿ ಕೊಂದರಾಗಲಿ ಪ್ರಯೋಜನವೇನು ? ನನ್ನೊಡನೆ ಯುದ್ಧಮಾಡಿ ಜಯವನ್ನು ಹೊಂದು.

ಇತ್ಯುಕ್ತವಂತಂ ತರಸಾ ಪ್ರಹಸನ್ಪುಷ್ಕಲೋ ಬಲೀ ।
ಜಘಾನ ವಿಪುಲೇ ಮಧ್ಯೇ ವಕ್ಷಸಸ್ತೀಕ್ಷ್ಣಪರ್ವಭಿಃ ॥ ೧೦ ॥

ತದಮೃಷ್ಯನ್ರಾಜಪುತ್ರೋ ಮಹಾಚಾಪೇ ದಧಚ್ಛರಾನ್ ।
ಜಘಾನ ದಶಭಿರ್ವೀರಂ ಪುಷ್ಕಲಂ ವಕ್ಷಸೋಂತರೇ ॥ ೧೧ ॥

ಉಭೌ ಸಮರಸಂರಬ್ಧಾವುಭಾವಪಿ ಜಯೈಷಿಣೌ ।
ರೇಜಾತೇ ಸಂಗರೇ ತೌ ಹಿ ಕುಮಾರಸ್ತಾರಕೋ ಯಥಾ ॥ ೧೨ ॥

ಬಾಣಾನ್ಧನುಷಿ ಸಂಧಾಯ ದಶಸಂಖ್ಯಾನ್ಮಹಾಶಿತಾನ್ ।
ಅಕರೋತ್ಪುಷ್ಕಲೋ ವೀರೋ ವಿರಥಂ ರಾಜಪುತ್ರಕಂ ॥ ೧೩ ॥

ಚತುರ್ಭಿಶ್ಚತುರೋ ವಾಹಾನ್ ದ್ವಾಭ್ಯಾಂ ಸೂತಮಪಾತಯತ್ ।
ಏಕೇನ ಧ್ವಜಮೇತಸ್ಯ ದ್ವಾಭ್ಯಾಂ ಸ್ಯಂದನರಕ್ಷಕೌ ॥ ೧೪ ॥

ಏಕೇನ ಹೃದಿ ವಿವ್ಯಾಧ ರಾಜಪುತ್ರಸ್ಯ ವೇಗವಾನ್ ।
ತದದ್ಭುತಂ ಕರ್ಮ ಸರ್ವೇ ದೃಷ್ಟ್ವಾ ವೀರಾಃ ಪ್ರತೋಷಿತಾಃ ॥ ೧೫ ॥

---

೧೦. ಇಂತು ಹೇಳುತ್ತಿರುವ ರಾಜಪುತ್ರನಮೇಲೆ ಪುಷ್ಕಲನು ಬಾಣಗಳನ್ನು ಬಿಡುತ್ತ ಎದೆಯ ಮಧ್ಯಕ್ಕೆ ಆ ಬಾಣಗಳಿಂದ ಹೊಡೆದನು.

೧೧. ಅದನ್ನು ರಾಜಪುತ್ರನು ಸಹಿಸದೆ ಪುಷ್ಕಳನ ಎದೆಗೆ ಹತ್ತು ಬಾಣಗಳನ್ನು ಹೊಡೆದನು.

೧೨. ಯುದ್ಧದಲ್ಲಿ ಕೋಪಗೊಂಡು ಪರಸ್ಪರ ಜಯವನ್ನು ಅಪೇಕ್ಷಿಸುವ ಅವರಿಬ್ಬರೂ ಯುದ್ಧಮಾಡುವ ಕುಮಾರಸ್ವಾಮಿ ತಾರಕಾಸುರರಂತೆ ಕಂಡುಬಂದರು.

೧೩. ಉತ್ತಮವಾದ ಹತ್ತು ಬಾಣಗಳಿಂದ ಪುಷ್ಕಳನು ರುಕ್ಮಾಂಗದನ ರಥವನ್ನು ನಾಶಪಡಿಸಿದನು.

೧೪-೧೫. ಆಗ ರುಕ್ಮಾಂಗದನು ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ ಎರಡರಿಂದ ಸೂತನನ್ನು ಕೊಂದನು. ಒಂದು ಬಾಣದಿಂದ ಧ್ವಜವನ್ನು ಕತ್ತರಿಸಿ ಎರಡು ಬಾಣದಿಂದ ರಥವನ್ನು ಕಾಪಾಡುವವರನ್ನು ಕಡಿದನು. ಒಂದು ಬಾಣದಿಂದ ಎದೆಗೆ ಹೊಡೆದು ನೋಯಿಸಿದನು. ಈ ಅದ್ಭುತಕರ್ಮವನ್ನು ನೋಡಿ ವೀರರೆಲ್ಲರೂ ಸಂತೋಷಗೊಂಡರು.

ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ।
ಅತ್ಯಂತಕೋಪಮಾಪನ್ನಃ ಸ್ಯಂದನಂ ಪರಮಾವಿಶತ್ ॥ ೧೬ ॥

ಸ ಸ್ಥಿತ್ವಾ ಸ್ಯಂದನವರೇ ಹಯರತ್ನೇನ ಭೂಷಿತೇ ।
ಶರಾಸನಂ ಮಹದ್ಧೃತ್ವಾ ಸುದೃಢಂ ಗುಣಪೂರಿತಂ ॥ ೧೭ ॥

ಉವಾಚ ಪುಷ್ಕಲಂ ವೀರಂ ರುಕ್ಮಾಂಗದ ಇದಂ ವಚಃ ।
ಮಹಾಪರಾಕ್ರಮಂ ಕೃತ್ವಾ ಕ್ವ ಯಾಸ್ಯಸಿ ಪರಂತಪ ॥ ೧೮ ॥

ಪಶ್ಯ ಮೇಽದ್ಯ ಪರಾಕ್ರಾಂತಿಂ ಯದ್ಬಲೇನ ವಿನಿರ್ಮಿತಾಂ ।
ಯತ್ನಾತ್ತಿಷ್ಠಸ್ವ ಭೋ ವೀರ ನಯಾಮಿ ತ್ವದ್ರಥಂ ನಭಃ ॥ ೧೯ ॥

ಇತ್ಯುಕ್ತ್ವಾ ಶರಮುತ್ಯುಗ್ರಂ ದಧಾರ ಸ್ವಶರಾಸನೇ ।
ಮಂತ್ರಯಿತ್ವಾ ಮುಮೋಚಾಸ್ತ್ರಂ ಭ್ರಾಮಕಂ ಪೌಷ್ಕಲೇ ರಥೇ ॥ ೨೦ ॥

ಮುಮೋಚ ನಿಶಿತಂ ಬಾಣಂ ಸ್ವರ್ಣಪುಂಖೈಕಶೋಭಿತಂ ।
ತೇನ ಬಾಣೇನ ನೀತೋಽಸ್ಯ ರಥೋ ಯೋಜನಮಾತ್ರಕಂ ॥ ೨೧ ॥

---

೧೬. ಧನುಸ್ಸು, ರಥ, ಕುದುರೆ, ಸಾರಥಿಗಳನ್ನು ಕಳೆದುಕೊಂಡ ಆ ರುಕ್ಮಾಂಗದನು ಬೇರೆಯವುಗಳನ್ನು ತೆಗೆದುಕೊಂಡನು.

೧೭. ಉತ್ತಮ ರಥದಲ್ಲಿ ಕುಳಿತು ಒಳ್ಳೆಯ ಕುದುರೆಗಳನ್ನು ಕಟ್ಟಿಸಿ ಉತ್ತಮ ಧನುಸ್ಸನ್ನು ಹಿಡಿದು ರುಕ್ಮಾಂಗದನು ಪುಷ್ಕಳನನ್ನು ಕುರಿತು ಇಂತೆಂದನು.

೧೮-೧೯. ಮಹಾಪರಾಕ್ರಮವನ್ನು ತೋರಿಸಿ ಎಲ್ಲಿಹೋಗುತ್ತೀಯೆ ? ಬಲಿಷ್ಠನಾದ ನನ್ನ ಪರಾಕ್ರಮವನ್ನು ನೋಡು. ನಿನ್ನ ರಥವು ಅಂತರಿಕ್ಷದಲ್ಲಿರುವಂತೆ ಹಾರಿಸುತ್ತೇನೆ.

೨೦. ಇಂತೆಂದು ಹೇಳಿ ಒಂದು ಭ್ರಾಮಕಶರವನ್ನು ಧನುಸ್ಸಿನಲ್ಲಿ ಹೂಡಿ ಮಂತ್ರಿಸಿ ಪುಷ್ಕಳನ ರಥಕ್ಕೆ ಬಿಟ್ಟನು.

೨೧. ಆ ಚೂಪಾದ ಬಾಣವನ್ನು ಬಿಡಲು ಆ ಪುಷ್ಕಳನ ರಥವನ್ನು ಒಂದು ಯೋಜನದೂರಕ್ಕೆ ಎಳೆದುಕೊಂಡುಹೋಯಿತು.

ಧೃತಃ ಕೃಚ್ಛ್ರೇಣ ಸೂತೇನ ರಥೋ ಬಭ್ರಾಮ ಭೂತಳೇ ।
ಕೃಚ್ಛ್ರೇಣ ಪ್ರಾಪ್ಯ ತತ್ಸ್ಥಾನಂ ಪುಷ್ಕಲಃ ಪರಮಾಸ್ತ್ರವಿತ್ ॥ ೨೨ ॥

ಜಗಾದ ವಚನಂ ತಂ ವೈ ಬಾಣಂ ಬಿಭ್ರಚ್ಛರಾಸನೇ
ಸ್ವರ್ಗಂ ಪ್ರಾಪ್ನುಹಿ ವೀರಾಗ್ರ್ಯ ಸರ್ವದೇವೈಕಶೋಭಿತಂ । ॥ ೨೩ ॥

ತ್ವಾದೃಶಾಃ ಪೃಥಿವೀಯೋಗ್ಯಾ ನ ಭವಂತಿ ನೃಪೋತ್ತಮ
ಶತಕ್ರತುಸಭಾಯೋಗ್ಯಾಸ್ತದ್ಗಚ್ಛಸ್ವ ಸುರಾಲಯಂ ॥ ೨೪ ॥

ಇತ್ಯುಕ್ತ್ವಾ ಸ ಮುಮೋಚಾಸ್ತ್ರಮಾಕಾಶಪ್ರಾಪಕಂ ಮಹತ್ ।
ತೇನ ಬಾಣೇನ ಸ ರಥೋ ಯಯೌ ಖಮನುಲೋಮತಃ ॥ ೨೫ ॥

ಸರ್ವಾನ್ ಲೋಕಾನತಿಕ್ರಮ್ಯ ಯಯೌ ಸೂರ್ಯಸ್ಯ ಮಂಡಲಂ ।
ತಜ್ಜ್ವಾಲಯಾ ರಥೋ ದಗ್ಧೋ ಹಯಸೂತಸಮನ್ವಿತಃ ॥ ೨೬ ॥

---

೨೨. ರಥವನ್ನು ಸಾರಥಿಯು ಕಷ್ಟಪಟ್ಟು ಹಿಡಿದು ಅಲ್ಲೇ ನಿಲ್ಲುವಂತೆ ಮಾಡಿದನು. ಅಸ್ತ್ರವಿತ್ತಾದ ಆ ಪುಷ್ಕಳನು ಬಾಣವನ್ನು ಹೂಡುತ್ತ ಇಂತೆಂದನು.

೨೩-೨೪. ಎಲೈ ವೀರನೇ, ನಿನ್ನಂತಹವರು ಭೂಮಿಯಲ್ಲಿರಬಾರದು. ಇರಲು ಯೋಗ್ಯರಲ್ಲ. ಇಂದ್ರನ ಸಭೆಯಲ್ಲಿರಬೇಕು. ಆದ್ದರಿಂದ ಸ್ವರ್ಗಕ್ಕೆ ಹೋಗು.

೨೫. ಹೀಗೆಂದು ಹೇಳಿ ಬಾಣವನ್ನು ಬಿಡಲು ಅವನ ರಥವು ನೇರವಾಗಿ ಆಕಾಶಕ್ಕೆ ಹಾರಿತು.

೨೬. ಆ ರಥವು ಮೇಲಕ್ಕೆ ಹೋಗುತ್ತ ಎಲ್ಲ ಲೋಕಗಳನ್ನು ದಾಟಿ ಸೂರ್ಯಮಂಡಲದ ಹತ್ತಿರಕ್ಕೆ ಹೋಗಲು ಅಲ್ಲಿ ಸೂರ್ಯಜ್ವಾಲೆಯಿಂದ ರಥ ಸೂತ ಕುದುರೆಗಳು ಸುಟ್ಟುಹೋದುವು.

ತತ್ಸರ್ವೈರ್ದಗ್ಧಭೂಯಿಷ್ಠಕಳೇಬರಃ ಸುದುಃಖಿತಃ ।
ಪಪಾತ ಚಂದ್ರಚೂಡಂ ಸ ಧೃತ್ವಾ ಹೃದ್ಯಸುಖಾರ್ದನಂ ॥ ೨೭ ॥

ಭೂಮೌ ನಿಪತಿತಸ್ತತ್ರ ಕರದಗ್ಧಕಳೇಬರಃ ।
ಅತ್ಯಂತದುಃಖಮಾಪನ್ನೋ ಮುಮೂರ್ಛ ರಣಮಂಡಲೇ ॥ ೨೮ ॥

ತಸ್ಮಿನ್ನಿಪತಿತೇ ಭೂಮೌ ಮೂರ್ಛಿತೇ ರಾಜಪುತ್ರಕೇ ।
ಹಾಹಾಕಾರೋ ಮಹಾನಾಸೀತ್ತತ್ರ ಸಂಗ್ರಾಮಮೂರ್ಧನಿ ॥ ೨೯ ॥

ವೈರಿಣೋ ಜಯಲಕ್ಷ್ಮೀಂ ತೇ ಸಂಪ್ರಾಪ್ತಾಃ ಪುಷ್ಕಲೋನ್ಮುಖಾಃ ।
ಪಲಾಯನಪರಾ ಜಾತಾ ವೈರಿಣೋ ಹಯರಕ್ಷಕಾಃ ॥ ೩೦ ॥

ತದಾ ಪುತ್ರಸ್ಯ ವೈ ಮೂರ್ಛಾಂ ದೃಷ್ಟ್ವಾ ವೀರಮಣಿರ್ನೃಪಃ ।
ಪ್ರಾಯಾತ್ಸಮರಮಧ್ಯಸ್ಥಂ ಪುಷ್ಕಲಂ ಕೋಪಪೂರಿತಃ ॥ ೩೧ ॥

ತದಾ ಭೂಮಿಶ್ಚಚಾಲೇಯಂ ಸಪರ್ವತವನೋತ್ತಮಾ ।
ಶೂರಾ ವೈ ಹರ್ಷಮಾಪನ್ನಾಃ ಕಾತರಾ ಭಯಪೀಡಿತಾಃ ॥ ೩೨ ॥

---

೨೭. ತಾನೂ ಆ ಸೂರ್ಯನ ಕಿರಣಗಳಿಂದ ಸುಟ್ಟು ದುಃಖಿತನಾಗಿ ದುಃಖ ವನ್ನು ನಾಶಮಾಡುವ ಶಿವನನ್ನು ಸ್ಮರಿಸುತ್ತಾ ಕೆಳಗೆ ಬಿದ್ದನು.

೨೮. ಹೀಗೆ ಸುಡಲ್ಪಟ್ಟು ಕೆಳಗೆ ಬಿದ್ದು ನೋವಾಗಿ ಮೂರ್ಛೆಹೊಂದಿದನು

೨೯. ಆ ರಾಜಪುತ್ರನು ಬಿದ್ದು ಮೂರ್ಛೆಹೋಗಲು ಆ ಯುದ್ಧಭೂಮಿ ಯಲ್ಲಿ ಹಾಹಾಕಾರವೆದ್ದಿತು.

೩೦. ಪುಷ್ಕಳನೇ ಮುಂತಾದವರು ವೈರಿಯಿಂದ ಜಯವನ್ನು ಸಂಪಾದಿಸಿದರು. ಕುದುರೆಯನ್ನು ರಕ್ಷಿಸುತ್ತಿದ್ದ ಈ ವೈರಿಗಳು ಓಡಿಹೋದರು.

೩೧. ವೀರಮಣಿಯು ಮಗನು ಮೂರ್ಛಿತನಾದುದನ್ನು ತಿಳಿದು, ಕೋಪ ದಿಂದ ಪುಷ್ಕಳನನ್ನು ಎದುರಿಸಲು ಹೋದನು.

೩೨. ಆಗ ಪರ್ವತಗಳ ಸಹಿತ ಭೂಮಿಯು ಅಲ್ಲಾಡಿತು. ಶೂರರಿಗೆ ಸಂತೋ ಷವೂ ಹೇಡಿಗಳಿಗೆ ಭಯವೂ ಉಂಟಾಯಿತು.

**ಚಾಪಂ ಮಹದ್ದಧಾನಸ್ಸ ಇಷುಧೀ ಅಕ್ಷಯಾವಪಿ ।**
**ರೋಷಾನ್ನಿಶ್ವಾಸಮಾಮುಂಚನ್ನಾಹ್ವಯಾಮಾಸ ವೈರಿಣಂ ॥ ೩೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಪುಷ್ಕಲವಿಜಯೋನಾಮ ಏಕಚತ್ವಾರಿಂಶೋಽಧ್ಯಾಯಃ**

---

೩೩. ದೊಡ್ಡ ಬಿಲ್ಲನ್ನು ಹಿಡಿದು ಅಕ್ಷಯಬಾಣಗಳ ಬತ್ತಳಿಕೆಯನ್ನು ತೊಟ್ಟು, ಕೋಪದಿಂದ ನಿಟ್ಟುಸಿರುಬಿಡುತ್ತ ಶತ್ರುವನ್ನು ಯುದ್ಧಕ್ಕೆ ಕರೆದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ ಸಂವಾದದ ರಾಮಾಶ್ವಮೇಧದಲ್ಲಿ ಪುಷ್ಕಳವಿಜಯವೆಂಬ ನಾಲ್ವತ್ತೊಂದನೆಯ ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ದ್ವಿಚತ್ವಾರಿಂಶೋಽಧ್ಯಾಯಃ

---

॥ ಶೇಷ ಉವಾಚ ॥

ಆಹ್ವಯಂತಂ ಮಹಾಸೈನ್ಯವಾರಿಧೌ ಪುಷ್ಕಲಂ ನೃಪಂ
ಸಮಾಲಕ್ಷ್ಯ ಕಪೀಂದ್ರೋಽಪಿ ಹನೂಮಾಂಸ್ತಮಧಾವತ ॥ ೧ ॥

ಲಾಂಗೂಲಮುದ್ಯಮ್ಯ ವಿಶಾಲದೇಹಂ
ಸಂರಾವ ಮಾತತ್ಯ ಪಯೋದಘೋಷಂ ।
ರಣಸ್ಥಿತಂ ವೀರ ವರಂ ಕಪೀಂದ್ರೋ
ಜಗಾಮ ತಂ ವೀರಮಣಿಂ ನೃಪೇಂದ್ರಂ ॥ ೨ ॥

ಆಯಾಂತಂ ಚ ಹನೂಮಂತಂ ವೀಕ್ಷ್ಯ ಪುಷ್ಕಲ ಉದ್ಭಟಃ ।
ವಿಲೋಕಯಾಮಾಸ ದೃಶಾ ವೈರಕ್ರೋಧಸುಶೋಣಯಾ ॥ ೩ ॥

---

### ನಲವತ್ತೆರಡನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಮಹಾಸೈನ್ಯದ ಮಧ್ಯದಲ್ಲಿ ಆ ವೀರಮಣಿಯು, ಪುಷ್ಕಳನನ್ನು ಕರೆಯುತ್ತಿರಲು ಅದನ್ನು ನೋಡಿ ಹನುಮಂತನು ಅವನನ್ನು ಎದುರಿಸಿದನು.

೨. ಆ ಹನುಮಂತನು ಬಾಲವನ್ನೆತ್ತಿಕೊಂಡು, ದೊಡ್ಡದೇಹ ಮಾಡಿಕೊಂಡು ಮೇಘದಂತೆ ಕೂಗುತ್ತ ಯುದ್ಧರಂಗದಲ್ಲಿದ್ದ ಆ ವೀರಮಣಿಯನ್ನು ಎದುರಿಸಿದನು.

೩. ಹೀಗೆ ಬರುತ್ತಿರುವ ಹನುಮಂತನನ್ನು ಪುಷ್ಕಳನು ಕೋಪದಿಂದ ನೋಡಿದನು.

**ಜಗಾದ ತಂ ಹನೂಮಂತಂ ಪುಷ್ಕಲಃ ಪರಮಾಸ್ತ್ರವಿತ್ ।**
**ಮೇಘಗಂಭೀರಯಾ ವಾಚಾ ನಾದಯನ್ರಣಮಂಡಲಂ ॥ ೪ ॥**

**॥ ಪುಷ್ಕಲ ಉವಾಚ ॥**

**ಕಥಂ ತ್ವಂ ಸಮರೇ ಯೋದ್ಧುಮಾಗತೋಽಸಿ ಮಹಾಮತೇ ।**
**ಕಿಯದ್ಬಲಂ ಸ್ವಲ್ಪಮೇತದ್ರಾಜ್ಞೋ ವೀರಮಣೇರ್ಮಹತ್ ॥ ೫ ॥**

**ಯತ್ರ ತ್ರಿಜಗತೀ ಸರ್ವಾ ಸಂಮುಖಂ ಸಮುಪಾಗತಾ ।**
**ತತ್ರ ತ್ವಂ ಲೀಲಯಾ ಯೋದ್ಧುಂ ಯಾತುಮಿಚ್ಛಸಿ ವಾ ನ ವಾ ॥ ೬ ॥**

**ಕೋಽಯಂ ರಾಜಾ ವೀರಮಣಿಃ ಕಿಯದ್ಬಲಮಥಾಲ್ಪಕಂ ।**
**ಅತ್ರಾಗಮನಮತ್ಯುಗ್ರಂ ತವ ವೀರ ನ ಭಾವ್ಯತೇ ॥ ೭ ॥**

**ರಘುನಾಥಕೃಪಾಪಾಂಗಾದಹಂ ನಿಸ್ತೀರ್ಯ ದುಸ್ತರಂ ।**
**ಕ್ಷಣಾನ್ನಿರ್ಯಾಮಿ ಕೀಶೇಂದ್ರ ಮಾ ಚಿಂತಾಂ ಕುರು ಸಂಗರೇ ॥ ೮ ॥**

---

೪. ಪುಷ್ಕಳನು ಗರ್ಜಿಸುತ್ತ ಹನುಮಂತನನ್ನು ಕುರಿತು ಇಂತೆಂದನು.

೫. ಪುಷ್ಕಳನು ಹೇಳಿದನು :—ಎಲೈ ವಿವೇಕಿಯಾದ ಕಪಿಯೇ, ನೀನೇತಕ್ಕೆ ಯುದ್ಧಕ್ಕೆಬಂದೆ? ಈ ವೀರಮಣಿಯ ಬಲವೆಷ್ಟರದು? ಬಹು ಅಲ್ಪವಾದುದಲ್ಲವೆ!

೬. ಮೂರು ಲೋಕವೂ ಒಟ್ಟಿಗೆ ಯುದ್ಧಕ್ಕೆ ಬಂದರೂ ನೀನು ಅಲ್ಲಿಗೆ ಇಚ್ಛೆಯಿಂದ ಯುದ್ಧಮಾಡಲು ಹೋಗುತ್ತೀಯೋ? ಇಲ್ಲವೋ?

೭. ಈ ವೀರಮಣಿಯು ಯಾವ ರಾಜನು? ಅಲ್ಪನಾದ ಇವನ ಬಲವೆಷ್ಟರದು? ಈತನಿಗೋಸ್ಕರ ಅಂತಹ ಬಲಿಷ್ಠನಾದ ನೀನು ಬರಬೇಕಾದುದಿಲ್ಲ.

೮. ರಾಮನ ಕೃಪಾಕಟಾಕ್ಷದಿಂದ ಈ ಕಷ್ಟಗಳನ್ನು ಕ್ಷಣದಲ್ಲಿ ದಾಟುತ್ತೇನೆ. ಕಪಿಶ್ರೇಷ್ಠನೇ, ಯುದ್ಧದ ವಿಷಯವಾಗಿ ಚಿಂತಿಸಬೇಡ.

೯. ನೀನು ರಾಮನ ಕೃಪೆಯಿಂದ ರಾಕ್ಷಸಸಾಗರವನ್ನು ದಾಟಿದಂತೆ ನಾನು ಆ ಸ್ವಾಮಿಯ ಕೃಪೆಯಿಂದ ಇದನ್ನು ದಾಟುತ್ತೇನೆ.

ತ್ವಯಾ ರಾಕ್ಷಸಪಾಥೋಧಿಸ್ತೀರ್ಣೋ ರಾಮಕೃಪಾವ್ರಜಾತ್ ।
ತಥಾಹಂ ರಾಮಸಂಸ್ಮೃತ್ಯಾ ನಿಸ್ತರಿಷ್ಯಾಮಿ ದುಸ್ತರಂ ॥ ೯ ॥

ಯೇ ಕೇಚಿದ್ದುಸ್ತರಂ ಪ್ರಾಪ್ಯ ರಘುನಾಥಂ ಸ್ಮರಂತಿ ಚ ।
ತೇಷಾಂ ದುಃಖೋದಧಿಶ್ಶುಷ್ಕೋ ಭವಿಷ್ಯತಿ ನ ಸಂಶಯಃ ॥ ೧೦ ॥

ತಸ್ಮಾದ್ವ್ರಜ ಮಹಾವೀರ ಶತ್ರುಘ್ನಸನಿಧೇ ಬಲೀ ॥
ಏಷ ಆಯಾಮಿ ನಿರ್ಜಿತ್ಯ ಭೂಪಂವೀರಮಣಿಂ ಕ್ಷಣಾತ್ ॥ ೧೧ ॥

॥ ಶೇಷ ಉವಾಚ ॥

ಇತಿ ಧೀರಾಂ ಸಮಾಕರ್ಣ್ಯ ವಾಣೀಂ ಪುಷ್ಕಲಭಾಷಿತಾಂ ।
ಜಗಾದ ವಚನಂ ಭೂಯಃ ಪುಷ್ಕಲಂ ಪರವೀರಹಾ ॥ ೧೨ ॥

॥ ಹನುಮಾನುವಾಚ ॥

ಪುತ್ರ ಮಾ ಸಾಹಸಂ ಕಾರ್ಷೀರ್ಭೂಪಂ ವೀರಮಣಿಂ ಪ್ರತಿ ।
ಏಷ ದಾತಾ ಶರಣ್ಯಶ್ಚ ಬಲಶೌರ್ಯಸುಶೋಭಿತಃ ॥ ೧೩ ॥

ತ್ವಂ ಬಾಲಃ ಸ್ಥವಿರೋ ಭೂಪೋಽಖಿಲಶಸ್ತ್ರಾಸ್ತ್ರವಿತ್ತಮಃ ।
ಅನೇಕೇ ವಿಜಿತಾಃ ಸಂಖ್ಯೇ ವೀರಾಶ್ಶೌರ್ಯಸುಶೋಭಿತಾಃ ॥ ೧೪ ॥

---

೧೦. ಯಾರಾದರೂ ಕಷ್ಟವನ್ನು ಹೊಂದಿ ಶ್ರೀರಾಮನನ್ನು ಸ್ಮರಿಸಿದರೆ ಅವರ ದುಃಖಸಾಗರವು ಒಣಗಿಹೋಗುತ್ತದೆ. ಸಂಶಯವಿಲ್ಲ.

೧೧. ಆದ್ದರಿಂದ ನೀನು ಶತ್ರುಘ್ನನ ಬಳಿಯಲ್ಲಿರು. ನಾನು ಈ ವೀರಮಣಿಯನ್ನು ಜಯಿಸಿ ಬರುತ್ತೇನೆ.

೧೨. ಶೇಷನು ಹೇಳಿದನು:—ಪುಷ್ಕಳನು ಹೇಳಿದ ಈ ಧೀರವಾದ ಮಾತನ್ನು ಕೇಳಿ ಹನುಮಂತನು ಇಂತೆಂದನು.

೧೩. ಹನುಮಂತನು ಹೇಳಿದನು:—ಎಲೈ ಮಗುವೇ, ನೀನು ಈ ವೀರಮಣಿಯ ವಿಷಯದಲ್ಲಿ ಸಾಹಸಮಾಡಬೇಡ. ಇವನು ದಾನಿ, ರಕ್ಷಕ, ಬಲಶೌರ್ಯಗಳಿಂದ ಕೂಡಿದವನು.

೧೪. ನೀನು ಇನ್ನೂ ಹುಡುಗನು. ಆ ರಾಜನು ಮುದುಕನು. ಎಲ್ಲಾ ಶಸ್ತ್ರಾಸ್ತ್ರಗಳನ್ನು ಬಲ್ಲವನು. ಅನೇಕರನ್ನು ಯುದ್ಧದಲ್ಲಿ ಜಯಿಸಿದ್ದಾನೆ. ಶೌರ್ಯವಂತ.

ಜಾನೀಹಿ ಪಾರ್ಶ್ವಗ ಏತಸ್ಯ ರಕ್ಷಿತಾರಂ ಸದಾಶಿವಂ ।
ಭಕ್ತ್ಯಾ ವಶೀಕೃತಂ ಸ್ಥಾಣುಂ ಸೋಮಂ ಚೈತತ್ಪುರೀಸ್ಥಿತಂ ॥ ೧೫ ॥

ತಸ್ಮಾದಹಮನೇನೈವ ಯೋತ್ಸ್ಯೇ ಭೂಪೇನ ಪುಷ್ಕಲ ।
ಅನ್ಯಾನ್ವೀರಾನ್ವಿಜಿತ್ಯಾಶು ಕೀರ್ತಿಮಾಪ್ನುಹಿ ಪುಷ್ಕಲಾಂ ॥ ೧೬ ॥

ಶಿವೋ ಭಕ್ತ್ಯಾ ವಶೀಕೃತ್ಯ ಸ್ವಪುರೇ ಸ್ಥಾಪಿತೋಽಮುನಾ ।
ಪರಮಸ್ಯಾಶು ಹೃದಯೇ ನ ತಿಷ್ಠತಿ ಮಹೇಶ್ವರಃ ॥ ೧೭ ॥

ಸದಾಶಿವೋ ಯಮಾರಾಧ್ಯ ಪರಮಂ ಸ್ಥಾನಮಾಗತಃ ।
ಸ ರಾಮೋ ಮನ್ಮನಸ್ತ್ಯಕ್ತ್ವಾ ನ ಕ್ವಾಪಿ ಪರಿಗಚ್ಛತಿ ॥ ೧೮

ಯತ್ರ ರಾಮಸ್ತತ್ರ ವಿಶ್ವಂ ಸರ್ವಂ ಸ್ಥಾಸ್ನು ಚರಿಷ್ಣು ಚ ।
ತಸ್ಮಾದಹಂ ಜಯಿಷ್ಯಾಮಿ ರಣೇ ವೀರಮಣಿಂ ನೃಪಂ ॥ ೧೯ ॥

ವ್ರಜ ತ್ವಂ ಸಮರೇ ಯೋದ್ಧುಮನ್ಯಾನ್ಮಾನಿವರಾನ್ನೃಪಾನ್ ।
ವೀರಸಿಂಹಮುಖಾನ್ ಕೀಶ ಮಚ್ಚಿಂತಾಂ ಮಾ ಕುರು ಪ್ರಭೋ ॥ ೨೦ ॥

---

೧೫. ಸದಾಶಿವನು ಇವನನ್ನು ರಕ್ಷಿಸುತ್ತ ಪಕ್ಕದಲ್ಲಿಯೇ ಇರುವನೆಂದು ತಿಳಿ. ಅವನು ಇವನ ಭಕ್ತಿಯಿಂದ ವಶನಾಗಿ ಇವನ ಪಟ್ಟಣದಲ್ಲಿಯೇ ಇದ್ದುಬಿಟ್ಟಿರುವನು.

೧೬. ಆದ್ದರಿಂದ ನಾನೇ ಇವನೊಡನೆ ಯುದ್ಧಮಾಡುತ್ತೇನೆ. ನೀನು ಉಳಿದ ವೀರರೊಡನೆ ಯುದ್ಧಮಾಡಿ ಜಯಶೀಲನಾಗು.

೧೭. ಪುಷ್ಕಳನು ಹೇಳಿದನು:—ಇವನು ಶಿವನನ್ನು ವಶಮಾಡಿಕೊಂಡು ಪಟ್ಟಣದಲ್ಲಿಟ್ಟುಕೊಂಡಿದ್ದಾನೆಯಷ್ಟೆ? ಮನಸ್ಸಿನಲ್ಲಿ ಮಾತ್ರ ಅವನಿಲ್ಲ.

೧೮. ಆ ಸದಾಶಿವನು ಯಾವನನ್ನು ಪೂಜಿಸಿ ಉತ್ತಮಸ್ಥಾನವನ್ನು ಹೊಂದಿದನೋ ಅಂತಹ ಶ್ರೀರಾಮನು ನನ್ನ ಮನಸ್ಸನ್ನು ಬಿಟ್ಟು ಎಲ್ಲಿಗೂ ಹೋಗುವುದೇ ಇಲ್ಲ.

೧೯. ರಾಮನಿರುವ ಜಾಗದಲ್ಲಿಯೇ ಚರಾಚರವಾದ ಪ್ರಪಂಚವಿರುವುದು. ಆದ್ದರಿಂದ ನಾನು ವೀರಮಣಿಯನ್ನು ಜಯಿಸುತ್ತೇನೆ.

೨೦. ಆದ್ದರಿಂದ ಶೂರರಾದ ವೀರಸಿಂಹ ಮೊದಲಾದವರೊಡನೆ ಯುದ್ಧ ಮಾಡು. ಹೋಗು. ನನ್ನ ಯೋಚನೆಯನ್ನು ಬಿಡು.

ವಾಚಮಿತ್ಥಂ ಸಮಾಕರ್ಣ್ಯ ಹನೂಮಾನ್ವೀರತೇರಿತಾನ್ ।
ಜಗಾಮ ಸಂಗರೇ ಯೋದ್ಧುಂ ವೀರಸಿಂಹಂ ನೃಪಾನುಜಂ ॥ ೨೧ ॥

ಲಕ್ಷ್ಮೀನಿಧಿಸ್ಸುತೇನಾಸ್ಯ ಶುಭಾಂಗದಸುಸಂಜ್ಞಿನಾ ।
ದ್ವೈರಥೇನ ಪ್ರಯುಯುಧೇ ಮಹಾಶಸ್ತ್ರಾಸ್ತ್ರವೇದಿನಾ ॥ ೨೨ ॥

ಬಲಪುತ್ರೇಣ ಸುಮದಃ ಸ್ವಪ್ರತಾಪಬಲೋರ್ಜಿತಃ ।
ಯೋದ್ಧುಂ ಶಸ್ತ್ರಾಸ್ತ್ರಸಂಗ್ರಾಮವಿಚಾರಚತುರೋ ನೃಪಃ ॥ ೨೩ ॥

ಆಹ್ವಯಂತಂ ನೃಪಂ ದೃಷ್ಟ್ವಾ ದ್ವೈರಥೇ ಯುದ್ಧಕೋವಿದಃ ।
ಪುಷ್ಕಲೋ ಧರ್ಮಖಚಿತೇ ರಥೇ ತಿಷ್ಠನ್ ಯಯೌ ಹಿ ತಂ । ॥ ೨೪ ॥

ರಾಜಾ ತಮಾಗತಂ ದೃಷ್ಟ್ವಾ ಪುಷ್ಕಲಂ ಯುದ್ಧಕೋವಿದಂ ।
ಉವಾಚ ನಿರ್ಭಯಾ ವಾಣ್ಯಾ ರಣಮಧ್ಯೇ ಸುಭಾಷಿತಃ ॥ ೨೫ ॥

॥ ವೀರಮಣಿರುವಾಚ ॥

ಬಾಲ ಮಾ ಯಾಹಿ ಮಾಂ ಕ್ರುದ್ಧಂ ಸಂಗ್ರಾಮೇ ಚಂಡಕೋಪನಂ ।
ಗಚ್ಛ ಪ್ರಾಣಪರೀಪ್ಸಾಯೈ ಮಾ ಯುದ್ಧಂ ಕುರು ಮೇ ಸಹ ॥ ೨೬ ॥

---

೨೧. ಈ ಶೌರ್ಯದ ಮಾತನ್ನು ಕೇಳಿ ಹನುಮಂತನು ವೀರಸಿಂಹಾದಿ ಗಳೊಡನೆ ಯುದ್ಧಕ್ಕೆ ಹೋದನು.

೨೨. ಲಕ್ಷ್ಮೀನಿಧಿಯು ಇವನ ಮಗನಾದ ವೀರನಾದ ಶುಭಾಂಗದನೊಡನೆ ಯುದ್ಧಮಾಡಿದನು.

೨೩. ಸುಮದನು ಬಲಪುತ್ರನೊಡನೆ ಯುದ್ಧಕ್ಕೆ ನಿಂತನು.

೨೪. ಎದುರಿಗೆ ನಿಂತು ಯುದ್ಧಕ್ಕೆ ಕರೆಯುತ್ತಿರುವ ವೀರಮಣಿಯೊಡನೆ ಶಸ್ತ್ರಾಸ್ತ್ರಗಳು ತುಂಬಿದ ಚಿನ್ನದ ರಥದಲ್ಲಿ ಕುಳಿತು ಪುಷ್ಕಳನು ಹೋದನು.

೨೫. ವೀರಮಣಿಯು ಪುಷ್ಕಳನು ಯುದ್ಧಕ್ಕೆ ಬಂದುದನ್ನು ನೋಡಿ ನಿರ್ಭಯವಾಗಿ ಒಳ್ಳೆಯ ಮಾತಿನಿಂದ ಇಂತೆಂದನು.

೨೬. ವೀರಮಣಿಯು ಹೇಳಿದನು :—ಬಾಲನೇ, ಯುದ್ಧದಲ್ಲಿ ಚಂಡಕೋಪಿಯಾದ ನನ್ನೊಡನೆ ಯುದ್ಧಕ್ಕೆ ಬರಬೇಡ. ಪ್ರಾಣವನ್ನು ಉಳಿಸಿಕೋ, ಹೋಗು. ನನ್ನೊಡನೆ ಯುದ್ಧಮಾಡಬೇಡ.

ತ್ವಾದೃಶಾನ್ಬಾಲಕಾನ್ಭೂಪಾ ಮಾದೃಶಾಃ ಕೃಪಯಂತಿ ವೈ ।
ಪ್ರಹರಂತಿ ನ ಚೈತಾನ್ವೈ ತಸ್ಮಾದ್ಗಚ್ಛ ರಣಾದ್ಬಹಿಃ ॥ ೨೭ ॥

ಯಾವತ್ತ್ವಂ ನ ಮಯಾ ದೃಷ್ಟಶ್ಚಕ್ಷುರ್ಭ್ಯಾಂ ತಾವದುನ್ಮನಾಃ ।
ಸಾಂಪ್ರತಂ ತ್ವಾಂ ಪ್ರಹರ್ತುಂ ನ ಮನಃ ಸಮಭಿಕಾಂಕ್ಷತಿ ॥ ೨೮ ॥

ಯತ್ತ್ವಯಾ ಮತ್ಸುತೋ ಬಾಣೈರ್ಭಿನ್ನೋ ಮೂರ್ಛೀಕೃತಃ ಪುನಃ।
ಸರ್ವಂ ಮಯಾ ಕ್ಷಾಂತಮದ್ಯ ತವ ಬಾಲಧಿಯೋ ಮಹತ್ ॥ ೨೯ ॥

ಇತಿ ವಾಕ್ಯಂ ಸಮಾಕರ್ಣ್ಯ ಪುಷ್ಕಲೋ ವಾಕ್ಯಮಬ್ರವೀತ್ ॥ ೩೦ ॥

॥ ಪುಷ್ಕಲ ಉವಾಚ ॥

ಬಾಲೋಽಹಂ ತ್ವಂ ಮಹಾವೃದ್ಧಃ ಸರ್ವಶಸ್ತ್ರಾಸ್ತ್ರಕೋವಿದಃ ।
ಕ್ಷತ್ರಿಯಾಣಾಂ ಮತೇ ಯೇ ತು ಬಲಾಧಿಕ್ಯೇನ ಸಂಯುತಾಃ ॥ ೩೧ ॥

---

೨೭. ನಿನ್ನಂತಹ ಬಾಲರನ್ನು ನನ್ನಂತಹ ಶೂರರು ಕೃಪೆಯಿಂದ ಕಾಣುತ್ತಾರೆ. ಇಂತಹವರನ್ನು ಹೊಡೆಯುವುದಿಲ್ಲ. ಯುದ್ಧದಿಂದ ಹೊರಗೆಹೋಗು.

೨೮. ನನ್ನ ಕಣ್ಣಿಗೆ ಬೀಳುವವರೆಗೂ ನೀನು ಹರಟೆಹೊಡೆಯುತ್ತ ಊರಿನಾಗಿ ರಬಹುದು. ಈಗ ನೀನು ಹಸುಳೆಯಾದುದರಿಂದ ನಿನ್ನನ್ನು ಹೊಡೆಯಲು ನನಗೆ ಮನಸ್ಸುಬಾರದು.

೨೯. ನೀನು ಬಾಣಗಳಿಂದ ನನ್ನ ಮಗನನ್ನು ಹೊಡೆದು ಮೂರ್ಛೆಪಡಿ-ಸ್ದರೂಕೂಡ ಅದೆಲ್ಲವನ್ನೂ ನೀನು ಹುಡುಗನೆಂಬುದರಮೇಲೆ ಕ್ಷಮಿಸಿದ್ದೇನೆ.

೩೦. ಈ ಮಾತನ್ನು ಕೇಳಿ ಪುಷ್ಕಲನು ಇಂತೆಂದನು.

೩೧. ಪುಷ್ಕಲನು ಹೇಳಿದನು :—ನಾನು ಬಾಲನು. ನೀನು ಸರ್ವ ಶಸ್ತ್ರಾಸ್ತ್ರಗಳನ್ನು ಬಲ್ಲ ವೃದ್ಧನು. ಕ್ಷತ್ರಿಯರ ಮತದ ರೀತಿಯಾಗಿ ಯಾರು ಬಲಿಷ್ಠರೋ ಅವರೇ ವೃದ್ಧರು. ವಯಸ್ಸಾದವರು ವೃದ್ಧರಲ್ಲ.

ತ ಏವ ವೃದ್ಧಾ ಭೂಪಾಗ್ರ್ಯ ನ ವಯೋಽವೃದ್ಧತಾಂ ಗತಾಃ ।
ಮಯಾ ತೇ ಮೂರ್ಛಿತಃ ಪುತ್ರಃ ಸ್ವಶೌರ್ಯಬಲದರ್ಪಿತಃ ॥ ೩೨ ॥

ಇದಾನೀಂ ತ್ವಾಮಹಂ ಶಸ್ತ್ರೈಃ ಪಾತಯಿಷ್ಯಾಮಿ ಸಂಗರೇ ।
ತಸ್ಮಾತ್ತ್ವಂ ಯತ್ನತಸ್ತಿಷ್ಠ ರಾಜನ್ ಸಂಗ್ರಾಮಮೂರ್ಧನಿ ॥ ೩೩ ॥

ರಾಮಭಕ್ತಂ ನ ಮಾಂ ಕಂಚಿಜ್ಜಯತೀಂದ್ರಪದೇ ಸ್ಥಿತಃ ।
ಇತ್ಥಂ ಭಾಷಿತಮಾಶ್ರುತ್ಯ ಪುಷ್ಕಲಸ್ಯ ನೃಪಾಗ್ರಣೀಃ ॥ ೩೪ ॥

ಜಹಾಸ ಬಾಲಂ ಸಂವೀಕ್ಷ್ಯ ಕೋಪಂ ಚ ವ್ಯದಧಾತ್ಪುನಃ ।
ತಂ ವೈ ಕೋಪಿತಮಾಲಕ್ಷ್ಯ ಭರತಾತ್ಮಜ ಉನ್ಮದಃ ॥ ೩೫ ॥

ಜಘಾನ ಶರವಿಂಶತ್ಯಾ ರಾಜಾನಂ ಹೃದಿ ತೀಕ್ಷ್ಣಯಾ ।
ರಾಜಾ ತಾನಾಗತಾನ್ ದೃಷ್ಟ್ವಾ ಬಾಣಾಂಸ್ತೇನ ವಿಮೋಚಿತಾನ್ ॥ ೩೬ ॥

ಚಿಚ್ಛೇದ ಪರಮಕ್ರುದ್ಧಃ ಶರೈಸ್ತೀಕ್ಷ್ಣೈರನೇಕಧಾ ।
ತದ್ಬಾಣಚ್ಛೇದನಂ ದೃಷ್ಟ್ವಾ ಭಾರತಿಃ ಪರವೀರಹಾ ॥ ೩೭ ॥

---

೩೨-೩೩. ವೀರನಾದ ನಿನ್ನ ಮಗನನ್ನು ನಾನು ಮೂರ್ಛೆಕೆಡವಿದೆನು. ಈಗ ನಿನ್ನನ್ನು ನಾನು ಕೊಂದೇಬಿಡುತ್ತೇನೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ಯುದ್ಧದಲ್ಲಿ ಸಿದ್ಧನಾಗಿ ನಿಲ್ಲು.

೩೪. ರಾಮಭಕ್ತನಾಗಿರುವ ನನ್ನನ್ನು ಇಂದ್ರನಾದಾಗ್ಯೂ ಜಯಿಸಲಾರನು ಎನ್ನಲು ಈ ಪುಷ್ಕಲನ ಮಾತನ್ನು ಕೇಳಿ ಆ ವೀರಮಣಿಯು ನಗುತ್ತ ಕೋಪಗೊಂಡನು.

೩೫. ಅವನು ಕೋಪಗೊಂಡುದನ್ನು ನೋಡಿ ಪುಷ್ಕಳನು ಕೋಪಗೊಂಡು ಇಪ್ಪತ್ತು ಬಾಣಗಳನ್ನು ಅವನ ಎದೆಗೆ ಬಿಟ್ಟು ಹೊಡೆದನು.

೩೬. ರಾಜನು ಬರುತ್ತಿರುವ ಆ ಬಾಣಗಳನ್ನು ನೋಡಿ ಹರಿತವಾದ ಬಾಣಗಳಿಂದ ಮಧ್ಯದಲ್ಲಿಯೇ ಕತ್ತರಿಸಿದನು.

೩೭-೩೮. ಆ ಬಾಣಗಳನ್ನು ಕತ್ತರಿಸಿದುದನ್ನು ವೀರನಾದ ಪುಷ್ಕಳನು ನೋಡಿ

ಚುಕೋಪ ಹೃದಯೇತ್ಯಂತಂ ರಾಜಾನಂ ಚ ತ್ರಿಭಿಶ್ಶರೈಃ ।
ವಿವ್ಯಾಧ ಭಾಲೇ ಭೂಪಾಲಪುತ್ರಃ ಪುಷ್ಕಲಸಂಜ್ಞಿತಃ ॥ ೩೭ ॥

ತತ್ರ ಲಗ್ನಾ ವಿರೇಜುಸ್ತೇ ತ್ರಿಕೂಟಶಿಖರಾಣಿ ಕಿಂ ।
ತೈರ್ಬಾಣೈರ್ವ್ಯಥಿತೋ ರಾಜಾ ಜಘಾನ ನವಭಿಶ್ಶರೈಃ ॥ ೩೮ ॥

ಹೃದಯೇ ಪುಷ್ಕಲಂ ವೀರಂ ಮಹಾಕೋಪಸಮನ್ವಿತಃ ।
ತೈರ್ವತ್ಸದಂತೈರ್ಬಹ್ವಸ್ರಂ ಪೀತಂ ರಾಮಾನುಜಾಂಗಜಂ ॥ ೪೦ ॥

ಸರ್ಪಾ ಆಶೀವಿಷಾ ಯದ್ವತ್ಕ್ರುದ್ಧಾಸ್ತದ್ವಪುಷಿ ಸ್ಥಿತಾಃ ।
ಪರಮಂ ಕೋಪಮಾಪನ್ನಃ ಪುಷ್ಕಲೋ ಭೂಮಿಪಂ ಪುನಃ ॥ ೪೧ ॥

ಬಾಣಾನಾಂ ಶತಕೇನಾಶು ಬಿಭೇದ ಶಿತಪರ್ವಣಾ ।
ತೈರ್ಬಾಣೈಃ ಕವಚಂ ಭಿನ್ನಂ ಕಿರೀಟಸ್ಸಶಿರಸ್ತ್ರಕಃ ॥ ೪೨ ॥

---

ಮನಸ್ಸಿನಲ್ಲಿ ಕೋಪಗೊಂಡು ಮೂರು ಬಾಣಗಳಿಂದ ಆ ರಾಜನ ಹಣೆಯನ್ನು ಹೊಡೆದನು.

೩೯. ಆ ಹಣೆಯಲ್ಲಿ ಚುಚ್ಚಿಕೊಂಡ ಆ ಮೂರು ಬಾಣಗಳೂ ತ್ರಿಕೂಟಶಿಖರಗಳಂತಿದ್ದುವು. ಆ ಬಾಣಗಳಿಂದ ದುಃಖಗೊಂಡ ರಾಜನು ಒಂಭತ್ತು ಬಾಣಗಳಿಂದ ಪುಷ್ಕಳನನ್ನು ಹೊಡೆದನು.

೪೦. ಆ ಬಾಣಗಳು ಈತನ ಹೃದಯಕ್ಕೆ ಬಿದ್ದು ಬಹು ರಕ್ತವನ್ನು ಸುರಿಸಿದವು.

೪೧. ಹಾಗೆ ಹೊಡೆದ ಅಸ್ತ್ರಗಳು ಕೋಪಗೊಂಡ ಸರ್ಪಗಳು ಅವನ ದೇಹದಲ್ಲಿ ತಂಪಿಕೊಂಡಿವೆಯೋ ಎಂಬತಿದ್ದುವು. ಅದರಿಂದ ಪುಷ್ಕಳನು ಬಹು ಕೋಪಗೊಂಡು ವೀರಮಣಿಯನ್ನು ಕುರಿತು ಬಾಣಗಳನ್ನು ಹೊಡೆದನು.

೪೨. ಮೂರು ಬಾಣಗಳನ್ನು ಬಿಟ್ಟು ಹೊಡೆದನು. ಆ ಬಾಣಗಳು ಅವನ ಕವಚವನ್ನೂ ಕಿರೀಟವನ್ನೂ ಪುಡಿಮಾಡಿದವು.

ರಥೋ ಧನುರ್ಮಹತ್ಸಜ್ಯಂ ಚ್ಛಿನಂ ಕೋಪಪರಿಪ್ಲವಾತ್ ।
ಕ್ಷತಜೇನ ಪರಿಪ್ಲುಷ್ಟೋ ಬಾಣಭಿನ್ನಕಳೇಬರಃ ॥ ೪೩ ॥

ಅನ್ಯಂ ಸ್ಯಂದನಮಾರುಹ್ಯ ಜಗಾಮ ಭರತಾತ್ಮಜಂ ।
ಧನ್ಯೋಽಸಿ ವೀರ ರಾಮಸ್ಯ ಚರಣಾಬ್ಜಮಧುವ್ರತ ॥ ೪೪ ॥

ಮಹತ್ಕೃತಂ ಕರ್ಮ ತೇಽದ್ಯ ಯದಹಂ ವಿರಥೀಕೃತಃ ।
ಪ್ರಾಣಾನ್ರಕ್ಷಸ್ವ ಭೋ ವೀರ ಸಾಂಪ್ರತಂ ಮಯಿ ಯುಧ್ಯತಿ ॥ ೪೫ ॥

ಸುಲಭಾ ನ ತವ ಪ್ರಾಣಾಃ ಕಾಲರೂಪೇ ಮಯಿ ಸ್ಥಿತೇ ।
ಇತ್ಯುಕ್ತ್ವಾ ವ್ಯಹನದ್ಬಾಣೈರಸಂಖ್ಯೈರಸ್ತ್ರಕೋವಿದಃ ॥ ೪೬ ॥

ಭೂಮೌ ದಿಶಿ ಚ ತದ್ಬಾಣಾನ್ನಾನ್ಯದ್ದೃಶ್ಯೇತ ತತ್ರ ಹ ।
ಅನೇಕೇ ಗಜಸಾಹಸ್ರಾ ಭಿನ್ನಾ ಅಶ್ವಾಸ್ಸಮಂತತಃ ॥ ೪೭ ॥

ರಥಾ ರಥಿಯುತಾಸ್ತೇನ ಛಿನ್ನಾ ಭಿನ್ನಾ ದ್ವಿಧಾಕೃತಾಃ ।
ಶೋಣಿತೌಘಾ ಸರಿತ್ತತ್ರ ಪ್ರಸುಸ್ರಾವ ರಣಾಂಗಣೇ ॥ ೪೮ ॥

---

೪೩. ರಥವೂ ಧನುಸ್ಸೂ ಕೂಡ ಪುಡಿಪುಡಿಯಾದವು. ಅವನ ಮೈಯೆಲ್ಲವೂ ರಕ್ತದಿಂದ ನೆನೆದಿತು. ಬೇರೆ ರಥವನ್ನು ಹತ್ತಿ ಆ ಪುಷ್ಕಳನನ್ನು ಎದುರಿಸಿದನು.

೪೪-೪೫. ಎಲೈ ರಾಮಭಕ್ತನಾದ ವೀರನೇ, ನೀನು ಧನ್ಯನು. ನೀನು ನನ್ನ ರಥವನ್ನು ಕತ್ತರಿಸಿದುದರಿಂದ ಮಹಾಕಾರ್ಯವನ್ನು ಮಾಡಿದಂತೆಯೇ ಆಯಿತು. ಈಗ ನಾನು ಯುದ್ಧಮಾಡುತ್ತೇನೆ. ಪ್ರಾಣಗಳನ್ನು ಕಾಪಾಡಿಕೋ.

೪೬. ಯಮಸ್ವರೂಪನಾಗಿ ನಾನಿರಲು ನಿನ್ನ ಪ್ರಾಣಗಳು ನಿನಗೆ ಸುಲಭವಲ್ಲ. ಹೀಗೆಂದು ಹೇಳಿ ಅನೇಕ ಬಾಣಗಳಿಂದ ಹೊಡೆದನು.

೪೭-೪೮. ಭೂಮಿಯಲ್ಲೂ ದಿಕ್ಕುಗಳಲ್ಲಿಯೂ ಅವನ ಬಾಣಗಳಲ್ಲದೆ ಬೇರೆ ಏನೂ ಕಾಣುತ್ತಲೇ ಇರಲಿಲ್ಲ. ಆನೆಗಳು, ಕುದುರೆಗಳು, ರಥಗಳು ಸಾವಿರಗಟ್ಟಲೆಯಲ್ಲಿ ನಾಶವಾದವು. ರಕ್ತದ ನದಿಯೇ ಅಲ್ಲಿ ಹರಿಯಿತು.

ಯತ್ರೋನ್ಮದಾ ಹಿ ಮಾತಂಗಾ ದೃಶ್ಯಂತೇ ಶೈಲಶೃಂಗವತ್ ।
ಕೇಶಾಃ ಶೈವಾಲವಲ್ಲರ್ಯ್ಯಾ ಮುಹುಃ ಪ್ರಾಣಿಶಿರಸ್ಥಿತಾಃ ॥ ೪೯ ॥

ಅನೇಕೇ ಪಾಣಯಚ್ಛಿನ್ನಾ ವೀರಾಣಾಂ ಮುದ್ರಿಕಾನ್ವಿತಾಃ ।
ದೃಶ್ಯಂತೇ ಅಹಿವತ್ತತ್ರ ಚಂದನಾದಿಕರೂಷಿತಾಃ ॥ ೫೦ ॥

ಶಿರಾಂಸಿ ಚ ಭಟಾಗ್ರ್ಯಾಣಾಂ ಕಚ್ಛಪಾಭಾಂ ವಹಂತಿ ವೈ ।
ಮಾಂಸಾನಿ ಪಂಕಾ ಯತ್ರಾಸನ್ವೀರಾಣಾಂ ಮೃತಾಂ ತತಃ ॥ ೫೧ ॥

ಏವಂ ವ್ಯತಿಕರೇ ವೃತ್ತೇ ಯೋಗಿನ್ಯಶ್ಚತತೋ ರಣೇ ।
ಪಪುಃ ಪಾತ್ರೇಣ ರುಧಿರಂ ಪ್ರಾಣಿನಾಂ ರಣಪಾತಿನಾಂ ॥ ೫೨ ॥

ಮಾಂಸಾನಿ ಬುಭುಜುಸ್ತಾ ವೈ ಹರ್ಷಕೌತುಕಸಂಯುತಾಃ ।
ಪೀತ್ವಾ ತು ಶೋಣಿತಂ ತತ್ರ ಭಕ್ಷಿತ್ವಾ ಮಾಂಸಕಂ ಮುದಾ ॥ ೫೩ ॥

ನನೃತುರ್ಜಹಸುಃ ಪ್ರೋಚ್ಚೈರುಜ್ಜಗುಃ ಪ್ರಧನಾಂಗಣೇ ।
ಪಿಶಾಚಾಸ್ತತ್ರ ಸಮರೇ ಪ್ರಾಣಿನಾಂ ಮಸ್ತಕಾನಿ ವೈ ॥ ೫೪ ॥

---

೪೯. ಆ ರಕ್ತದ ನದಿಯಲ್ಲಿ ಆನೆಗಳು ಪರ್ವತಗಳಂತೆ ಕಂಡವು. ಭಟರ ತಲೆ ಗೂದಲು ಪಾಚಿಯಂತೆ ಕಾಣುತ್ತಿದ್ದುವು.

೫೦. ಅಲ್ಲಿ ಕತ್ತರಿಸಿ ಬಿದ್ದಿದ್ದ ಕೈಗಳು ಉಂಗುರಗಳುಳ್ಳವಳಾಗಿ ಸರ್ಪಗಳಂತೆ ಕಾಣುತ್ತಿದ್ದವು.

೫೧. ವೀರರ ತಲೆಗಳು ಆಮೆಗಳಂತೆಯೂ, ಮಾಂಸಗಳು ಕೆಸರಿನಂತೆಯೂ ಕಾಣುತ್ತಿದ್ದವು.

೫೨. ಹೀಗೆ ನಡೆಯುತ್ತಿರಲು ಯೋಗಿನಿಯರು ಆ ರಣರಂಗದಲ್ಲಿ ಪಾತ್ರೆಗಳಿಂದ ರಕ್ತವನ್ನು ಮೊಗೆದು ಮೊಗೆದು ಕುಡಿಯುತ್ತಿದ್ದರು.

೫೩-೫೪. ಅಂತೆಯೇ ಮಾಂಸವನ್ನು ತಿಂದರು. ಪಿಶಾಚಗಳು ರಕ್ತವನ್ನು ಕುಡಿದು ಮಾಂಸವನ್ನು ತಿಂದು ಕುಣಿದುವು, ನಕ್ಕವು, ಹಾಡಿದವು. ಅಲ್ಲಿ ಬಿದ್ದಿರುವ ತಲೆಬುರುಡೆಗಳನ್ನು ತೆಗೆದುಕೊಂಡು ತಾಳದಂತೆ ಬಡಿಯುತ್ತಿದ್ದುವು.

ಧೃತ್ವಾ ಕರಾಭ್ಯಾಂ ಮತ್ತಾಂಗಾಸ್ತಾಲವದ್ವಾದನೋದ್ಯತಾಃ ।
ಶಿವಾಸ್ತತ್ರ ಮಹಾಮಾಂಸಂ ಪತಿತಾನಾಂ ರಣಾಂಗಣೇ ॥ ೫೫ ॥

ಭಕ್ಷಿತ್ವಾ ವ್ಯಸದನ್ಮತ್ತಾಃ ಕಾತರಾಣಾಂ ಭಯಪ್ರದಂ ।
ಕಾತರಾಸ್ತತ್ರ ಸಂತ್ರಸ್ತಾ ಗತಾಃ ಕುಂಜರಕೋಟರೇ ॥ ೫೬ ॥

ಭಕ್ಷಿತಾ ಯೋಗಿನೀಭಿಸ್ತೇ ಪಾಪಿನಾಂ ಕ್ವಾಪಿ ನ ಸ್ಥಿತಿಃ ।
ಏತತ್ಕದನಮಾಲಕ್ಷ್ಯ ಸ್ವಸೈನ್ಯಸ್ಯ ರಣಾಗ್ರಣೀಃ ॥ ೫೭ ॥

ಪುಷ್ಕಲೋಽಪಿ ಚಕಾರಾತ್ರ ಕದನಂ ರಣಮಂಡಲೇ ।
ಭಿದ್ಯಂತೇ ಗಜಶೀರ್ಷಾಣಿ ಪತಂತಿ ಮೌಕ್ತಿಕಾನಿ ತು ॥ ೫೮ ॥

ದೃಶ್ಯಂತೇ ಲೋಮಭಿಃ ಪೂರ್ಣಾಸ್ತಾಮ್ರಪರ್ಣೀವ ತನ್ನದೀ ।
ಪುಷ್ಕಲಪ್ರಹಿತಾ ಬಾಣಾ ನೃಣಾಮಂಗೇಷು ಸಂಗತಾಃ ॥ ೫೯ ॥

ಕುರ್ವಂತಿ ಪ್ರಾಣವಿಚ್ಛೇದಂ ವೀರಾಣಾಮಪಿ ಸರ್ವತಃ ।
ಸರ್ವೇ ರುಧಿರಸಿಕ್ತಾಂಗಾಃ ಸರ್ವೇ ಛಿನ್ನನಿಜಾಂಗಕಾಃ ॥ ೬೦ ॥

---

೫೫-೫೬. ನರಿಗಳು ಅಲ್ಲಿ ಬಿದ್ದಿರುವ ಮನುಜರ ಮಾಂಸವನ್ನು ತಿಂದು ಮತ್ತವಾದುವು. ಅವೆಲ್ಲವೂ ಹೇಡಿಗಳಿಗೆ ಹೆದರಿಕೆಯನ್ನುಂಟುಮಾಡುತ್ತಿದ್ದಿತು. ಅವರು ಹೆದರಿ ಆನೆಗಳು ಬಿದ್ದಿರುವ ಜಾಗದ ಪೊಟರೆಗಳಲ್ಲಿ ಅವಿತುಕೊಂಡರು.

೫೭-೫೮. ಯೋಗಿನಿಯರೆಲ್ಲರೂ ಅದನ್ನು ತಿನ್ನುತ್ತಿದ್ದರು. ಪಾಪಿಗಳಿಗೆ ಅಲ್ಲಿ ಜಾಗವೇ ಇಲ್ಲ. ಈ ಯುದ್ಧವಾಗಿ ತನ್ನ ಸೈನ್ಯದ ಸ್ಥಿತಿಯನ್ನು ನೋಡಿದ ವೀರನಾದ ಪುಷ್ಕಳನೂ ಮಹಾಯುದ್ಧವನ್ನು ಮಾಡಿ ಆನೆಗಳ ತಲೆಗಳನ್ನು ಸೀಳಿದನು. ಅದರಿಂದ ಮುತ್ತುಗಳು ಬೀಳುತ್ತಿದ್ದುವು. (ಶ್ರೇಷ್ಠವಾದ ಆನೆಯ ತಲೆಯಲ್ಲಿ ಮುತ್ತಿರುವುದೆಂದು ಹೇಳುತ್ತಾರೆ.)

೫೯. ಆ ರಕ್ತನದಿಯು ತಾಮ್ರಪರ್ಣೀನದಿಯಂತೆ ಕೂದಲಿನಿಂದಲೂ ಕೂಡಿದ್ದಿತು. ಪುಷ್ಕಳನು ಬಿಟ್ಟ ಬಾಣಗಳು ಮೈಯಲ್ಲಿ ಚುಚ್ಚಿಕೊಂಡು ವೀರರಿಗೆಲ್ಲಾ ಪ್ರಾಣಗಳನ್ನು ತೆಗೆಯುತ್ತಿದ್ದುವು.

೬೦. ಎಲ್ಲರೂ ರಕ್ತದಿಂದ ತೊಯಿದಿದ್ದರು. ಎಲ್ಲರೂ ಅಂಗಹೀನರಾಗಿದ್ದರು. ಇದನ್ನು ನೋಡಿದರೆ ಭಟರೆಲ್ಲರೂ ಹೂಬಿಟ್ಟ ಮುತ್ತುಗದಮರದಂತೆ ಪ್ರಕಾಶಿಸುತ್ತಿದ್ದರು.

ವೃಕ್ಷಂತೇ ಕಿಂಶುಕಾ ಯದ್ವತ್ಸುಭಟಾಃ ಪ್ರಧನಾಂಗಣೇ ।
ಏತಸ್ಮಿನ್ಸಮಯೇ ಕ್ರುದ್ಧಃ ಸಮಾಭಾಷ್ಯ ಮಹೀಪತಿಂ ॥ ೬೧ ॥

ಜಘಾನ ದಶಬಾಣೈಸ್ತಂ ರೋಷಪೂರಪರಿಪ್ಲುತಃ ।
ತದ್ಬಾಣವೇಧಭಿನ್ನಾಂಗೋ ನಿಶೀರ್ಣಕವಚೋ ನೃಪಃ ॥ ೬೨ ॥

ಮಹಾಬಲಂ ತಂ ಮನ್ವಾನಃ ಪ್ರಾಹರಚ್ಛರಕೋಟಿಭಿಃ ।
ತೈರ್ಬಾಣೈಃ ಕವಚಾನ್ಮುಕ್ತಂ ಸ್ರವದ್ಬಹುಸುಶೋಣಿತಂ ॥ ೬೩ ॥

ವಪುರ್ಬಭೂವ ರುಚಿರಂ ಶರಪಂಜರಗೋಚರಂ ।
ಶರಪಂಜರಮಧ್ಯಸ್ಥೋ ನಿಶ್ಚಲೀಕೃತಮಾನಸಃ ॥ ೬೪ ॥

ಶರಾನ್ನೇತುಂ ಚ ಸಂಧಾತುಂ ನ ಚಕ್ಷಾಮ ಸ ಭಾರತಿಃ ।
ರಾಮಂ ಸ್ಮೃತ್ವಾ ಧನುರ್ಧೃತ್ವಾ ಕರೇ ಸಜ್ಯಂ ಮಹದ್ಬಟಿಃ ॥ ೬೫ ॥

ಮುಮೋಚ ಬಾಣಾನ್ನಿಶಿತಾನ್ ವೈರಿವೃಂದನಿವಾರಣಾನ್ ।
ತೈರ್ಬಾಣೈಶ್ಶರಜಾಲಂ ತದ್ವಿಧೂಯ ದ್ವಿಜಪುಂಗವ ।
ಶಂಖಂ ಪ್ರಧ್ಮಾಯ ಸಮರೇ ಜಗಾದ ಗತಭೀರ್ನೃಪಂ ॥ ೬೬ ॥

---

೬೧. ಈ ಸಮಯದಲ್ಲಿ ಪುಷ್ಕಳನು ಕೋಪಗೊಂಡು ರಾಜನನ್ನು ಕೂಗಿ ಕೋಪದಿಂದ ಹತ್ತು ಬಾಣಗಳನ್ನು ಬಿಟ್ಟನು.

೬೨. ಆ ಬಾಣಗಳ ಏಟಿನಿಂದ ಕವಚವು ಕತ್ತರಿಸಿದ್ದರಿಂದ ವೀರಮಣಿಯು ಪುಷ್ಕಳನನ್ನು ವೀರನೆಂದು ತಿಳಿದು ಅನೇಕ ಬಾಣಗಳಿಂದ ಹೊಡೆದನು.

೬೩-೬೪. ಆ ಬಾಣಗಳು ಕವಚಗಳಿಂದ ಒಳಗೆ ಚುಚ್ಚಿ ರಕ್ತಸುರಿಯುವಂತೆ ಮಾಡಿದುವು. ಅವನ ಶರೀರವು ಶರಪಂಜರದಲ್ಲಿದ್ದಂತೆ ಇದ್ದಿತು. ಶರಪಂಜರದಲ್ಲಿದ್ದಂತಿದ್ದುದರಿಂದ ಆ ಪುಷ್ಕಳನು ಬಾಣಗಳನ್ನು ತೆಗೆದುಕೊಳ್ಳುವುದಕ್ಕೂ ಹೂಡುವುದಕ್ಕೂ ಅಸಮರ್ಥನಾದನು.

೬೫. ಆಗ ಪುಷ್ಕಳನು ರಾಮನನ್ನು ಧ್ಯಾನಮಾಡಿ ಧನುಸ್ಸನ್ನು ಸರಿಮಾಡಿಕೊಂಡು ವೈರಿನಿವಾರಕವಾದ ಬಾಣಗಳನ್ನು ಬಿಟ್ಟನು.

೬೬. ಆ ಬಾಣಗಳಿಂದ ಆ ಶರಗಳನ್ನು ಕತ್ತರಿಸಿ ಹೊರಕ್ಕೆ ಬಂದು ಶಂಖವನ್ನು ಊದಿದನು ಮತ್ತು ಅವನನ್ನು ಕುರಿತು ಇಂತೆಂದನು.

॥ ಪುಷ್ಕಲ ಉವಾಚ ॥

ತ್ವಯಾ ಕೃತಂ ಮಹತ್ಕರ್ಮ ಯನ್ಮಾಂ ಬಾಣಸ್ಯ ಪಂಜರೇ ।
ಗೋಚರಂ ಕೃತವಾನ್ ವೀರ ವೀರತಾಪನಮುದ್ಭಟಂ ॥ ೬೭ ॥

ವೃದ್ಧತ್ವಾನ್ಮಮ ಮಾನ್ಯೋಽಸಿ ಸಾಂಪ್ರತಂ ರಣಮಂಡಲೇ ।
ಪಶ್ಯ ಮೇಽದ್ಯ ಪರಾಕ್ರಾಂತಂ ರಾಜನ್ವೀರಮಣೇ ಮಹತ್ ॥ ೬೮ ॥

ಬಾಣತ್ರಯೇಣ ಭೋ ವೀರ ಮೂರ್ಛಿತಂ ಕರವೈ ನ ಹಿ ।
ತರ್ಹಿ ಪ್ರತಿಜ್ಞಾಂ ಶೃಣು ಮೇ ಸರ್ವವೀರವಿಮೋಹಿನೀಂ ॥ ೬೯ ॥

ಗಂಗಾಂ ಪ್ರಾಪ್ಸ್ಯಾಮಿ ಯೋ ವೈ ತಾಂ ನಿಂದಿತ್ವಾ ಪಾಪಹಾರಿಣೀಂ ।
ನ ಮಜ್ಜತಿ ಮಹಾಪಾಪೋ ಮಹಾಮೂಢವಿಚೇಷ್ಟಿತಂ ॥ ೭೦ ॥

ತಸ್ಯ ಪಾಪಂ ಮಮೈವಾಸ್ತು ಚೇನ್ನ ತ್ವಾಂ ರಣಮಂಡಲೇ ।
ಪತಿತಂ ಮೂರ್ಛಯಾ ನೈವ ಕರಿಷ್ಯೇ ತೀಕ್ಷ್ಣಸಾಯಕೈಃ ॥ ೭೧ ॥

ಸಾಂಪ್ರತಂ ವೀರಬುದ್ಧ್ಯಾ ತ್ವಂ ಸನ್ನದ್ಧೋ ಭವ ಭೂಪತೇ ॥ ೭೨ ॥

---

೬೭. ಪುಷ್ಕಳನು ಹೇಳಿದನು:—ಎಲೈ ವೀರನೇ, ಬಾಣಪಂಜರದಲ್ಲಿ ನನ್ನನ್ನು ಕಟ್ಟಿದುದರಿಂದ ನೀನು ವೀರಕರ್ಮವನ್ನು ಮಾಡಿದೆ. ಇದು ವೀರರು ಹೊಗಳ ತಕ್ಕುದೇ !

೬೮. ನೀನು ವೃದ್ಧನಾದುದರಿಂದ ಯುದ್ಧಮಂಡಲದಲ್ಲಿ ನನಗೆ ಮಾನ್ಯನಾಗಿದ್ದೀಯೆ. ಎಲೈ ವೀರಮಣಿಯೇ, ನನ್ನ ಪರಾಕ್ರಮವನ್ನು ನೋಡು.

೬೯. ಎಲೈ ವೀರನೇ, ನಾನು ಮೂರು ಬಾಣಗಳಿಂದ ನಿನ್ನನ್ನು ಮೂರ್ಛೆ ಬೀಳಿಸದಿದ್ದರೆ ವೀರರನ್ನು ಬೆದರಿಸುವ ನನ್ನ ಪ್ರತಿಜ್ಞೆಯನ್ನು ಕೇಳು.

೭೦. ಯಾವ ಮನುಷ್ಯನು ಗಂಗೆಯನ್ನು ಹೊಂದಿ ಅದನ್ನು ನಿಂದಿಸುತ್ತಾ ಸ್ನಾನಮಾಡದೆ ಮೂಢನಾಗಿ ಬರುತ್ತಾನೋ ಅಂತಹವನ ಪಾಪವು ನನಗೆಬರಲಿ.

೭೧-೭೨. ಈಗ ಕ್ರೂರವಾದ ಬಾಣಗಳಿಂದ ನಿನ್ನನ್ನು ಮೂರ್ಛೆಕೆಡವುತ್ತೇನೆ. ವೀರಬುದ್ಧಿಯಿಂದ ಸಿದ್ಧನಾಗು.

ಇತಿ ವಾಕ್ಯಂ ಸಮಾಕರ್ಣ್ಯ ಪುಷ್ಕಲಸ್ಯ ನೃಪೋತ್ತಮಃ ।
ಚುಕೋಪ ಭೃಶಮುದ್ವಿಗ್ನಃ ಸಂದಧೇ ನಿಶಿತಾನ್ ಶರಾನ್ ॥ ೭೩ ॥

ತೇ ಶರಾ ಹೃದಯಂ ಭಿತ್ವಾ ಗತಾಸ್ತೇ ಭಾರತೇರ್ಮಹತ್ ।
ಪೇತುಃ ಕ್ಷಿತಾವಧೋ ಯದ್ವದ್ರಾಮಭಕ್ತಿಪರಾಙ್ಮುಖಾಃ ॥ ೭೪ ॥

ತತಶ್ಶರಂ ಮುಮೋಚಾಸ್ಮೈ ನಿಶಿತಂ ವಹ್ನಿಸಪ್ರಭಂ ।
ಲಕ್ಷೀಕೃತ್ಯ ಮಹದ್ವಕ್ಷಃ ಕಪಾಟತಟವಿಸ್ತೃತಂ ॥ ೭೫ ॥

ಸ ಬಾಣೋ ಭೂಮಿಪತನಾದ್ದ್ವಿಧಾ ಭಿನ್ನಃ ಶರೇಣ ಹಿ ।
ಪಪಾತ ರಥಮಧ್ಯೇಽಪಿ ಭೂಮಂಡಲಮಿವ ಜ್ವಲನ್ ॥ ೭೬ ॥

ಅಪರಂ ಬಾಣಮಾಧತ್ತ ಮಾತೃಭಕ್ತಿಭವಂ ತತಃ ।
ನಿಧಾಯ ಪುಣ್ಯಂ ಸೋಽಪ್ಯೇಷ ಚಿಚ್ಛೇದ ಮಹತಾ ಪುನಃ ॥ ೭೭ ॥

ತದಾ ಖಿನ್ನಸ್ಸ ಹೃದಯೇ ಕಿಂ ಕರ್ತವ್ಯಮಿತಿ ಸ್ಮರನ್ ।
ರಾಮಂ ಹೃದಿ ನಿಜಾರ್ತಿಘ್ನಂ ಮುಮೋಚ ಪರಮಾಸ್ತ್ರವಿತ್ ॥ ೭೮ ॥

---

೭೩. ಪುಷ್ಕಲನ ಈ ಮಾತನ್ನು ಕೇಳಿ ವೀರಮಣಿಯು ಕೋಪದಿಂದ ಚೂಪಾದ ಬಾಣಗಳನ್ನು ಹೂಡಿದನು.

೭೪. ಆ ಬಾಣಗಳು ಪುಷ್ಕಳನ ಹೃದಯವನ್ನು ಹೊಕ್ಕು ರಾಮಭಕ್ತಿಯಿಂದ ಹೀನರಾದವರಂತೆ ಕೆಳಗೆ ಬಿದ್ದವು.

೭೫. ಅನಂತರ ಗುರಿಕಟ್ಟಿ ಹೃದಯಕ್ಕೆ ಬಾಣಬಿಟ್ಟನು.

೭೬. ಆ ಬಾಣವು ಬರುವಷ್ಟರೊಳಗೆ ಎರಡಾಗಿ ಕತ್ತರಿಸಲು ರಥದ ಮಧ್ಯ ದಲ್ಲಿಯೇ ಬಿದ್ದಿತು. ಅದು ಬಿದ್ದು ಭೂಮಿಯಮಂಡಲದಂತಿದ್ದಿತು.

೭೭. ತಾಯಿಯಲ್ಲಿಯೇ ಭಕ್ತಿಯ ಪುಣ್ಯವನ್ನು ಇಟ್ಟು ಮತ್ತೊಂದು ಬಾಣ ವನ್ನು ಬಿಟ್ಟನು. ವೀರಮಣಿಯು ಅದನ್ನು ಕತ್ತರಿಸಿದನು.

೭೮. ಆಗ ಪುಷ್ಕಲನು ಏನುಮಾಡಲೆಂದು ಯೋಚಿಸುತ್ತ ಕಷ್ಟನಿವಾರಕನಾದ ರಾಮನನ್ನು ಸ್ಮರಿಸಿ ಅವನ್ನು ಬಾಣದಲ್ಲಿಟ್ಟು ಬಿಟ್ಟನು.

ಸ ಬಾಣಸ್ತಸ್ಯ ಹೃದಯೇ ಲಗ್ನ ಆಶೀವಿಷೋಪಮಃ ।
ಮೂರ್ಛಾಮಪ್ರಾಪಯತ್ತಂ ವೈ ಜ್ವಲನ್ ಸೂರ್ಯಸಮಪ್ರಭಃ ॥ ೭೯ ॥

ತತೋ ಹಾಹಾಕೃತಂ ಸರ್ವಂ ಪಲಾಯನಪರಾಯಣಂ ।
ರಾಜ್ಞಿ ಸಂಮೂರ್ಛಿತೇ ಜಾತೇ ಪುಷ್ಕಲೋ ಜಯಮಾಪ್ತವಾನ್ ॥ ೮೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಪುಷ್ಕಲವಿಜಯೋ ನಾಮ
ದ್ವಿಚತ್ವಾರಿಂಶೋಽಧ್ಯಾಯಃ

---

೭೯. ಸರ್ಪದಂತಿರುವ ಆ ಬಾಣವು ಅವನ ಎದೆಯಲ್ಲಿ ನೆಟ್ಟುಕೊಂಡು ಅವನಿಗೆ ಮೂರ್ಛೆಯನ್ನು ತಂದಿತು.

೮೦. ಅನಂತರ ಎಲ್ಲರೂ ಹಾಹಾಕಾರಮಾಡುತ್ತ ಓಡಿದರು. ರಾಜನು ಮೂರ್ಛೆಬೀಳುತ್ತಲೂ ಪುಷ್ಕಲನು ಜಯವನ್ನು ಹೊಂದಿದನು

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಪುಷ್ಕಲವಿಜಯವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.



## ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ತ್ರಿಚತ್ವಾರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಹನೂಮಾನ್ವೀರಸಿಂಹಂ ತು ಸಮಾಗತ್ಯಾಬ್ರವೀದ್ವಚಃ ।
ತಿಷ್ಠ ಯಾಸಿ ಕುತೋ ವೀರ ಜೇಷ್ಯಾಮಿ ತ್ವಾಂ ಕ್ಷಣಾದಿಹ ॥ ೧ ॥

ಏವಮುಕ್ತಂ ಸಮಾಕರ್ಣ್ಯ ಪ್ಲವಂಗಸ್ಯ ವಚೋ ಮಹತ್ ।
ಕೋಪಪೂರಪರಿಪ್ಲುಷ್ಟಃ ಕಾರ್ಮುಕಂ ಜಲದಸ್ವನಂ ॥ ೨ ॥

ವಿನದ್ಯ ಘೋರಾನ್ನಿಶಿತಾನ್ ಬಾಣಾನ್ಮುಂಚನ್ಪ್ರಭೌ ರಣೇ ।
ಆಷಾಢೇ ಜಲದಸ್ಯೇವ ಧಾರಾಸಾರೋ ಮನೋಹರಃ ॥ ೩ ॥

---

## ನಲವತ್ತಮೂರನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಹನುಮಂತನು ವೀರಸಿಂಹನನ್ನು ಎದುರಿ- ಎಲೈ ವೀರನೇ ಎಲ್ಲಿ ಹೋಗುತ್ತೀಯೋ? ನಿಲ್ಲು. ನಿನ್ನನ್ನು ಒಂದು ಕ್ಷಣದಲ್ಲಿ ಜಯಿಸುತ್ತೇನೆ,

೨-೩. ಹೀಗೆ ಹೇಳಿದ ಕಪಿಯ ಮಾತನ್ನು ಕೇಳಿ ವೀರಸಿಂಹನು ಕೋಪದಿಂದ ಬಿಲ್ಲನ್ನು ಝೇಂಕರಿಸುತ್ತ ಆಷಾಢಮಾಸದಲ್ಲಿ ಮೇಘವು ಮಳೆಗರೆವಂತೆ ಬಾಣಗಳನ್ನು ಅವನ ಮೇಲೆ ಬಿಟ್ಟನು.

ತಾನ್ದೃಷ್ಟ್ವಾ ನಿಶಿತಾನ್ಬಾಣಾನ್ಸ್ವವಪುಷ್ಯೇ ವಿಲಗ್ನಕಾನ್ ।
ಚುಕೋಪ ಹೃದಯೇಽತ್ಯಂತಂ ತಂ ಹಂತುಂ ಮನ ಆದಧೇ ॥ ೪ ॥

ಮುಷ್ಟಿನಾ ತಾಡಯಾಮಾಸ ಹೃದಯೇ ವಜ್ರಸಾರಿಣಾ ।
ಸ ಮುಷ್ಟಿನಾ ಹತೋ ವೀರಃ ಪಪಾತ ಧರಣೀತಲೇ ॥ ೫ ॥

ಮೂರ್ಛಿತಂ ತಂ ಸಮಾಲೋಕ್ಯ ಪಿತೃವ್ಯಂ ಸ ಶುಭಾಂಗದಃ ।
ರುಕ್ಮಾಂಗದೋಽಪಿ ಸಮ್ಮೂರ್ಛಾಂ ತ್ಯಕ್ತ್ವಾಗಾದ್ರಣಮಂಡಲಂ ॥ ೬ ॥

ಬಾಣಾನ್ಸಮಭಿವರ್ಷಂತೌ ಮೇಘಾವಿವ ಮಹಾಸ್ವನೌ ।
ಕುರ್ವಂತೌ ಕದನಂ ಘೋರಂ ಪ್ಲವಂಗಂ ಪ್ರತಿ ಜಗ್ಮತುಃ ॥ ೭ ॥

ತೌ ದೃಷ್ಟ್ವಾ ಸಮರೇ ವೀರೌ ಸಮಾಯಾತೌ ಕಪೀಶ್ವರಃ ।
ಲಾಂಗೂಲೇನ ಚ ಸಂವೇಷ್ಟ್ಯ ಸರಥೌ ಚಾಪಧಾರಕೌ ॥ ೮ ॥

ಸ್ಫೋಟಯಾಮಾಸ ಭೂದೇಶೇ ತತ್ಕ್ಷಣಾನ್ಮೂರ್ಛಿತಾವುಭೌ ।
ನಿಶ್ಚೇಷ್ಟೌ ಸಮಭೂತಾಂ ತೌ ರುಧಿರಾಕ್ರಾಂತದೇಹಕೌ ॥ ೯ ॥

---

೪. ತನ್ನ ದೇಹದಲ್ಲಿ ಚುಚ್ಚಿಕೊಂಡ ಆ ಬಾಣಗಳನ್ನು ನೋಡಿ ಅವನನ್ನು ಕೊಲ್ಲಲು ಮನಸ್ಸುಮಾಡಿದನು.

೫. ಹನುಮಂತನು ವಜ್ರಮುಷ್ಟಿಯಿಂದ ಎದೆಯ ಮೇಲೆ ಹೊಡೆದನು. ಒಡನೆಯೇ ಆ ವೀರಸಿಂಹನು ನೆಲದ ಮೇಲೆ ಬಿದ್ದನು.

೬. ಚಿಕ್ಕಪ್ಪನು ಮೂರ್ಛೆಬಿದ್ದಿರುವುದನ್ನು ನೋಡಿ ಶುಭಾಂಗದನು ಕೋಪದಿಂದ ರಣಕ್ಕೆ ಬಂದನು. ಮತ್ತು ರುಕ್ಮಾಂಗದನೂ ಮೂರ್ಛೆ ತಿಳಿದು ಯುದ್ಧಕ್ಕೆ ಬಂದನು.

೭. ಬಾಣಗಳನ್ನು ಬಿಡುತ್ತಾ ಗುಡುಗಿನಂತೆ ಗರ್ಜಿಸುತ್ತಾ ಯುದ್ಧಮಾಡುತ್ತಾ ಅವರಿಬ್ಬರೂ ಕಪಿಯ ಬಳಿಗೆ ಬಂದರು.

೮-೯. ಆ ವೀರರನ್ನು ನೋಡಿ ಕಪೀಶ್ವರನು ಯುದ್ಧಕ್ಕೆ ಬಂದು ಅವರಿಬ್ಬರನ್ನೂ ರಥದೊಡನೆ ಬಾಲದಲ್ಲಿ ಕಟ್ಟಿ ನೆಲದಲ್ಲಿ ಬಡಿಯಲು ಅವರಿಬ್ಬರೂ ರಕ್ತವನ್ನು ಕಾರುತ್ತಾ ಮೂರ್ಛೆಹೋದರು.

ಬಲಮಿತ್ರಶ್ಚಿರಂ ಯುದ್ಧಂ ವಿಧಾಯ ಸುಮದೇನ ಹಿ ।
ಮೂರ್ಛಾಮಪ್ರಾಪಯತ್ತಂ ಸ್ವೈ ರ್ಬಾಣೈಸ್ಸುಶಿತಪರ್ವಭಿಃ ॥ ೧೦ ॥

ಪುಷ್ಕಲೇನ ಕ್ಷಣಾನ್ನೀತೋ ಮೂರ್ಛಾಂ ಚೈತನ್ಯವರ್ಜಿತಾಂ ।
ಜಯಮಾಪ್ತಂ ತು ಕಟಕಂ ಶತ್ರುಘ್ನಸ್ಯ ಭಟಾರ್ದನಂ ॥ ೧೧ ॥

ಏತಸ್ಮಿನ್ಸಮಯೇ ಶರ್ವಃ ಸ್ಯಂದನಂ ಪರಮಾಸ್ಥಿತಃ ।
ವಿಸ್ಫಾರಯನ್ಧನುರ್ದಿವ್ಯಮುಪಾಧಾವದ್ಭಟಾನಿಮಾನ್ ॥ ೧೨ ॥

ಜಟಾಜೂಟಾಂತರಗತಾಂ ಚಂದ್ರಲೇಖಾಂ ವಹನ್ಮಹಾನ್ ।
ಸರ್ಪಭೂಷಾಂ ಮನಸ್ಪೃಶ್ಯಾಂ ದಧದಾಜಗವಂ ಧನುಃ ॥ ೧೩ ॥

ಸಂಮೂರ್ಛಿತಾನ್ಸ್ವನಾನ್ದೃಷ್ಟ್ವಾ ಭಕ್ತಾರ್ತಿಘ್ನೋ ಮಹೇಶ್ವರಃ ।
ಯೋದ್ಧುಂ ಪ್ರಾಯಾನ್ಮಹತ್ಸೈನ್ಯೇ ಶತ್ರುಘ್ನಸ್ಯ ಭಟಾನಿಮಾನ್ ॥ ೧೪ ॥

ಸಗಣಸ್ಸಪರೀವಾರಃ ಕಂಪಯನ್ಪೃಥಿವೀತಳಂ ।
ಭಕ್ತರಕ್ಷಾರ್ಥಮಾಗಚ್ಛಂಸ್ತ್ರಿಪುರಂ ಚ ಯಥಾಪುರಾ ॥ ೧೫ ॥

---

೧೦. ಬಲಮಿತ್ರನು ಬಹಳ ಹೊತ್ತು ಸುಮದನೊಡನೆ ಯುದ್ಧಮಾಡಿ ಅವನನ್ನು ಬಾಣದಿಂದ ಮೂರ್ಛೆಗೆಡಿಸಿದನು.

೧೧. ಪುಷ್ಕಳನು ರಾಜನನ್ನು ಮೂರ್ಛೆ ಕೆಡಿಸುತ್ತಲೂ, ಒಟ್ಟಿನಲ್ಲಿ ರಾಮನ ಸೇನೆಯು ಜಯವನ್ನು ಹೊಂದಿತು.

೧೨. ಇಷ್ಟರೊಳಗೆ ಈಶ್ವರನು ಧನುಸ್ಸನ್ನು ಟೇಂಕರಿಸುತ್ತ ಸೈನ್ಯವನ್ನು ಎದುರಿಸುತ್ತಾ ಬಂದನು.

೧೩. ತಲೆಯಲ್ಲಿ ಚಂದ್ರನನ್ನು ಧರಿಸಿ ಸರ್ಪಭೂಷಣನಾಗಿ ಅಜಗವೆಂಬ ಧನುಸ್ಸನ್ನು ಹಿಡಿದು ಆ ಶಿವನು ಬಂದನು.

೧೪. ಭಕ್ತರ ಕಷ್ಟವನ್ನು ಪರಿಹರಿಸುವ ಮಹೇಶ್ವರನು ಭಕ್ತರು ಮೂರ್ಛೆ ಬಿದ್ದಿರುವುದನ್ನು ನೋಡಿ ಶತ್ರುಘ್ನನ ಭಟರ ಮೇಲೆ ಯುದ್ಧಮಾಡಲು ಬಂದನು.

೧೫. ಗಣಗಳೊಡನೆ ಭೂಮಿಯನ್ನು ನಡುಗಿಸುತ್ತಾ ತ್ರಿಪುರದ ಸಂಹಾರಕ್ಕೆ ಹೋಗುತ್ತಿದ್ದವನಂತೆ ಭಕ್ತರ ರಕ್ಷಣೆಗೆ ಬಂದನು.

ಕೋಪಾಚ್ಛೋಣತರೇ ನೇತ್ರೇ ವಹನ್ಪ್ರಳಯಕಾರಕಃ ।
ಪಶ್ಯನ್ವೀರಾನ್ಸಮುಮತೀನ್ಪಿನಾಕೀ ದೇವವಂದಿತಃ ॥ ೧೬ ॥

ತಮಾಗತಂ ಮಹೇಶಾನಂ ವೀಕ್ಷ್ಯ ರಾಮಾನುಜೋ ಬಲೀ ।
ಜಗಾಮ ಸಮರೇ ಯೋದ್ಧುಂ ಸರ್ವದೇವಶಿರೋಮಣಿಂ ॥ ೧೭ ॥

ಅಥಾಗತಂ ತು ಶತ್ರುಘ್ನಂ ರುದ್ರೋ ವೀಕ್ಷ್ಯ ಪಿನಾಕಭೃತ್ ।
ಉವಾಚ ಪರಮಾಪನ್ನಃ ಕೋಪಂ ಸಗುಣಚಾಪಭೃತ್ ॥ ೧೮ ॥

ಪುಷ್ಕಲೇನ ಮಹತ್ಕರ್ಮ ಕೃತಂ ರಾಮಾಂಘ್ರಿಸೇವಿನಾ ।
ಮದ್ಭಕ್ತಂ ಯೋ ರಣೇ ಹತ್ವಾ ಗತಃ ಸಮರಮಂಡಲಂ ॥ ೧೯ ॥

ಅದ್ಯ ಕ್ವಾಸ್ತಿ ಪರೋ ವೀರಃ ಪುಷ್ಕಲಃ ಪರಮಾಸ್ತ್ರವಿತ್ ।
ತಂ ಹತ್ವಾ ಸುಖಮಾಪ್ಸ್ಯಾಮಿ ಸಮರೇ ಭಕ್ತಪೀಡನಂ ॥ ೨೦ ॥

॥ ಶೇಷ ಉವಾಚ ॥

ಇತ್ಯುಕ್ತ್ವಾ ವೀರಭದ್ರಂ ಸ ಪ್ರೇಷಯಾಮಾಸ ಪುಷ್ಕಲಂ ।
ಯಾಹಿ ತ್ವಂ ಸಮರೇ ಯೋದ್ಧುಂ ಪುಷ್ಕಲಂ ಸೇವಕಾರ್ದನಂ ॥ ೨೧ ॥

---

೧೬. ಪ್ರಳಯಕಾರಕನಾದ ಶಿವನು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ವೀರರನ್ನು ನೋಡುತ್ತಾ ಬಂದನು.

೧೭. ಶತ್ರುಘ್ನನು ಮಹೇಶನು ಬಂದುದನ್ನು ನೋಡಿ ಯುದ್ಧಕ್ಕೆ ಹೊರಟನು.

೧೮. ರುದ್ರನು ಶತ್ರುಘ್ನನು ಬಂದುದನ್ನು ನೋಡಿ ಕೋಪದಿಂದ ಇಂತೆಂದನು.

೧೯. ನನ್ನ ಭಕ್ತನಾದ ವೀರಮಣಿಗೆ ಮೂರ್ಛೆಬಂದಂತೆ ಯುದ್ಧಮಾಡಿದ ರಾಮಸೇವಕನಾದ ಪುಷ್ಕಳನು ಮಹಾಕಾರ್ಯಮಾಡಿದನು.

೨೦. ಈಗ ಆ ವೀರನಾದ ಪುಷ್ಕಳನೆಲ್ಲಿ ಹೋದನು? ಭಕ್ತರನ್ನು ಪೀಡಿಸಿದ ಆತನನ್ನು ಕೊಂದು ಸುಖಿಯಾಗುತ್ತೇನೆ.

೨೧. ಶೇಷನು ಹೇಳಿದನು :—ಹೀಗೆಂದು ಹೇಳಿ ವೀರಭದ್ರನನ್ನು ಕುರಿತು ನೀನು ಭಕ್ತನನ್ನು ನೋಯಿಸಿದ ಪುಷ್ಕಳನ ಎದುರಾಗಿ ಹೋಗೆಂದು ಕಳುಹಿಸಿದನು.

ನಂದಿನಂ ಪ್ರೇಷಯಾಮಾಸ ಹನೂಮಂತಂ ಮಹಾಬಲಂ ।
ಕುಶಧ್ವಜಂ ಪ್ರಚಂಡಂ ತು ಭೃಂಗಿಣಾಂ ಚ ಸುಬಾಹುಕಂ　　॥ ೨೨ ॥

ಸುಮದಂ ಚಂಡನಾಮಾನಂ ಗಣಂ ಸ್ವೀಯಂ ಸಮಾದಿಶತ್ ।
ಪುಷ್ಕಲಸ್ತು ಸಮಾಯಾಂತಂ ವೀರಭದ್ರಂ ಮಹಾಗಣಂ　　॥ ೨೩ ॥

ಮಹಾರುದ್ರಸ್ಯ ಸಂವೀಕ್ಷ್ಯ ಯೋದ್ಧುಂ ಪ್ರಾಯಾನ್ಮಹಾಮನಾಃ ।
ಪುಷ್ಕಲಃ ಪಂಚಭಿರ್ಬಾಣೈಸ್ತಾಡಯಾಮಾಸ ಸಂಯುಗೇ　　॥ ೨೪ ॥

ತೈರ್ಬಾಣೈಃ ಕ್ಷತಗಾತ್ರಸ್ತು ತ್ರಿಶೂಲಂ ಸ ಸಮಾದದೇ ।
ಸ ತ್ರಿಶೂಲಂ ಕ್ಷಣಾಚ್ಛಿತ್ವಾ ವ್ಯಗರ್ಜತ ಮಹಾಬಲಃ　　॥ ೨೫ ॥

ಛಿನ್ನಂ ಸ್ವೀಯಂ ತ್ರಿಶೂಲಂ ವೈ ವೀಕ್ಷ್ಯ ರುದ್ರಾನುಗೋ ಬಲೀ
ಖಟ್ವಾಂಗೇನ ಜಘಾನಾಶು ಮಸ್ತಕೇ ಭಾರತಿಂ ದ್ವಿಜ　　॥ ೨೬ ॥

ಖಟ್ವಾಂಗಾಭಿಹತಃ ಸೋಽಥ ಮುಮೂರ್ಛ ಕ್ಷಣಮುದ್ಭಟಃ ।
ವಿಹಾಯ ಮೂರ್ಛಾಂ ಸದ್ವೀರಃ ಪುಷ್ಕಲಃ ಪರಮಾಸ್ತ್ರವಿತ್　　॥ ೨೭ ॥

---

೨೨. ಹನುಮಂತನ ಮೇಲೆ ನಂದಿಯನ್ನೂ, ಕುಶಧ್ವಜನ ಮೇಲೆ ಪ್ರಚಂಡನನ್ನೂ, ಸುಬಾಹುವಿನ ಮೇಲೆ ಭೃಂಗಿಯನ್ನೂ ಸುಮದನ ಮೇಲೆ ಚಂಡನನ್ನೂ ಸಹ ಯುದ್ಧಮಾಡಲು ಕಳುಹಿಸಿದನು.

೨೩. ಪುಷ್ಕಳನು, ರುದ್ರನ ಗಣವಾದ ವೀರಭದ್ರನು ಬರುತ್ತಿರುವುದನ್ನು ನೋಡಿ ಯುದ್ಧಕ್ಕೆ ಹೊರಟನು.

೨೪-೨೫. ಪುಷ್ಕಳನು ವೀರಭದ್ರನನ್ನು ಐದು ಬಾಣಗಳಿಂದ ಹೊಡೆಯಲು ಅದರಿಂದ ನೋವು ತಿಂದ ವೀರಭದ್ರನು ತ್ರಿಶೂಲವನ್ನು ತೆಗೆದನು. ಅದನ್ನು ಪುಷ್ಕಳನು ಕತ್ತರಿಸಿ ಗರ್ಜಿಸಿದನು.

೨೬. ತ್ರಿಶೂಲವು ಛಿನ್ನವಾಗಲು ವೀರಭದ್ರನು ಖಟ್ವಾಂಗವನ್ನು ತೆಗೆದುಕೊಂಡು ಪುಷ್ಕಳನಿಗೆ ತಲೆಯ ಮೇಲೆ ಹೊಡೆದನು.

೨೭. ಖಟ್ವಾಂಗದಿಂದ ಹೊಡೆಯಲು ಪುಷ್ಕಳನು ಕ್ಷಣಕಾಲ ಮೂರ್ಛೆಗೊಂಡನು. ಅನಂತರ ಮೂರ್ಛೆ ತಿಳಿಯಲು ಅವನ ಕೈಯಲ್ಲಿರುವ ಆ ಖಟ್ವಾಂಗವನ್ನೂ ಕತ್ತರಿಸಿದನು.

ಚಿಚ್ಛೇದ ಖಟ್ವಾಂಗಮಪಿ ಕರಸ್ಥಂ ತಸ್ಯ ತತ್ಕ್ಷಣಾತ್ ।
ವೀರಭದ್ರಸ್ತ್ವಕೇ ಛಿನ್ನೇ ಖಟ್ವಾಂಗೇ ಕರಸಂಸ್ಥಿತೇ ॥ ೨೮ ॥

ಪರಮಂ ಕ್ರೋಧಮಾಪನ್ನೋ ಬಭಂಜ ರಥಿನೋ ರಥಂ ।
ಭಂಕ್ತ್ವಾ ರಥಂ ತು ವೀರಸ್ಯ ಪದಾತಿಂ ಚ ವಿಧಾಯ ಸಃ ॥ ೨೯ ॥

ಬಾಹುಯುದ್ಧೇನ ಯುಯುಧೇ ಪುಷ್ಕಲೇನ ಮಹಾತ್ಮನಾ ।
ಸ ಪುಷ್ಕಲೋ ರಥಂ ತ್ಯಕ್ತ್ವಾ ಚೂರ್ಣಿತಂ ತೇನ ವೇಗತಃ ॥ ೩೦ ॥

ಮುಷ್ಟಿನಾ ತಾಡಯಾಮಾಸ ವೀರಭದ್ರಂ ಮಹಾಬಲಃ ।
ಅನ್ಯೋನ್ಯಂ ಮುಷ್ಟಿಭಿರ್ಘ್ನನ್ತಾವೂರುಭಿರ್ಜಾನುಭಿಸ್ತಥಾ ॥ ೩೧ ॥

ಪರಸ್ಪರವಧೋದ್ಯುಕ್ತೌ ಪರಸ್ಪರಜಯೈಷಿಣೌ ।
ಏವಂ ಚತುರ್ದಿನಮಭೂದ್ರಾತ್ರಿಂದಿವಮುಪೀಶಯೋಃ ॥ ೩೨ ॥

ನ ಕೋಽಪಿ ತತ್ರ ಹೀಯೇತ ನ ಜೀಯೇತ ಮಹಾಬಲಃ ।
ಪಂಚಮೇ ತು ದಿನೇ ವೃತ್ತೇ ವೀರಭದ್ರೋ ಮಹಾಬಲಃ ॥ ೩೩ ॥

---

೨೮. ವೀರಭದ್ರನು ತನ್ನ ಖಟ್ವಾಂಗವು ನಾಶವಾಗಲು ಕೋಪಗೊಂಡು ಅವನ ರಥವನ್ನು ಮುರಿದನು.

೨೯. ಆ ಪುಷ್ಕಳನ ರಥವನ್ನು ಮುರಿದು ಪದಾತಿಯನ್ನಾಗಿ ಮಾಡಿ ಅನಂತರ ಬಾಹುಯುದ್ಧವನ್ನು ಮಾಡಿದನು.

೩೦. ಪುಷ್ಕಳನು ಆ ಮುರಿದುಹೋದ ರಥವನ್ನು ಬಿಟ್ಟು ಮುಷ್ಟಿಯಿಂದ ವೀರಭದ್ರನನ್ನು ಹೊಡೆದನು.

೩೧. ಇವರಿಬ್ಬರೂ ಒಬ್ಬರನ್ನೊಬ್ಬರು ಕೊಂದು ಜಯಪಡೆಯಬೇಕೆಂದು ಮುಷ್ಟಿಗಳಿಂದಲೂ, ತೊಡೆಗಳಿಂದಲೂ, ಮಂಡಿಗಳಿಂದಲೂ ಹೊಡೆದಾಡಿದರು.

೩೨. ಹಗಲೂ ರಾತ್ರಿಯೂ ಈರೀತಿ ಆ ಮಹಾಬಲರು ಯುದ್ಧಮಾಡಿದರು ಆದರೆ ಒಬ್ಬನೂ ಸೋಲಲಿಲ್ಲ.

೩೩. ಐದನೆಯ ದಿನ ವೀರಭದ್ರನು ಪುಷ್ಕಳನನ್ನು ಹೊತ್ತುಕೊಂಡು ಅಂತರಿಕ್ಷಕ್ಕೆ ಹಾರಿದನು.

ಗೃಹೀತ್ವಾ ನಭ ಉಡ್ಡೀನೋ ಮಹಾವೀರಂ ತು ಪುಷ್ಕಲಂ ।
ತತ್ರ ಯುದ್ಧಂ ತಯೋರಾಸೀದ್ದೇವಾಸುರವಿಮೋಹನಂ ॥ ೩೪ ॥

ಮುಷ್ಟಿನಾ ಚರಣಾಘಾತೈರ್ಬಾಹುಭಿಸ್ಸುಖುರೈರ್ನ್ಯಹತ್ ।
ತದಾತ್ಯಂತಂ ಪ್ರಕುಪಿತಃ ಪುಷ್ಕಲೋ ವೀರಭದ್ರಕಂ ॥ ೩೫ ॥

ಗೃಹೀತ್ವಾ ಕಂಠದೇಶೇ ತು ತಾಡಯಾಮಾಸ ಭೂತಲೇ ।
ತತ್ಪ್ರಹಾರೇಣ ವ್ಯಥಿತೋ ವೀರಭದ್ರೋ ಮಹಾಬಲಃ ॥ ೩೬ ॥

ಗೃಹೀತ್ವಾ ಪುಷ್ಕಲಂ ಪಾದೇ ಜಘಾನಾಸ್ಫಾಲಯನ್ಮುಹುಃ ।
ತಾಡಯಿತ್ವಾ ಮಹೀದೇಶೇ ಪುಷ್ಕಲಂ ಸುಮಹಾಬಲಂ ॥ ೩೭ ॥

ತ್ರಿಶೂಲೇನ ಚಕರ್ತಾಶು ಶಿರೋಜ್ವಲಿತಕುಂಡಲಂ ।
ಜಗರ್ಜ ಪುಷ್ಕಲಂ ಹತ್ವಾ ವೀರಭದ್ರೋ ಮಹಾಬಲಃ ॥ ೩೮ ॥

ಗರ್ಜತಾ ತೇನ ಶಾರ್ವೇಣ ಪ್ರಾಪಿತಾಸ್ತ್ರಾಸಮುದ್ಭಟಾಃ ।
ಹಾಹಾಕಾರೋ ಮಹಾನಾಸೀತ್ಪುಷ್ಕಲೇ ಪತಿತೇ ರಣೇ ॥ ೩೯ ॥

---

೩೪. ಆ ಅಂತರಿಕ್ಷದಲ್ಲಿಯೂ ಕೂಡ, ಅವರಿಗೆ ದೇವಾಸುರವಿಮೋಹನವಾದ ಯುದ್ಧವಾಗಿ ಮುಷ್ಟಿ, ಪಾದ, ಬಾಹು, ಉಗುರುಗಳಿಂದ ಹೊಡೆದಾಡುತ್ತಿದ್ದರು.

೩೫. ಆಗ ಪುಷ್ಕಳನು ಕೋಪಗೊಂಡು ವೀರಭದ್ರನನ್ನು ಕತ್ತಿನಲ್ಲಿ ಹಿಡಿದು ಕೊಂಡು ನೆಲಕ್ಕೆ ಬಡಿದನು.

೩೬. ಆ ಏಟಿನಿಂದ ನೊಂದ ವೀರಭದ್ರನು ಪುಷ್ಕಲನ ಕಾಲುಗಳನ್ನು ಹಿಡಿದು ಕೊಂಡು ನೆಲಕ್ಕೆ ಬಡಿದನು.

೩೭. ಹೀಗೆ ಭೂಮಿಯಲ್ಲಿ ಬಡಿದು ತ್ರಿಶೂಲವನ್ನು ತೆಗೆದುಕೊಂಡು ತಲೆ ಯನ್ನು ಕತ್ತರಿಸಿದನು.

೩೮. ವೀರಭದ್ರನು ಪುಷ್ಕಲನನ್ನು ಕೊಂದು ಗರ್ಜಿಸಿದನು.

೩೯. ಆ ವೀರಭದ್ರನು ಗರ್ಜಿಸುತ್ತಿರಲು ವೀರರೆಲ್ಲರೂ ಕಣ್ಣೀರುಬಿಡುತ್ತಾ ಹಾಹಾಕಾರಮಾಡಿದರು.

ತ್ರಾಸಂ ಪ್ರಾಪುರ್ಜನಾಸ್ಸರ್ವೇ ರಣಮಧ್ಯೇ ಸುಕೋವಿದಾಃ ।
ತೇ ಶಶಂಸುಶ್ಚ ಶತ್ರುಘ್ನಂ ಪುಷ್ಕಲಂ ಪಾತಿತಂ ರಣೇ ॥ ೪೦ ॥

ವೀರಭದ್ರೇಣ ವೀರೇಣ ಮಹೇಶ್ವರಗಣೇನ ವೈ ।
ಇತ್ಯಾಶ್ರುತ್ಯ ಮಹಾವೀರಃ ಪುಷ್ಕಲಸ್ಯ ವಧಂ ತಥಾ ॥ ೪೧ ॥

ದುಃಖಂ ಪ್ರಾಪ್ತೋ ರಣೇಽತ್ಯಂತಂ ಕಂಪಮಾನಶ್ಚ ಚಾ ಮುಹರ್ಹ ।
ತಂ ದುಃಖಿತಂ ಚ ಶತ್ರುಘ್ನಂ ಜ್ಞಾತ್ವಾ ರುದ್ರೋಽಬ್ರವೀದ್ವಚಃ ॥ ೪೨ ॥

ಶತ್ರುಘ್ನಂ ಸಮರೇ ವೀರಂ ಶೋಚಂತಂ ಪುಷ್ಕಲೇ ಹತೇ ।
ರೇ ಶತ್ರುಘ್ನ ರಣೇ ಶೋಕಂ ಮಾ ಕೃಥಾಸ್ಸುಮಹಾಬಲ ॥ ೪೩ ॥

ವೀರಾಣಾಂ ರಣಮಧ್ಯೇ ತು ಪಾತನಂ ಕೀರ್ತಯೇ ಸ್ಮೃತಂ ।
ಧನ್ಯೋ ವೀರಃ ಪುಷ್ಕಲಾಖ್ಯೋ ಯಶ್ಚ ವೈ ದಿನಪಂಚಕಂ ॥ ೪೪ ॥

---

೪೦. ಯುದ್ಧದಲ್ಲಿ ಹೆದರಿದ ಅವರ ಭಟರು ಪುಷ್ಕಳನು ಸತ್ತುದನ್ನು ಶತ್ರುಘ್ನನಿಗೆ ತಿಳಿಸಿದರು.

೪೧. ಮಹೇಶ್ವರನ ಗಣವಾದ ವೀರಭದ್ರನು ಪುಷ್ಕಲನನ್ನು ಕೊಂದನೆಂದು ಹೇಳಲು ಅದನ್ನು ಕೇಳಿ ಶತ್ರುಘ್ನನು ದುಃಖವನ್ನು ಹೊಂದಿ ನಡುಗುತ್ತಾ ಅಳುತ್ತಿದ್ದನು.

೪೨-೪೩. ಶತ್ರುಘ್ನನು ದುಃಖಗೊಂಡುದನ್ನು ರುದ್ರನು ತಿಳಿದು ಶತ್ರುಘ್ನನೇ! ಬಲಿಷ್ಠರು ಯುದ್ಧದಲ್ಲಿ ದುಃಖಿಸಲಾರರು. ವೀರರು ಯುದ್ಧದಲ್ಲಿ ಸಾಯುವುದು ಕೀರ್ತಿಕರವಾದುದು ಎಂದನು.

೪೪. ಐದು ದಿನದವರೆಗೆ ವೀರಭದ್ರನ ಜೊತೆಯಲ್ಲಿ ಯುದ್ಧಮಾಡಿದ ಪುಷ್ಕಲನೇ ಧನ್ಯನು. ಅವನು ಐದು ದಿನಗಳವರೆಗೆ ಮಹಾಪ್ರಳಯಕಾರಿಯಾದ ವೀರಭದ್ರನೊಡನೆ ಯುದ್ಧಮಾಡಿದನಲ್ಲಾ !

ಯುಯುಧೇ ವೀರಭದ್ರೇಣ ಮಹಾಪ್ರಲಯಕಾರಿಣಾ ।
ಯೇನ ಕ್ಷಣಾದ್ವಿನಿಹತೋ ದಕ್ಷೋ ಮದಪಮಾನಕೃತ್ ॥ ೪೫ ॥

ಕ್ಷಣಾದ್ವಿನಿಹತಾ ಯೇನ ದೈತ್ಯಾಸ್ತ್ರಿಪುರಸೈನಿಕಾಃ ।
ತಸ್ಮಾದ್ಯುಧ್ಯಸ್ವ ರಾಜೇಂದ್ರ ಶೋಕಂ ತ್ಯಕ್ತ್ವಾ ಮಹಾಬಲ ॥ ೪೬ ॥

ಯತ್ನಾತ್ತಿಷ್ಠಾದ್ಯ ವೀರಾಗ್ರ್ಯ ಮಯಿ ಯೋದ್ಧರಿ ಸಂಸ್ಥಿತೇ ।
ಶೋಕಂ ತತ್ಯಾಜ ಶತ್ರುಘ್ನೋ ವೀರಶ್ಚುಕ್ರೋಧ ಶಂಕರಂ ॥ ೪೭ ॥

ಆತ್ತಸಜ್ಯಧನುರ್ಬಾಣೈಃ ಪ್ರಾಹರತ್ಸ ಮಹೇಶ್ವರಂ ।
ತೇ ಬಾಣಾಸ್ಸುರಶೀರ್ಷಣ್ಯವಪುಷಂ ಕ್ಷತವಿಕ್ಷತಂ ॥ ೪೮ ॥

ಅಕುರ್ವಂಸ್ತನ್ಮಹಚ್ಚಿತ್ರಂ ಭಕ್ತರಕ್ಷಾರ್ಥಮಾಗತಂ ।
ತೇ ಬಾಣಾಶ್ಶಂಕರಸ್ಯಾಪಿ ಬಾಣಾ ನಭಸಿ ಸಂಸ್ಥಿತಾಃ ॥ ೪೯ ॥

---

೪೫-೪೬. ನನ್ನ ಅಪಮಾನವನ್ನು ಮಾಡಿದ ದಕ್ಷನೂ ಕೂಡ ಒಂದು ಕ್ಷಣ ಕಾಲದಲ್ಲಿಯೇ ಆ ವೀರಭದ್ರನಿಂದ ಕೊಲ್ಲಲ್ಪಟ್ಟನು. ತ್ರಿಪುರ ಸೈನಿಕರನ್ನೂ ಕ್ಷಣಕಾಲದಲ್ಲಿ ಕೊಂದನು. ಆದ್ದರಿಂದ ಅವನ ವಿಷಯದಲ್ಲಿ ದುಃಖವನ್ನು ಬಿಟ್ಟು ನೀನು ಯುದ್ಧಮಾಡು.

೪೭. ಆದ್ದರಿಂದ ನಾನು ಯುದ್ಧಕ್ಕೆ ಬಂದಿರುವಾಗ ವೀರನ ರೀತಿಯಿಂದ ಯುದ್ಧಮಾಡುವುದಕ್ಕೆ ನಿಲ್ಲು ಎಂದನು. ಆಗ ಶತ್ರುಘ್ನನು ದುಃಖವನ್ನು ಬಿಟ್ಟು ಕೋಪದಿಂದ ಶಂಕರನನ್ನು ಎದುರಿಸಿದನು.

೪೮. ಧನುಸ್ಸನ್ನು ಸರಿಮಾಡಿಕೊಂಡು ಬಾಣವನ್ನು ಹೂಡಿ ಮಹೇಶ್ವರನಿಗೆ ಹೊಡೆದನು. ಆ ಬಾಣಗಳು ಭಕ್ತರಕ್ಷಕನಾದ ಶಿವನ ದೇಹವನ್ನು ಗಾಯಗೊಳಿಸಿದುವು. ಅದು ಬಹು ಚಿತ್ರವಾಗಿದ್ದಿತು.

೪೯. ಶತ್ರುಘ್ನನ ಬಾಣಗಳೂ, ಅದಕ್ಕೆ ಪ್ರತಿಯಾಗಿ ಬಿಟ್ಟು ಶಂಕರನ ಬಾಣಗಳೂ ಅಂತರಿಕ್ಷದಲ್ಲಿಯೇ ಹೋರಾಡುತ್ತಿರುವುದನ್ನು ನೋಡಿ ದೇವಋಷಿಯಾದ ನಾರದನು ಆಶ್ಚರ್ಯಗೊಂಡನು.

ನ್ಯಾಪ್ಯೈತತ್ಸಕಲಂ ವಿಶ್ವಂ ಚಿತ್ರಕಾರಿ ಮುನೇರಪಿ ।
ತದ್ಬಾಣಯೋರ್ಯುದ್ಧಬಲಂ ವೀಕ್ಷ್ಯ ಸರ್ವತ್ರ ಮೇನಿರೇ ॥ ೫೦ ॥

ಪ್ರಲಯಂ ಲೋಕಸಂಹಾರಕಾರಕಂ ಸರ್ವಮೋಹಕಂ ।
ಆಕಾಶೇ ತು ವಿಮಾನಾನಿ ಸಂಶ್ರಿತ್ಯ ಸ್ವಪುರಸ್ಥಿತಾಃ ॥ ೫೧ ॥

ವಿಲೋಕಯಿತುಮಾಗತ್ಯ ಪ್ರಶಂಸಂತಿ ತಯೋರ್ಭೃಶಂ ।
ಅಯಂ ಲೋಕತ್ರಯಸ್ಯಾಪಿ ಪ್ರಲಯೋತ್ಪತ್ತಿಕಾರಕಃ ॥ ೫೨ ॥

ಅಸಾವಪಿ ಮಹಾರಾಜರಾಮಚಂದ್ರಸ್ಯ ಚಾನುಜಃ ।
ಕಿಮಿದಂ ಭವಿತಾ ಕೋ ವಾ ಜೇಷ್ಯತಿ ಕ್ಷಿತಿಮಂಡಲೇ ॥ ೫೩ ॥

ಪರಾಜಯಂ ವಾ ಕೋ ವೀರಃ ಪ್ರಾಪ್ಸ್ಯತೇ ರಣಮೂರ್ಧನಿ ।
ಏವಮೇಕಾದಶಾಹಾನಿ ವೃತ್ತಂ ಯುದ್ಧಂ ಪರಸ್ಪರಂ ॥ ೫೪ ॥

ದ್ವಾದಶೇ ದಿವಸೇ ಪ್ರಾಪ್ತೇ ಮುಮೋಚಾಸ್ತ್ರಂ ನರಾಧಿಪಃ ।
ಬ್ರಹ್ಮಸಂಜ್ಞಂ ಮಹಾದೇವಂ ಹನ್ತುಂ ಕ್ರೋಧಸಮನ್ವಿತಃ ॥ ೫೫ ॥

---

೫೦. ಆ ಬಾಣಗಳ ಯುದ್ಧಬಲವನ್ನು ನೋಡಿ ಎಲ್ಲರೂ ಲೋಕಸಂಹಾರ ಕಾರಕವಾದ ಪ್ರಳಯವೆಂದು ತಿಳಿದರು.

೫೧. ಆಕಾಶದಲ್ಲಿ ಅನೇಕ ವಿಮಾನಗಳು ಆ ಬಾಣಗಳ ಎದುರಿನಲ್ಲಿ ನಿಂತಿದ್ದುವು. ಅದರಲ್ಲಿದ್ದ ದೇವತೆಗಳು ಅವರ ಕೌಶಲ್ಯವನ್ನು ಹೊಗಳುತ್ತಿದ್ದರು.

೫೨-೫೩. ಈತನು ಲೋಕಕ್ಕೆ ಪ್ರಳಯಕಾರಕನಾದ ಈಶ್ವರನು. ಅವನು ಮಹಾರಾಜನಾದ ಶ್ರೀರಾಮಚಂದ್ರನ ತಮ್ಮನು. ಏನೇನಾಗುತ್ತದೆ ? ಇಬ್ಬರಲ್ಲಿ ಯಾರು ಜಯಿಸಬಹುದು ?

೫೪-೫೫. ಈ ಯುದ್ಧದಲ್ಲಿ ಪರಾಜಯವನ್ನು ತಾನೆ ಯಾವನು ಹೊಂದುವನು ? ಒಬ್ಬರಿಗೊಬ್ಬರಿಗೆ ಈ ಯುದ್ಧವು ಹನ್ನೊಂದು ದಿನಗಳು ನಡೆಯಿತು. ಹನ್ನೆ

**ಸ ವಿಜ್ಞಾಯ ಮಹಾಸ್ತ್ರಂ ತನ್ಮುಕ್ತಂ ಶತ್ರುಘ್ನವೈರಿಣಾ ।**
**ಹಸನ್ನಪ್ಯಪಿಬತ್ತೇನ ಮುಕ್ತಂ ಬ್ರಹ್ಮಶಿರೋ ಮಹತ್** ॥ ೫೬ ॥

**ಅತ್ಯಂತಂ ವಿಸ್ಮಯಂ ಪ್ರಾಪ್ಯ ಕಿಂಕರ್ತವ್ಯಮತಃಪರಂ ।**
**ಏವಂ ವಿಚಾರಯುಕ್ತಸ್ಯ ಹೃದಯೇ ಜ್ವಲನೋಪಮಂ** ॥ ೫೭ ॥

**ಶರಂ ವೈ ನಿಚಖಾನಾಶು ದೇವದೇವಶಿರೋಮಣಿಃ ।**
**ತೇನ ಬಾಣೇನ ಶತ್ರುಘ್ನೋ ಮೂರ್ಛಿತೋ ರಣಮಂಡಲೇ** ॥ ೫೮ ॥

**ಹಾಹಾಭೂತಮಭೂತ್ಸರ್ವಂ ಕಟಕಂ ಭಟಸೇವಿತಂ ।**
**ಸರ್ವೇ ರುದ್ರಗಣೈರ್ವೀರಾಃ ಪಾತಿತಾಃ ಪೃಥಿವೀತಲೇ** ॥ ೫೯ ॥

**ಸುಬಾಹುಸುಮದಮುಖ್ಯಾಃ ಸ್ವಬಾಹುಬಲದರ್ಪಿತಾಃ ।**
**ಪತಿತಂ ಮೂರ್ಛಯಾ ವೀಕ್ಷ್ಯ ಶತ್ರುಘ್ನಂ ಶರಪೀಡಿತಂ** ॥ ೬೦ ॥

---

ರಡನೆಯ ದಿನದಲ್ಲಿ ಶತ್ರುಘ್ನನು ಕ್ರೋಧದಿಂದ ಶಿವನನ್ನು ಕೊಲ್ಲಲು ಬ್ರಹ್ಮಾಸ್ತ್ರವನ್ನು ಬಿಟ್ಟನು.

೫೬. ಆದಕ್ಕೆ ಪ್ರತೀಕಾರಮಾಡಲು ಶಿವನು ಬ್ರಹ್ಮಶಿರಸ್ಸನ್ನು ಬಿಡಲು ಅದು ಬ್ರಹ್ಮಾಸ್ತ್ರವನ್ನು ನುಂಗಿತು.

೫೭. ಶತ್ರುಘ್ನನು ಆಶ್ಚರ್ಯಪಟ್ಟು ಏನು ಮಾಡಲೆಂದು ಯೋಚಿಸುತ್ತಿರಲು ಅಷ್ಟರೊಳಗೆ ಒಂದು ತೀವ್ರವಾದ ಅಸ್ತ್ರವು ಬಂದು ಶತ್ರುಘ್ನನ ಎದೆಯಲ್ಲಿ ನಾಟಿತು.

೫೮. ಆ ಬಾಣವು ನಾಟಿದುದರಿಂದ ಶತ್ರುಘ್ನನು ಮೂರ್ಛೆಗೊಂಡನು.

೫೯. ಆ ವೀರರ ಶಿಬಿರವೆಲ್ಲವೂ ಹಾಹಾಕಾರಮಾಡಿತು. ವೀರರೆಲ್ಲರೂ ರುದ್ರಗಣಗಳಿಂದ ನಾಶಿತರಾದರು.

೬೦-೬೧. ಸುಬಾಹು ಸುಮದ ಮುಂತಾದವರು ಶತ್ರುಘ್ನನು ಮೂರ್ಛೆ

ಪುಷ್ಕಲಂ ತು ರಥೇ ಸ್ಥಾಪ್ಯ ಸೇವಕೈಃ ಪರಿರಕ್ಷಿತಂ ।
ಹನೂಮಾನಾಗತೋ ಯೋದ್ಧುಂ ಶಿವಂ ಸಂಹಾರಕಾರಕಂ ॥ ೬೧ ॥

ಶ್ರೀರಾಮಸ್ಮರಣಾದ್ಯೋಧಾನ್ಸ್ವೀಯಾನಪಿ ಪ್ರಹರ್ಷಿತಾನ್ ।
ಪ್ರಕುರ್ವನ್ರೋಷತಸ್ತೀವ್ರಂ ಲಾಂಗೂಲಂ ಚ ಪ್ರಕಂಪಯನ್ ॥ ೬೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಶತ್ರುಘ್ನಪರಾಜಯೋ ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

ಬಿದ್ದಿರುವುದನ್ನು ನೋಡಿ ಪುಷ್ಕಲನನ್ನೂ ರಥದಲ್ಲಿ ಹಾಕಿ ನೋಡಿಕೊಳ್ಳುತ್ತಿದ್ದರು. ಹನುಮಂತನು ಶಿವನೊಡನೆ ಯುದ್ಧಕ್ಕೆ ಬಂದನು.

೬೨. ಶ್ರೀರಾಮಸ್ಮರಣೆಯಿಂದ ತನ್ನವರನ್ನೆಲ್ಲಾ ಹರ್ಷಪಡಿಸುತ್ತಾ ಕೋಪದಿಂದ ಬಾಲವನ್ನು ನಡುಗಿಸುತ್ತಾ ಬಂದನು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಶತ್ರುಘ್ನಪರಾಜಯವೆಂಬ
ನಲವತ್ತಮೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ಮಹಾಪುರಾಣೇ ಪಾದ್ಮೆ ಪಾತಾಳಖಂಡೇ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಆಗತ್ಯ ಸವಿಧೇ ರುದ್ರಂ ಸಮರಾಂಗಣಮೂರ್ಧನಿ ।
ಜಗಾದ ಹನುಮಾನ್ವೀರಃ ಸಂಜಿಹೀರ್ಷುಸ್ಸುರಾಧಿಪಂ ॥ ೧ ॥

॥ ಹನೂಮಾನುವಾಚ ॥

ತ್ವಂ ಯದಾಚರಸೇ ರುದ್ರ ಧರ್ಮಸ್ಯ ಪ್ರತಿಕೂಲನಂ ।
ತಸ್ಮಾತ್ತ್ವಾಂ ಶಾಸ್ತುಮಿಚ್ಛಾಮಿ ರಾಮಭಕ್ತವಧೋದ್ಯತಂ ॥ ೨ ॥

**ಮಯಾ ಶ್ರುತಂ ಪುರಾ ವೇದಋಷಿಭಿರ್ಬಹುಧೋದಿತಂ ।
ರಘುನಾಥಪದಸ್ಮಾರೀ ನಿತ್ಯಂ ರುದ್ರಃ ಪಿನಾಕಭೃತ್ ॥ ೩ ॥**

---

## ನಲವತ್ತನಾಲ್ಕನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಯುದ್ಧದ ಮಧ್ಯದಲ್ಲಿ ರುದ್ರನ ಹತ್ತಿರಕ್ಕೆ ಬಂದು ಹನುಮಂತನು ಆ ಸುರಾಧಿಪನನ್ನು ಕುರಿತು ಕೊಲ್ಲಲಿಚ್ಛೆಯಿಂದ ಇಂತೆಂದನು.

೨. ಹನುಮಂತನು ಹೇಳಿದನು :—ಎಲೈ ರುದ್ರನೇ, ನೀನು ಧರ್ಮಕ್ಕೆ ವಿರುದ್ಧವಾಗಿ ನಡೆಯುತ್ತೀಯೆ. ರಾಮಭಕ್ತರನ್ನು ಕೊಂದ ನಿನ್ನನ್ನು ಶಿಕ್ಷಿಸಬೇಕು.

೩. ರುದ್ರನು ಯಾವಾಗಲೂ ರಘುನಾಥನ ಪಾದಕಮಲಗಳನ್ನು ಸ್ಮರಿಸುತ್ತಾನೆಂದು ಋಷಿಗಳು ಹೇಳಿರುವುದನ್ನು ಬಹು ಬಾರಿ ಕೇಳಿದ್ದೇನೆ.

ತತ್ಸರ್ವಂ ತು ನೃಪಶ್ರಾ ಜಾತಂ ಶತ್ರುಘ್ನಂ ಪ್ರತಿ ಯುಧ್ಯತಾ ।
ಪುಷ್ಕಲೋ ಮೇ ಹತಶ್ಶೂರಃ ಶತ್ರುಘ್ನೋಽಪಿ ವಿಮೂರ್ಛಿತಃ ॥ ೪ ॥

ತಸ್ಮಾತ್ತ್ವಾಂ ಪಾತಯಾಮ್ಯದ್ಯ ತ್ರೈಲೋಕ್ಯಪ್ರಲಯೋದ್ಯತಂ ।
ಯತ್ನಮಾತಿಷ್ಠ ಭೋಶ್ಶರ್ವ ರಾಮಭಕ್ತಿಪರಾಙ್ಮುಖ ॥ ೫ ॥

॥ ಶೇಷ ಉವಾಚ ॥

ಇತ್ಯುಕ್ತವಂತಂ ಪ್ಲವಗಂ ಪ್ರೋವಾಚ ಸ ಮಹೇಶ್ವರಃ ।
ಧನ್ಯೋಽಸಿವೀರವರ್ಯಸ್ತ್ವಂ ಭವಾನ್ವದತಿ ನೋ ಮೃಷಾ ॥ ೬ ॥

ಮತ್ಸ್ವಾಮೀ ರಾಮಚಂದ್ರೋಽಯಂ ಸುರಾಸುರನಮಸ್ಕೃತಃ ।
ತದಶ್ವಮಾನಯಾಮಾಸ ಶತ್ರುಘ್ನಃ ಪರವೀರಹಾ ॥ ೭ ॥

ತದ್ರಕ್ಷಾರ್ಥಂ ಸಮಾಯಾತಸ್ತದ್ಭಕ್ತ್ಯಾ ತು ವಶೀಕೃತಃ ।
ಯಥಾ ಕಥಂಚಿದ್ಭಕ್ತೋಽಸೌ ರಕ್ಷ್ಯಃ ಸ್ವಾತ್ಮಾ ಇತಿ ಸ್ಥಿತಿಃ ॥ ೮ ॥

ರಘುನಾಥಃ ಕೃಪಾಂ ಕೃತ್ವಾ ವಿಲೋಕಯತು ನಿಸ್ತ್ರಪಂ ॥
ಮಾಂ ಸ್ವಭಕ್ತಂ ಸುದುಃಖೇನ ಕಿಂಚಿತ್ಕೋಪಂ ದಧನ್ಮಹಾನ್ ॥ ೯ ॥

---

೪. ನೀನು ಶತ್ರುಘ್ನನನ್ನು ಮೂರ್ಛೆ ಕೆಡವಿದುದನ್ನು ಪುಷ್ಕಳನನ್ನು ಕೊಂದುದನ್ನೂ ನೋಡಿದರೆ ಅದೆಲ್ಲವೂ ಸುಳ್ಳೆಂದು ಕಾಣುತ್ತದೆ.

೫. ತ್ರಿಲೋಕಗಳನ್ನೂ ಪ್ರಳಯಮಾಡುವ ನಿನ್ನನ್ನು ಈಗ ಕೊಲ್ಲುತ್ತೇನೆ. ರಾಮಭಕ್ತಿಪರಾಙ್ಮುಖನೇ, ಸಿದ್ಧನಾಗು.

೬. ಶೇಷನು ಹೇಳಿದನು :—ಹೀಗೆ ಹೇಳಿದ ಕಪಿಯನ್ನು ಕುರಿತು ಮಹೇಶ್ವರನು-ಎಲೈ ವೀರನೇ! ನೀನೇ ಧನ್ಯನು. ನೀನು ಹೇಳಿದುದು ಸುಳ್ಳಲ್ಲ ಎಂದನು.

೭-೮. ನನ್ನ ಸ್ವಾಮಿಯು ಸುರಾಸುರನಮಸ್ಕೃತನಾದ ರಾಮಚಂದ್ರನೇ. ಅವನ ಕುದುರೆಯನ್ನು ಶತ್ರುಘ್ನನು ರಕ್ಷಿಸುತ್ತಾ ಬಂದನು. ಅವನೂ ರಾಮಭಕ್ತನು. ಹೇಗಾದರೂ ಭಕ್ತನನ್ನು ತನ್ನಂತೆ ಕಾಪಾಡಬೇಕು. ಇದು ಇರತಕ್ಕ ಸ್ಥಿತಿ.

೯. ರಾಮನೇ ಬಂದು ಸರಿಯಾಗಿ ನೋಡಲಿ. ಅವನ ಭಕ್ತನಾದ ನನ್ನನ್ನು ಸ್ವಲ್ಪ ಕೋಪದಿಂದ ನೋಡಿದರೆ ಅದೇ ದೊಡ್ಡದು.

॥ ಶೇಷ ಉವಾಚ ॥

ಏವಂ ವದತಿ ಚಂಡೀಶೇ ಹನೂಮಾನ್ಕುಪಿತೋ ಭೃಶಂ ।
ಶಿಲಾಮಾದಾಯ ಮಹತೀಂ ತಾಡಯಾಮಾಸ ತದ್ರಥಂ ॥ ೧೦ ॥

ಶಿಲಯಾ ತಾಡಿತಸ್ತಸ್ಯ ರಥಃ ಶಕಲತಾಂ ಗತಃ ।
ಸಸೂತಸ್ಸಹಯಃ ಕೇತುಪತಾಕಾಭಿಸ್ಸಮನ್ವಿತಃ ॥ ೧೧ ॥

ನಭಸ್ಥಾ ದೇವತಾಸ್ಸರ್ವಾಃ ಪ್ರಶಶಂಸುಃ ಕಪೀಶ್ವರಂ ।
ಧನ್ಯೋಽಸಿ ಪ್ಲವಗಾಧೀಶ ಮಹತ್ಕರ್ಮ ತ್ವಯಾ ಕೃತಂ ॥ ೧೨ ॥

ಶ್ರೀಶಿವಂ ವಿರಥಂ ದೃಷ್ಟ್ವಾ ನಂದೀ ತಂ ಸಮುಪಾದ್ರವತ್ ।
ಉವಾಚ ಶ್ರೀಮಹಾದೇವಂ ಮೇ ಪೃಷ್ಠಂ ಗಮ್ಯತಾಮಿತಿ ॥ ೧೩ ॥

ವೃಷಸ್ಥಿತಂ ತು ಭೂತೇಶಂ ಹನೂಮಾನ್ಕುಪಿತೋ ಭೃಶಂ ।
ಶಾಲಮುತ್ಪಾಟ್ಯ ತರಸಾ ಪ್ರಾಹನದ್ಧೃದಯೇ ತದಾ ॥ ೧೪ ॥

---

೧೦. ಶೇಷನು ಹೇಳಿದನು:—ಶಿವನು ಹೀಗೆ ಹೇಳುತ್ತಿರುವಾಗ ಹನುಮಂತನು ಕೋಪಗೊಂಡು ದೊಡ್ಡ ಕಲ್ಲನ್ನು ತೆಗೆದುಕೊಂಡು ಶಿವನ ರಥವನ್ನು ಹೊಡೆದನು.

೧೧. ಕಲ್ಲಿನಿಂದ ಹೊಡೆಯಲು ಆ ಶಿವನ ರಥವು ಪುಡಿಪುಡಿಯಾಯಿತು. ಸಾರಥಿ, ಕುದುರೆ, ಧ್ವಜವೆಲ್ಲವೂ ನಾಶವಾದುವು.

೧೨. ಕಪೀಶ್ವರನೇ ನೀನೇ ಧನ್ಯನು. ಬಹು ದೊಡ್ಡ ಕೆಲಸವನ್ನು ಮಾಡಿದೆ ಎಂದು ಅಂತರಿಕ್ಷದಲ್ಲಿದ್ದ ದೇವತೆಗಳೆಲ್ಲರೂ ಆತನನ್ನು ಹೊಗಳಿದರು.

೧೩. ಶಿವನ ರಥವು ನಷ್ಟವಾಗಲು ನಂದಿಯು ಅಲ್ಲಿಗೆ ಓಡಿ ಬಂದು ಶಿವನನ್ನು ತನ್ನ ಮೇಲೆ ಕುಳಿತುಕೊಳ್ಳುವಂತೆ ಪ್ರಾರ್ಥಿಸಿದನು.

೧೪. ಹನುಮಂತನು ಬಸವನ ಮೇಲೆ ಕೂತಿರುವ ಶಿವನ ಮೇಲೆ ಕೋಪಗೊಂಡು ಸಾಲವೃಕ್ಷವನ್ನು ಕಿತ್ತು ಶಿವನ ಎದೆಗೆ ಹೊಡೆದನು.

ತದಾಹತೋ ಭೂತಪತಿಃ ಶೂಲಂ ತೀಕ್ಷ್ಣಂ ಸಮಾದದೇ ।
ಜಾಜ್ವಲ್ಯಮಾನಂ ತ್ರಿಶಿಖಂ ವಹ್ನಿಜಾಲಾಸಮುಪ್ರಭಂ ॥ ೧೫ ॥

ಆಯಾಂತಂ ತನ್ಮಹದ್ದೃಷ್ಟ್ವಾ ಶೂಲಂ ಪ್ರಜ್ವಲನಪ್ರಭಂ ।
ಹಸ್ತೇ ಗೃಹೀತ್ವಾ ತರಸಾ ಬಭಂಜ ತಿಲಶಃ ಕ್ಷಣಾತ್ ॥ ೧೬ ॥

ಭಗ್ನೇ ತ್ರಿಶೂಲೇ ತರಸಾ ಕಪೀಂದ್ರೇಣ ಕ್ಷಣಾದ್ಭವಃ ।
ಶಕ್ತಿಂ ಕರೇ ಸಮಾಧತ್ತ ಸರ್ವಲೋಕವಿನಿರ್ಮಿತಾಂ ॥ ೧೭ ॥

ಸಾ ಶಕ್ತಿಶ್ಶಿವನಿರ್ಮುಕ್ತಾ ಹೃದಯೇ ತಸ್ಯ ಧೀಮತಃ ।
ಲಗ್ನಾ ಕ್ಷಣಾದಭೂತ್ತತ್ರ ವಿಕ್ಲಬಃ ಪ್ಲವಗಾಧಿಪಃ ॥ ೧೮ ॥

ಕ್ಷಣಾಚ್ಚ ತದ್ವ್ಯಥಾಂ ನೀತ್ವಾ ಗೃಹೀತ್ವಾ ವೃಕ್ಷಮುಲ್ಬಣಂ ।
ತಾಡಯಾಮಾಸ ಹೃದಯೇ ಮಹಾವ್ಯಾಲವಿಭೂಷಿತೇ ॥ ೧೯ ॥

ತಾಡಿತಾಸ್ತೇನ ವೀರೇಣ ಫಣೀಂದ್ರಾಸ್ತ್ರಾಸಮಾಗತಾಃ ।
ಇತಸ್ತತಸ್ತೇ ತಂ ಮುಕ್ತ್ವಾ ಗತಾಃ ಪಾತಾಳಮುಜ್ಜ್ವಲಾಃ ॥ ೨೦ ॥

---

೧೫. ಆಗ ಪರಶಿವನು ವಹ್ನಿಜ್ವಾಲೆಯಂತೆ ಹೊಳೆಯುತ್ತಿರುವ ತ್ರಿಶೂಲವನ್ನು ಬಿಟ್ಟನು.

೧೬. ಹನುಮಂತನು ಬೆಂಕಿಯಂತಿರುವ ಆ ತ್ರಿಶೂಲವು ಬರುತ್ತಿರುವುದನ್ನು ನೋಡಿ ಅದನ್ನು ಕೈಲಿ ಹಿಡಿದುಕೊಂಡು ಪುಡಿಪುಡಿಮಾಡಿದನು.

೧೭. ಶೂಲವು ಭಗ್ನವಾದುದನ್ನು ನೋಡಿ ಶಿವನು ಸರ್ವಲೋಕಮಯವಾದ ಶಕ್ತಿಯನ್ನು ಹಿಡಿದನು.

೧೮. ಶಿವನು ಆ ಶಕ್ತಿಯನ್ನು ಬಿಡಲು ಅದು ಕಪಿಯ ಹೃದಯದಲ್ಲಿ ಚುಚ್ಚಿಕೊಂಡಿತು. ಆಗ ಕಪಿಯು ಕ್ಷಣಕಾಲ ದುಃಖಿತನಾದನು.

೧೯. ಕ್ಷಣಕಾಲದಲ್ಲಿ ಸುಧಾರಿಸಿಕೊಂಡು ಒಂದು ದೊಡ್ಡ ಮರವನ್ನು ಕಿತ್ತುಕೊಂಡು ಶಿವನ ಎದೆಗೆ ಹೊಡೆದನು.

೨೦. ಹನುಮಂತನು ಶಿವನನ್ನು ಮರದಿಂದ ಹೊಡೆಯಲು ಅವನ ಮೈಮೇಲೆ ಭೂಷಣವಾಗಿದ್ದ ಹಾವುಗಳೆಲ್ಲವೂ ಬುಸುಗುಟ್ಟುತ್ತ ಅವನ ಮೈಯನ್ನು ಬಿಟ್ಟು ಪಾತಾಳಕ್ಕೆ ಹೊರಟುಹೋದುವು.

ಶಿವಸ್ತಸ್ಮಿನ್ನಾಗಮುಕ್ತೇ ವಕ್ಷಸಿ ಸ್ವೇ ನಿರೀಕ್ಷ್ಯ ಹ ।
ಕುಪಿತಸ್ಸ್ವೋಽಪಧಾದ್ಘೋರಂ ಮುಸಲಂ ಕರಯುಗ್ಮಕೇ ॥ ೨೧ ॥

ಹತೋಽಸಿ ಗಚ್ಛ ಸಂಗ್ರಾಮಾತ್ಪಲಾಯ ಪ್ಲವಗಾಧಮ ।
ಏಷ ತೇ ಪ್ರಾಣಹನ್ತಾಹಂ ಮುಸಲೇನ ಕ್ಷಣಾದಿಹ ॥ ೨೨ ॥

ಮುಸಲಂ ವೀಕ್ಷ್ಯ ನಿರ್ಮುಕ್ತಂ ಶಿವೇನ ಕುಪಿತೇನ ವೈ ।
ಕೀಶಸ್ತಂಧ್ಬಂಜಯಾಮಾಸ ಮಹಾವೇಗೋ ಹರಿಂ ಸ್ಮರನ್ ॥ ೨೩ ॥

ಮುಸಲಂ ತತ್ಪಪಾತಾಧಃ ಶಿವಮುಕ್ತಂ ಮಹಾಯಸಂ ।
ವಿದಾರ್ಯ ಪೃಥಿವೀಂ ಸರ್ವಾಂ ಜಗಾಮ ಚ ರಸಾತಲಂ ॥ ೨೪ ॥

ತದಾ ಪ್ರಕುಪಿತೋಽತ್ಯಂತಂ ಹನೂಮಾನ್ರಾಮಸೇವಕಃ ।
ಗೃಹೀತ್ವಾ ಪರ್ವತಂ ಹಸ್ತೇ ತಾಡಯಾಮಾಸ ವಕ್ಷಸಿ ॥ ೨೫ ॥

---

೨೧. ಶಿವನು ಆ ಹಾವುಗಳೆಲ್ಲಾ ತನ್ನ ಮೈಬಿಟ್ಟು ಹೋದುದನ್ನು ನೋಡಿ ಕೋಪಗೊಂಡು ಎರಡು ಕೈಯಲ್ಲೂ ಮುಸಲಾಯುಧವನ್ನು ಹಿಡಿದನು.

೨೨. ಸತ್ತೆ. ರಣರಂಗದಿಂದ ಓಡು. ನಾನು ಕ್ಷಣಕಾಲದಲ್ಲಿ ಈ ಮುಸಲ ದಿಂದ ನಿನ್ನ ಪ್ರಾಣವನ್ನು ತೆಗೆಯುತ್ತೇನೆ.

೨೩. ಬಂದ ಆ ಮುಸಲಾಯುಧವನ್ನು ಕಪಿಯು ಮಹಾವೇಗದಿಂದ ರಾಮ ನನ್ನು ಸ್ಮರಿಸುತ್ತಾ ಹಿಡಿದು ಮುರಿದನು.

೨೪. ಆ ದೊಡ್ಡ ಮುಸಲವು ಕೆಳಗೆ ಬೀಳಲು ಭೂಮಿಯು ಭಾಗವಾಗಿ ಅದು ಸಹ ಪಾತಾಳಕ್ಕೆ ಹೋಯಿತು.

೨೫. ರಾಮಭಕ್ತನಾದ ಹನುಮಂತನು ಕೋಪಗೊಂಡು ಒಂದು ಬೆಟ್ಟವನ್ನು ಕಿತ್ತು ತಂದು ಶಿವನ ಎದೆಗೆ ಬಡಿದನು.

ಸ ಯಾವತ್ಪರ್ವತಂ ಛೇತ್ತುಂ ಮತಿಂ ಚಕ್ರೇ ಸತೀಪತಿಃ ।
ತಾವದ್ಧತಃ ಕಪೀಂದ್ರೇಣ ಶಾಲೇನ ಬಹುಶಾಖಿನಾ ॥ ೨೬ ॥

ತಮಪಿ ಛೇತ್ತುಮುದ್ಯುಕ್ತೋ ಯಾವತ್ತಾವಚ್ಛಿಲಾಹತಃ ।
ಶಿಲಾಸ್ತಾ ಭೇದಿತುಂ ಸ್ವಾಸ್ತ್ರಂ ಚಕಾರ ಮೃಡ ಉದ್ಯಮಂ ॥ ೨೭ ॥

ತಾವದ್ವೃಷ್ಟಿಂ ಚಕಾರಾಯಂ ಶಿಲಾಭಿರ್ನಗಪರ್ವತೈಃ ।
ಲಂಗೂಲೇನ ಚ ಸಂವೇಷ್ಟ್ಯ ತಾಡಯತ್ಯೇಷ ಭೂತಪಂ ॥ ೨೮ ॥

ಶಿಲಾಭಿಃ ಪರ್ವತೈರ್ವೃಕ್ಷೈಃ ಪುಚ್ಛಾಸ್ಫೋಟೇನ ಭೂರಿಶಃ ।
ನಂದೀ ಪ್ರಾಪ್ತೋ ಮಹಾತ್ರಾಸ ಚಂದ್ರೋಽಪಿ ಶಕಲೀಕೃತಃ ॥ ೨೯ ॥

ಅತ್ಯಂತಂ ವಿಹ್ವಲೋ ಜಾತೋ ಮಹೇಶಾನಃ ಪ್ರಕೋಪನಃ ।
ಕ್ಷಣೇ ಕ್ಷಣೇ ಪ್ರಹಾರೇಣ ವಿಹ್ವಲಂ ಕುರ್ವತಂ ಭೃಶಂ ॥ ೩೦ ॥

ಜಗಾದ ಪ್ಲವಗಾಧೀಶಂ ಧನ್ಯೋಽಸಿ ರಘುಪಾನುಗ ।
ಮಹತ್ಕರ್ಮ ಕೃತಂ ತೇಽದ್ಯ ಯತ್ತೇಽಹಂ ಸುಪ್ರತೋಷಿತಃ ॥ ೩೧ ॥

---

೨೬. ಆ ಶಿವನು ಆ ಬೆಟ್ಟವನ್ನು ಕೆಡವಲು ಯೋಚಿಸುವಷ್ಟರೊಳಗೆ ಒಂದು ಸಾಲಮರವನ್ನು ಕಿತ್ತುಕೊಂಡು ಆ ಶಿವನಿಗೆ ಬಲವಾಗಿ ಹೊಡೆದನು.

೨೭. ಆ ಪರ್ವತ ಮತ್ತು ಆ ಮರಗಳ ಏಟನ್ನು ಆ ಶಿವನು ತಪ್ಪಿಸಿಕೊಳ್ಳುವುದಕ್ಕೆ ಪ್ರಯತ್ನಪಡುತ್ತಿದ್ದನು.

೨೮. ಅಷ್ಟರೊಳಗೆ ಶಿವನ ಮೇಲೆ ಕಲ್ಲುಗಳ ಮಳೆಯನ್ನು ಸುರಿಸಿ ಬಾಲದಲ್ಲಿ ಗಂಟುಕಟ್ಟಿಕೊಂಡು ಹೊಡೆದನು.

೨೯. ಕಲ್ಲು, ಬೆಟ್ಟ, ಮರ, ಬಾಲಗಳಿಂದ ಹೊಡೆಯುತ್ತಿರಲು ನಂದಿಯು ಹೆದರಿದನು. ಚಂದ್ರನು ಚೂರು ಚೂರಾದನು.

೩೦-೩೧. ಆಗ ಕೋಪಗೊಂಡ ಈಶ್ವರನು ದುಃಖಿತನಾದನು. ಬಾರಿಬಾರಿಗೂ ಏಟಿನಿಂದ ನೋವುಕೊಡುತ್ತಿರುವ ಆ ಹನುಮಂತನನ್ನು ಕುರಿತು ಎಲೈ ರಾಮಸೇವಕನೇ, ಮಹಾಕಾರ್ಯವನ್ನು ಮಾಡಿದ್ದೀಯೆ. ನಾನು ನಿನ್ನಲ್ಲಿ ಸಂತೋಷಗೊಂಡಿದ್ದೇನೆ.

ನ ದಾನೇನ ನ ಯಜ್ಞೇನ ನಾಲ್ಪೇನ ತಪಸಾ ಹ್ಯಹಂ ।
ಸುಲಭೋಽಸ್ಮಿ ಮಹಾವೇಗ ತಸ್ಮಾತ್ಪ್ರಾರ್ಥಯ ಮೇ ವರಂ ॥ ೩೨ ॥

॥ ಶೇಷ ಉವಾಚ ॥

ಏವಂ ಬ್ರುವಂತಂ ತಂ ದೃಷ್ಟ್ವಾ ಹನೂಮಾನ್ನಿಜಗಾದ ತಂ ।
ಪ್ರಹಸನ್ನಿರ್ಭಯಾ ವಾಚಾ ಮಹೇಶಾನಂ ತು ತೋಷಿತಂ ॥ ೩೩ ॥

॥ ಹನುಮಾನುವಾಚ ॥

ರಘುನಾಥಪ್ರಸಾದೇನ ಸರ್ವಂ ಮೇಽಸ್ತಿ ಮಹೇಶ್ವರ ।
ತಥಾಪಿ ಯಾಚೇ ಹಿ ವರಂ ತ್ವತ್ತಸ್ಸಮರತೋಷಿತಾತ್ ॥ ೩೪ ॥

ಏಷ ಪುಷ್ಕಲಸಂಜ್ಞೋ ನಃ ಸಮರೇ ಪತಿತೋ ಹತಃ ।
ತಥಾ ಚ ರಾಮಾವರಜಃ ಶತ್ರುಘ್ನೋ ಮೂರ್ಛಿತೋ ರಣೇ ॥ ೩೫ ॥

ಅನ್ಯೇ ಚ ವೀರಾ ಬಹವಃ ಪತಿತಾಃ ಶರವಿಕ್ಷತಾಃ ।
ಮೂರ್ಛಿತಾಃ ಪತಿತಾಃ ಕೇಚಿತ್ತಾನ್ರಕ್ಷಸ್ವ ಗಣೈಸ್ಸಹ ॥ ೩೬ ॥

---

೩೨. ದಾನ, ಯಜ್ಞ, ಅಲ್ಪವಾದ ತಪಸ್ಸುಗಳಿಂದ ನಾನು ಸುಲಭನಾಗಿ ಪ್ರಸನ್ನವಾಗುವುದಿಲ್ಲ. ಈ ನಿನ್ನ ಕೆಲಸದಿಂದ ಪ್ರಸನ್ನನಾಗಿದ್ದೇನೆ. ವರವನ್ನು ಕೇಳಿಕೋ.

೩೩. ಶೇಷನು ಹೇಳಿದನು:—ಹೀಗೆ ಹೇಳುತ್ತಿರುವ ಶಿವನನ್ನು ಕುರಿತು ನಗುತ್ತ ಭಯರಹಿತನಾಗಿ ಹನುಮಂತನು ಇಂತೆಂದನು.

೩೪. ಹನುಮಂತನು ಹೇಳಿದನು :—ರಘುನಾಥನ ಅನುಗ್ರಹದಿಂದ ಎಲ್ಲವೂ ನನಗೆ ಪೂರ್ತಿಯಾಗಿದೆ. ಆದರೂ ಯುದ್ಧದಲ್ಲಿ ತುಷ್ಟನಾದ ನಿನ್ನನ್ನು ಒಂದು ವರವನ್ನು ಕೇಳುತ್ತೇನೆ.

೩೫-೩೬. ನಮ್ಮ ಪುಷ್ಕಲನು ಸತ್ತಿದ್ದಾನೆ. ಶತ್ರುಘ್ನನೂ ಮೂರ್ಛೆಗೊಂಡಿದ್ದಾನೆ. ಇನ್ನೂ ಅನೇಕರು ಸತ್ತಿದ್ದಾರೆ. ಗಾಯಗೊಂಡಿದ್ದಾರೆ. ಅವರೆಲ್ಲರನ್ನೂ ಪರಿವಾರದೊಡನೆ ಕಾಪಾಡು.

ಯಥಾ ಚೈತಾನ್ಮಹಾಭೂತವೇತಾಳಾಶ್ಚ ಪಿಶಾಚಕಾಃ ।
ನ ಹರಂತಿ ನ ಖಾದಂತಿ ಚ ಸೃಗಾಲಾದಯಸ್ತಥಾ ॥ ೩೭ ॥

ಏತೇಷಾಂ ವಪುಷೋ ಭೇಧೋ ನ ಭವೇತ್ತ್ವಂ ತಥಾ ಚರ ।
ಯಾವದಿಂದ್ರಂ ರಣೇ ಜಿತ್ವಾನಯಾಮಿ ದ್ರೋಣಪರ್ವತಂ ॥ ೩೮ ॥

ಏಷ ಗಚ್ಛಾಮಿ ತಂ ನೇತುಂ ದ್ರೋಣಂ ಪರ್ವತಸತ್ತಮಂ ।
ಯಸ್ಮಿನ್ಸಂತ್ಯೋಷಧಯೋ ಪ್ರಾಣಿಸಂಜೀವನಂಕರಾಃ ॥ ೩೯ ॥

ತತ್ರಸ್ಥಾ ಔಷಧೀರ್ವಾಪಿ ನೀತ್ವಾ ಸಂಸ್ಥಾಪಿತಾರ್ ಭಟಾರ್ ।
ಜೀವಯಾಮಿ ಬಲಾನ್ಸರ್ವಾಂಸ್ತಾವತ್ತ್ವಂ ರಕ್ಷ ಸರ್ವಶಃ ॥ ೪೦ ॥

ಏತದ್ವಚಸ್ಸಮಾಕರ್ಣ್ಯ ತಥೇತಿ ನಿಜಗಾದ ತಂ ।
ಯಾಹಿ ಶೀಘ್ರಂ ನಗಂ ನೇತುಂ ರಕ್ಷಾಮಿ ತ್ವದ್ಭಟಾನ್ಮೃತಾರ್ ॥ ೪೧ ॥

ತಚ್ಛ್ರುತ್ವಾ ವಾಕ್ಯಮೀಶಸ್ಯ ಜಗಾಮ ದ್ರೋಣಪರ್ವತಂ ।
ದ್ವೀಪಾನ್ಸರ್ವಾನತಿಕ್ರಾಮ್ಯ ಜಗಾಮ ಕ್ಷೀರಸಾಗರಂ ॥ ೪೨ ॥

---

೩೭-೩೮. ಇವರನ್ನು ಭೂತ, ಪ್ರೇತ, ಪಿಶಾಚ, ಭೇತಾಳಗಳು ಹೊತ್ತು ಕೊಂಡು ಹೋಗಬಾರದು, ತಿನ್ನಬಾರದು, ನರಿಗಳೂ ಹಾಗೆಯೇ ತಿನ್ನದಿರಬೇಕು. ಇವರ ಶರೀರವು ಹೇಗೂ ವಿಕಾರವಾಗಬಾರದು. ನಾನು ಇಂದ್ರನನ್ನು ಯುದ್ಧದಲ್ಲಿ ಜಯಿಸಿ ದ್ರೋಣಪರ್ವತವನ್ನು ತರುವವರೆಗೂ ಕಾಪಾಡಿಕೊಂಡಿರು.

೩೯-೪೦. ನಾನು ದ್ರೋಣಪರ್ವತವನ್ನು ತರಲು ಹೋಗುತ್ತೇನೆ. ಅವರಲ್ಲಿ ಪ್ರಾಣಿಗಳನ್ನು ಬದುಕಿಸುವ ಔಷಧಿಗಳಿರುತ್ತವೆ. ಆ ಔಷಧಿಗಳನ್ನು ತಂದು ಸತ್ತಿರುವ ಭಟರನ್ನು ಬದುಕಿಸುವವರೆಗೂ ನೀನು ಸರ್ವವಿಧದಲ್ಲಿಯೂ ಕಾಪಾಡಿಕೊಂಡಿರು.

೪೧. ಈ ಮಾತನ್ನು ಶಿವನು ಕೇಳಿ ಜಾಗ್ರತೆಯಾಗಿ ಹೋಗು. ನೀನು ಬರುವವರೆಗೂ ನಿನ್ನ ಭಟರನ್ನು ರಕ್ಷಿಸುತ್ತಿರುತ್ತೇನೆ. ಎಂದು ಹೇಳಿದನು.

೪೨. ಆ ಶಿವನ ಮಾತನ್ನು ಕೇಳಿ ದ್ರೋಣಪರ್ವತವನ್ನು ತರಲು ಹೊರಟನು. ಹೊರಟು ಎಲ್ಲಾ ದ್ವೀಪಗಳನ್ನೂ ದಾಟಿ ಕ್ಷೀರಸಾಗರಕ್ಕೆ ಹೋದನು.

ಅತ್ರ ತು ಸ್ವಗಣೈಸ್ಸಾಕಂ ರಕ್ಷತಿ ಸ್ಮ ಶಿವೋ ಮಹಾನ್ ।
ಶ್ಮಶಾನಂ ತದ್ಗಣೈಸ್ತೈರ್ಯೈರ್ಮಹಾಬಲಪರಾಕ್ರಮೈಃ ॥ ೪೩ ॥

ಹನೂಮಾನ್ದ್ರೋಣಮಾಸಾದ್ಯ ದ್ರೋಣಂ ನಾಮ ಮಹಾಗಿರಿಂ ।
ಲಾಂಗೂಲೇ ತಂ ನಿಧಾಯಾಶು ಪ್ರತಸ್ಥೇ ರಣಮಂಡಲಂ ॥ ೪೪ ॥

ತಂ ನೇತುಮುದ್ಯತೇ ವಿಪ್ರ ಚಕಂಪೇ ಸ ಚ ಪರ್ವತಃ ।
ಕಂಪಮಾನಂ ತು ತಂ ದೃಷ್ಟ್ವಾ ತತ್ಪಾಲಾ ದೇವತಾಗಣಾಃ ॥ ೪೫ ॥

ಹಾಹೇತಿ ಕೃತ್ವಾ ಪ್ರೋಚುಸ್ತೇ ಕಿಮಿದಂ ಭವಿತಾ ಗಿರೌ ।
ಕೋ ಹ್ಯೇನಂ ನಯತೇ ವೀರೋ ಮಹಾಬಲಪರಾಕ್ರಮಃ ॥ ೪೬ ॥

ಏವಂ ಕೃತ್ವಾ ಸುರಾಸ್ಸರ್ವೇ ಸಂಹತಾ ದದೃಶುಃ ಕಪಿಂ ।
ಮುಂಚೈನಮಿತಿ ತೇ ಪ್ರೋಚ್ಯ ಜಘ್ನುಃ ಶಸ್ತ್ರಾಸ್ತ್ರಕೋಟಿಭಿಃ ॥ ೪೭ ॥

ತಾನ್ಸರ್ವಾನಿಘ್ನತೋ ದೃಷ್ಟ್ವಾ ಹನೂಮಾನ್ಕುಪಿತೋ ಭೃಶಂ ।
ಜಘಾನ ತಾನ್ಕ್ಷಣಾದ್ವೀರಃ ಶಕ್ರಃ ಸರ್ವಾಸುರಾನ್ಯಥಾ ॥ ೪೮ ॥

---

೪೩. ಈ ರಣಮಂಡಲದ ಶ್ಮಶಾನವನ್ನು ಶಿವನು ತನ್ನ ಗಣಗಳೊಡನೆ ಕಾಯುತ್ತಿದ್ದನು.

೪೪. ಹನುಮಂತನು ಆ ದ್ರೋಣಪರ್ವತಕ್ಕೆ ಹೋಗಿ ಅದನ್ನು ಬಾಲದಲ್ಲಿ ಸುತ್ತಿಕೊಂಡು ಯುದ್ಧಭೂಮಿಗೆ ಹಿಂತಿರುಗಿದನು.

೪೫. ಆ ಪರ್ವತವನ್ನು ಕೀಳಲು ಅದು ಅಲ್ಲಾಡಿತು. ಅಲ್ಲಾಡಲು ಅವನ್ನು ರಕ್ಷಿಸುತ್ತಿದ್ದ ದೇವತೆಗಳೂ ಹಾಹಾ, ಎಂದು ಈ ಪರ್ವತವಲ್ಲಿ ಏನಾಗುವುದೋ ಎಂದೆನ್ನುತ್ತಿದ್ದರು.

೪೬. ಯಾವ ಪರಾಕ್ರಮಿಯು ಇದನ್ನು ತೆಗೆದುಕೊಂಡು ಹೋಗುತ್ತಿರ ಬಹುದು ?

೪೭. ಹೀಗೆಂದು ದೇವತೆಗಳೆಲ್ಲಾ ಒಂದಾಗಿ ನೋಡುತ್ತ ಈ ಕಪಿಯನ್ನು ಕಂಡರು. ಇದನ್ನು ಬಿಡೆಂದು ಹೇಳುತ್ತಾ ಶಸ್ತ್ರಾಸ್ತ್ರಗಳಿಂದ ಆವನನ್ನು ಹೊಡೆದರು.

೪೮. ಹೊಡೆಯುತ್ತಿರುವ ಅವರನ್ನು ನೋಡಿ ಹನುಮಂತನು ಕೋಪಗೊಂಡು ಇಂದ್ರನು ರಾಕ್ಷಸರನ್ನು ಹೊಡೆಯುವಂತೆ ಹೊಡೆದನು.

ಕೇಚಿತ್ಪಾದಾಹತಾಸ್ತತ್ರ ಕೇಚಿತ್ಕರವಿಮರ್ದಿತಾಃ ।
ಲಾಂಗೂಲನಿಹತಾಃ ಕೇಚಿತ್ಕೇಚಿಚ್ಛೃಂಗೇಣ ಚಾಹತಾಃ ॥ ೪೯ ॥

ಸರ್ವೇ ತೇ ನಾಶಮಾಪನ್ನಾಃ ಕ್ಷಣಾತ್ಕೀಶೇಶತಾಡಿತಾಃ ।
ಕೇಚಿನ್ನಿಪತಿತಾ ಭೂಮೌ ರುಧಿರೇಣ ಪರಿಪ್ಲುತಾಃ ॥ ೫೦ ॥

ಕೇಚಿತ್ಕೀಶಭಯತ್ರಸ್ತಾ ಜಗ್ಮುಶ್ಶಕ್ರಂ ಸುರಾಧಿಪಂ ।
ಕ್ಷತೇನ ಚ ಪರಿಪ್ಲುಷ್ಟಾ ರುಧಿರಕ್ಷತದೇಹಿನಃ ॥ ೫೧ ॥

ತಾನ್ದೃಷ್ಟ್ವಾ ಭಯಸಂವಿಗ್ನಾನ್ರುಧಿರೇಣ ಪರಿಪ್ಲುತಾನ್ ।
ಸುರಾನ್ಜಗಾದ ವಿಮನಾಃ ಶಕ್ರಸ್ಸರ್ವಸುರೋತ್ತಮಃ ॥ ೫೨ ॥

ಕಥಂ ಯೂಯಂ ಭಯತ್ರಸ್ತಾಃ ಕಥಂ ರುಧಿರವಿಪ್ಲುತಾಃ ।
ಕೇನ ದೈತ್ಯೇನ ನಿಹತಾ ರಾಕ್ಷಸೇನಾಧಮೇನ ವಾ ॥ ೫೩ ॥

ಸರ್ವಂ ಶಂಸತ ಮೇ ತಥ್ಯಂ ಯಥಾ ಜ್ಞಾತ್ವಾ ವ್ರಜಾಮಿ ತಂ ।
ನಿಹತ್ಯ ಬಧ್ವಾ ಚಾಯಾಮಿ ಯುಷ್ಮದ್ಘಾತಕಮುನ್ಮದಂ ॥ ೫೪ ॥

---

೪೯-೫೧. ಕೆಲವರನ್ನು ಕಾಲಿನಿಂದ ತುಳಿದನು. ಕೆಲವರನ್ನು ಕೈಯ್ಯಿಂದ ಹಿಸುಕಿದನು. ಕೆಲವರನ್ನು ಬಾಲದಿಂದ ಹೊಡೆದನು. ಕೆಲವರನ್ನು ಕೋಡುಗಲ್ಲಿನಿಂದ ಹೊಡೆದನು. ಹನುಮಂತನು ಹೀಗೆ ಹೊಡೆಯಲು ಆ ಪಾಲಕರೆಲ್ಲರೂ ಕ್ಷಣ ಕಾಲದಲ್ಲಿ ನಾಶವಾದರು. ಕೆಲವರು ರಕ್ತದಿಂದ ಕೂಡಿ ಭೂಮಿಯಲ್ಲಿ ಬಿದ್ದರು. ಮತ್ತೆ ಕೆಲವರು ಕಪಿಯಿಂದ ಹೆದರಿ ಆ ರಕ್ತದ ಗಾಯದೊಡನೆಯೇ ಇಂದ್ರನ ಬಳಿಗೆ ಹೋದರು.

೫೨. ದುಃಖಗೊಂಡು ಗಾಯಪಟ್ಟು ಬಂದಿರುವ ಅವರನ್ನು ನೋಡಿ ಇಂದ್ರನು ಆ ದೇವತೆಗಳಿಗಿಂತೆಂದನು.

೫೩. ನಿಮಗೆ ಭಯವೇತಕ್ಕೆ ? ರಕ್ತದಿಂದೇಕೆನೆಂದಿದ್ದೀರಿ ? ಯಾವ ದೈತ್ಯನು ಹೊಡೆದನೋ ? ಅಥವಾ ರಾಕ್ಷಸನು ಹೊಡೆದನೋ ?

೫೪. ಅದೆಲ್ಲವನ್ನೂ ನನಗೆ ಹೇಳಿರಿ. ಅದೆಲ್ಲವನ್ನೂ ತಿಳಿದು ಅಲ್ಲಿಗೆ ಹೋಗಿ ಅವನನ್ನು ಹೊಡೆದು ಕಟ್ಟಿ ತರುತ್ತೇನೆ.

ಇತಿ ವಾಕ್ಯಂ ಸಮಾಕರ್ಣ್ಯ ತುರಾಸಾಹಂ ಸುರೋತ್ತಮಾಃ ।
ಜಗದುರ್ದೀನಯಾ ವಾಚಾ ಸುರಾಸುರನಮಸ್ಕೃತಂ ॥ ೫೫ ॥

॥ ದೇವಾ ಊಚುಃ ॥

ಇಹಾಗತ್ಯ ನ ಜಾನೀಮಃ ಕಶ್ಚಿದ್ವಾನರರೂಪಧೃತ್ ।
ನೇತುಂ ದ್ರೋಣಂ ಸಮುದ್ಯುಕ್ತೋ ಲಾಂಗೂಲಾವೇಷ್ಟಿತಂ ಗಿರಿಂ ॥ ೫೬ ॥

ಗಂತುಂ ಕೃತಮತಿಸ್ತಾವದ್ವಯಂ ಸರ್ವೇ ಸುಸಂಹತಾಃ ।
ಯುದ್ಧಂ ಚಕ್ರುಃ ಸುಸನ್ನದ್ಧಾಃ ಸರ್ವಶಸ್ತ್ರಾಸ್ತ್ರವರ್ಷಿಣಃ ॥ ೫೭ ॥

ತೇನ ಸರ್ವೇ ವಯಂ ಯುದ್ಧೇ ನಿರ್ಜಿತಾ ಬಲಶಾಲಿನಾ ।
ಅನೇಕೇ ನಿಹತಾಸ್ತತ್ರ ಭೂಮೌ ಪೇತುಸ್ಸುರೋತ್ತಮಾಃ ॥ ೫೭ ॥

ವಯಂ ತು ಬಹುಭಿಃ ಪುಣ್ಯೈರ್ಜೀವಿತಾ ಇಹ ಚಾಗತಾಃ ।
ಶೋಣಿತೇನ ಸುಷಿಕ್ತಾಂಗಾಃ ಕ್ಷತಪೀಡಾಸಮನ್ವಿತಾಃ ॥ ೫೮ ॥

---

೫೫. ಇಂದ್ರನ ಮಾತನ್ನು ಕೇಳಿ ಅವರು ದೀನತೆಯಿಂದ ಆ ಇಂದ್ರನಿಗೆ ಇಂತೆಂದರು.

೫೬. ದೇವತೆಗಳು ಹೇಳಿದರು :—ಅವನು ಯಾವನೋ ತಿಳಿಯೆವು. ಅವನು ಕಪಿಯ ರೂಪವನ್ನು ಹೊಂದಿ ದ್ರೋಣಪರ್ವತವನ್ನು ತೆಗೆದುಕೊಂಡುಹೋಗಲು ಬಾಲದಿಂದ ಕಟ್ಟಿ ಪ್ರಯತ್ನಪಟ್ಟನು.

೫೭. ಅವನು ಹೋಗಲು ಪ್ರಯತ್ನಪಟ್ಟಾಗ ನಾವು ತಡೆಯಲು ನಮ್ಮನ್ನು ಹೊಡೆದನು. ನಾವು ಸಿದ್ಧರಾಗಿ ಯುದ್ಧಮಾಡಿದೆವು.

೫೭. ಅವನು ಬಲಿಷ್ಠನಾದುದರಿಂದ ನಮ್ಮೆಲ್ಲರನ್ನೂ ಜಯಿಸಿದನು. ಅನೇಕರು ಸತ್ತು ಭೂಮಿಯಲ್ಲಿ ಬಿದ್ದರು.

೫೮. ನಾವು ಬಹು ಪುಣ್ಯದಿಂದ ಜೀವದೊಂದಿಗೆ ಇಲ್ಲಿಗೆ ಬಂದಿದ್ದೇವೆ. ಆದರೂ ರಕ್ತದಿಂದ ತೊಡಿಕೊಂಡು ಬಹು ಏಟುಗಳನ್ನು ತಿಂದು ಗಾಯಗೊಂಡಿದ್ದೇವೆ.

ಏತದ್ವಾಕ್ಯಂ ಸಮಾಕರ್ಣ್ಯ ಸುರಾಣಾಂ ಸ ಪುರಂದರಃ ।
ಆದಿದೇಶ ಸುರಾನ್ಸರ್ವಾನ್ಮಹಾಬಲಸಮನ್ವಿತಾನ್ ॥ ೬೦ ॥

ಯಾತ ಮಹಾದ್ರೋಣಗಿರಿಂ ಕಪಿಂ ಬದ್ಧ್ವಾ ಮಹಾಬಲಂ ।
ಬದ್ಧ್ವಾನಯತ ಯೂಯಂ ವೈ ಸುರಾಣಾಂ ರಣಪಾತಕಂ ॥ ೬೧ ॥

ಇತ್ಯಾಜ್ಞಪ್ತಾ ಯಯುಸ್ತೇ ವೈ ದ್ರೋಣಂ ಪರ್ವತಮುತ್ತಮಂ ।
ಯತ್ರಾಸ್ತೇ ಬಲವಾನ್ವೀರೋ ಹನೂಮಾನ್ಕಪಿಸತ್ತಮಃ ॥ ೬೨ ॥

ಗತ್ವಾ ತೇ ಪ್ರಾಹರನ್ಸರ್ವೇ ಹನೂಮಂತಂ ಮಹಾಬಲಂ ।
ಹನೂಮತಾ ತೇ ನಿಹತಾ ಮುಷ್ಟಿಭಿಃ ಖರತಾಡನೈಃ ॥ ೬೩ ॥

ಪತಿತಾಸ್ತೇ ಕ್ಷಣಾತ್ತತ್ರ ರುಧಿರಕ್ಷತವಿಗ್ರಹಾಃ ।
ಅನ್ಯೇ ಪಲಾಯನಪರಾ ಜಗ್ಮುಸ್ತಂ ತ್ರಿದಿವೇಶ್ವರಂ ॥ ೬೪ ॥

ತಚ್ಛ್ರುತ್ವಾ ಕುಪಿತಶ್ಶಕ್ರಃ ಸರ್ವಾನಮರಸತ್ತಮಾನ್ ।
ಆದಿದೇಶ ಮಹಾವೀರಂ ವಾನರೇಂದ್ರಂ ಸುರೋತ್ತಮಃ ॥ ೬೫ ॥

---

೬೦. ಅವರ ಆ ಮಾತನ್ನು ಕೇಳಿ ಇಂದ್ರನು ಮಹಾಬಲಿಷ್ಠರಾದ ದೇವತೆಗಳಿಗೆಲ್ಲಾ ಅಪ್ಪಣೆಮಾಡಿದನು.

೬೧. ಬಲಿಷ್ಠನಾದ ಕಪಿಯನ್ನು ಕಟ್ಟಿಕೊಂಡು ಬರಲು ದ್ರೋಣಗಿರಿಗೆ ಹೋಗಿರಿ. ಅದನ್ನು ಕಟ್ಟಿ ಇಲ್ಲಿಗೆ ತನ್ನಿರೆಂದು ಅಪ್ಪಣೆಮಾಡಿದನು.

೬೨. ಈರೀತಿ ಆಜ್ಞೆಹೊಂದಿದ ಆ ದೇವತೆಗಳು ಕಪಿಯಿರುವ ದ್ರೋಣ ಪರ್ವತಕ್ಕೆ ಹೋದರು.

೬೩. ಅವರೆಲ್ಲರೂ ಹೋಗಿ ಹನುಮಂತನನ್ನು ಹೊಡೆದರು. ಅವನು ಮುಷ್ಟಿಯಿಂದ ಅವರನ್ನು ಹೊಡೆದನು.

೬೪. ಕೆಲವರೆಲ್ಲರೂ ಏಟುತಿಂದು ರಕ್ತಕಾರುತ್ತ ಭೂಮಿಯಲ್ಲಿ ಬಿದ್ದರು. ಮತ್ತೆ ಕೆಲವರು ಸೋತು ಇಂದ್ರನ ಬಳಿಗೆ ಓಡಿದರು.

೬೫. ಅದನ್ನು ಕೇಳಿ ಆ ಇಂದ್ರನು ಎಲ್ಲಾ ದೇವತೆಗಳಿಗೂ ಹನುಮಂತನ ಮೇಲೆ ಬೀಳುವಂತೆ ಅಪ್ಪಣೆಮಾಡಿದನು.

ತದಾಜ್ಞಪ್ತಾ ಯಯುಸ್ತೇ ವೈ ಯತ್ರಕೇಶೇಶ್ವರೋ ಬಲೀ ।
ತಾನ್ಸರ್ವಾನಾಗತಾನ್ದೃಷ್ಟ್ವಾ ಜಗಾದ ಕಪಿಸತ್ತಮಃ ॥ ೬೬ ॥

ಮಾಯಾನ್ತು ವೀರಾಸ್ಸಮರೇ ಸಂಹಂತಾರಂ ಹಿ ಮಾಂ ಬಲಾತ್ ।
ನೇಷ್ಯಾಮಿ ಯುಷ್ಮಾನಧುನಾ ಸಂಯಮಿನ್ಯಾಃ ಪುರೋಽನ್ತಿಕೇ ॥ ೬೭ ॥

ಇತ್ಯುಕ್ತಾ ಅಪಿ ತೇ ಸರ್ವೇ ಸನ್ನದ್ಧಾಃ ಪ್ರಾಹರನ್ಕಪಿಂ ।
ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರ್ಮಹಾಬಲಸಮನ್ವಿತಾಃ ॥ ೬೮ ॥

ಕೇಚಿಚ್ಛೂಲೈಃ ಪರಶುಭಿಃ ಕೇಚಿತ್ಖಡ್ಗೈಶ್ಚ ಪಟ್ಟಿಸೈಃ ।
ಮುಸಲೈಃ ಶಕ್ತಿಭಿಃ ಕೇಚಿತ್ಕ್ರೋಧೇನ ಕಲುಷೀಕೃತಾಃ ॥ ೬೯ ॥

ಸ ಆಹತೋಽಮರವರೈರ್ವಿವಿಧೈರಾಯುಧೈರ್ಬಲೀ ।
ಶಿಲಾಭಿಸ್ತಾನ್ ಜಘಾನಾಶು ಸರ್ವಾನಮರಸತ್ತಮಾನ್ ॥ ೭೦ ॥

---

೬೬. ಆ ಇಂದ್ರನ ಆಜ್ಞೆಯಂತೆ ಎಲ್ಲರೂ ಕಪಿಯ ಬಳಿಗೆ ಬರಲು ಅವರನ್ನು ಕುರಿತು ಕಪಿಯಾದ ಹನುಮಂತನಿಂತೆಂದನು.

೬೭. ನನ್ನ ಬಳಿಗೆ ಬರಬೇಡಿ. ನಾನು ಕೊಂದು ನಿಮ್ಮೆಲ್ಲರನ್ನೂ ಯಮಪುರಿಗೆ ಕಳುಹಿಸುತ್ತೇನೆ.

೬೮. ಹೀಗೆ ಹೇಳಿದರೂ ಅವರು ಸಿದ್ಧರಾಗಿ ಕಪಿಯನ್ನು ಅಸ್ತ್ರಶಸ್ತ್ರಗಳಿಂದ ಹೊಡೆದರು.

೬೯. ಕೆಲವರು ಶೂಲದಿಂದಲೂ, ಕೆಲವರು ಪರಶುಗಳಿಂದಲೂ, ಕೆಲವರು ಖಡ್ಗದಿಂದಲೂ, ಕೆಲವರು ಶೂಲದಿಂದಲೂ, ಮತ್ತೆ ಕೆಲವರು ಮುಸಲಗಳಿಂದಲೂ ಕೋಪಗೊಂಡು ಹೊಡೆದರು.

೭೦. ದೇವತೆಗಳು ಈ ಪ್ರಕಾರವಾಗಿ ನಾನಾವಿಧವಾದ ಆಯುಧಗಳಿಂದ ಹೊಡೆಯುತ್ತಿರಲು ಹನುಮಂತನು ತಾನು ಕೋಪದಿಂದ ಕಲ್ಲುಗಳನ್ನು ತೆಗೆದುಕೊಂಡು ಹೊಡೆದನು.

ಕೇಚಿತ್ಪಲಾಯ್ಯ ಆಯಸ್ತೇ ಗತಾಶ್ಯಕ್ರಸಮೀಪಕಂ ।
ತದುಕ್ತಂ ವಾಕ್ಯಮಾಕರ್ಣ್ಯ ಭಯಂ ಪ್ರಾಪ ಸುರಾಧಿಪಃ ॥ ೭೧ ॥

ಬೃಹಸ್ಪತಿಂ ಸುರಾಧ್ಯಕ್ಷಂ ಮಂತ್ರಿಣಂ ಸ್ವರ್ಗವಾಸಿನಾಂ ।
ಪಪ್ರಚ್ಛ ಸವಿಧೇ ಗತ್ವಾ ನತ್ವಾ ಸುರಗುರುಂ ತದಾ ॥ ೭೨ ॥

॥ ಇಂದ್ರ ಉವಾಚ ॥

ಕೋಽಸೌ ಯೋ ವಾನರೋ ದ್ರೋಣಂ ನೇತುಂ ಸ್ವಾಮಿಸ್ಸಮಾಗತಃ ।
ಯೇನ ಮೇ ನಿಹತಾ ವೀರಾ ಅಮರಾಶ್ಯಸ್ತ್ರಧಾರಿಣಃ ॥ ೭೩ ॥

॥ ಶೇಷ ಉವಾಚ ॥

ಏತಚ್ಛ್ರುತ್ವಾ ತು ತದ್ವಾಕ್ಯಮುಕ್ತಮಾಂಗಿರಸೋ ಮಹಾನ್ ।
ಜಗಾದ ಭಯಸಂವಿಗ್ನಂ ತುರಾಸಾಹಂ ಸುರಾಧಿಪಂ ॥ ೭೪ ॥

॥ ಬೃಹಸ್ಪತಿರುವಾಚ ॥

ಯೋ ರಾವಣಮಹತ್ಸಂಖ್ಯೇ ಕುಂಭಕರ್ಣಮದೀದಹತ್ ।
ಯೇನ ತೇ ವೈರಿಣಸ್ಸರ್ವೇ ಹತಾಸ್ತಸ್ಯ ಹಿ ಸೇವಕಃ ॥ ೭೫ ॥

ಯೇನ ಲಂಕಾ ಸತ್ರಿಕೂಟಾ ನಿರ್ದಗ್ಧಾ ಪುಚ್ಛವಹ್ನಿನಾ ।
ಅಕ್ಷಶ್ಚ ನಿಹತೋ ಯೇನ ಹನೂಮಂತಮವೇಹಿ ತಂ ॥ ೭೬ ॥

---

೭೧. ಕೆಲವರು ಓಡಿಹೋಗಿ ಇಂದ್ರನಿಗೆ ಹೇಳಲು ಅವರ ಮಾತನ್ನು ಕೇಳಿ ಭಯವುಂಟಾಯಿತು.

೭೨. ಆಗ ಇಂದ್ರನು ದೇವತೆಗಳಿಗೆಲ್ಲಾ ಗುರುವಾದ ಮತ್ತು ಮಂತ್ರಿಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ ನಮಸ್ಕರಿಸಿ ಕೇಳಿದನು.

೭೩. ಇಂದ್ರನು ಹೇಳಿದನು:—ಎಲೈ ಸ್ವಾಮಿಯೇ, ಈ ದ್ರೋಣಪರ್ವತವನ್ನು ಕೊಂಡುಹೋಗಲು ಬಂದಿರುವ ಮತ್ತು ಶಸ್ತ್ರಧಾರಿಗಳಾದ ವೀರರನ್ನೆಲ್ಲಾ ಸಂಹಾರಮಾಡಿರುವ ಕಪಿ ಯಾವುದು ?

೭೪. ಶೇಷನು ಹೇಳಿದನು:—ಈ ಮಾತನ್ನು ಕೇಳಿ ಬೃಹಸ್ಪತಿಯು ಭಯಗೊಂಡಿರುವ ಇಂದ್ರನಿಗಿಂತೆಂದನು.

೭೫. ಬೃಹಸ್ಪತಿಯು ಹೇಳಿದನು:—ಯಾವ ರಾಮನು ಯುದ್ಧದಲ್ಲಿ ರಾವಣ ಕುಂಭಕರ್ಣರನ್ನೂ ಇನ್ನೂ ತನ್ನ ಶತ್ರುಗಳೆಲ್ಲರನ್ನೂ ಕೊಂದನೋ ಅಂತಹ ಶ್ರೀರಾಮನ ಸೇವಕನು.

೭೬. ಯಾವನು ಬಾಲದ ಬೆಂಕಿಯಿಂದ ಲಂಕೆಯನ್ನು ಸುಟ್ಟು ಅಕ್ಷನನ್ನು ಸಹ ಕೊಂದನೋ ಆ ಹನುಮಂತನೆಂದು ತಿಳಿ.

ತೇನ ಸರ್ವೇ ವಿನಿಹತಾಃ ದ್ರೋಣಾರ್ಥಮಯಮುದ್ಯತಃ ।
ಹಯಮೇಧಂ ಮಹಾರಾಜಃ ಕರೋತೀತಿ ಬಲಸತ್ತಮಃ ॥ ೭೭ ॥

ತಸ್ಯಾಶ್ವಂ ಶಿವಭಕ್ತಸ್ತು ನೃಪೋ ವೀರಮಣಿರ್ಮಹಾನ್ ।
ಜಹಾರ ತತ್ರ ಸಮಭೂದ್ರಣಂ ಸುರವಿನೋದಸಂ ॥ ೭೮ ॥

ಶಿವೇನ ನಿಹತಾಸ್ಸಂಖ್ಯೇ ವೀರಾ ರಾಮಸ್ಯ ಭೂರಿಶಃ ।
ತಾನ್ವೈ ಜೀವಯಿತುಂ ದ್ರೋಣಂ ನೇಷ್ಯತ್ಯೇವ ಮಹಾಬಲಃ ॥ ೭೯ ॥

ನಾಯಂ ವರ್ಷಶತೈರ್ಜೇಯೋ ಭವತಾ ಬಲಸಂಯುತಃ ।
ತಸ್ಮಾತ್ಪ್ರಸಾದಯ ಕಪಿಂ ದೇಹಿ ತತ್ರತ್ಯಮೌಷಧಂ ॥ ೮೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷ
ವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ ದೇವ
ಯುದ್ಧಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೭೭. ಅವನೇ ಎಲ್ಲರನ್ನೂ ಕೊಂದವನು. ದ್ರೋಣಪರ್ವತವನ್ನು ಕೊಂಡೊಯ್ಯಲು ಪ್ರಯತ್ನಪಟ್ಟಿದ್ದಾನೆ. ಬಲಿಷ್ಠನಾದ ರಾಮನು ಅಶ್ವಮೇಧಯಾಗವನ್ನು ಮಾಡುತ್ತಾನೆ.

೭೮. ಆ ರಾಮನ ಯಜ್ಞದ ಕುದುರೆಯನ್ನು ಶಿವಭಕ್ತನಾದ ವೀರಮಣಿಯು ಕಟ್ಟಿದನು. ಆಗ ಬಹು ದೊಡ್ಡ ಯುದ್ಧವು ನಡೆಯಿತು.

೭೯. ರಾಮನ ಕಡೆಯ ವೀರರನ್ನು ಶಿವನು ಕೊಂದನು. ಅವರನ್ನು ಬದುಕಿಸಲು ಈತನು ದ್ರೋಣಪರ್ವತವನ್ನು ತೆಗೆದುಕೊಂಡುಹೋಗುತ್ತಾನೆ.

೮೦. ನೂರುವರ್ಷಗಳು ಯುದ್ಧಮಾಡಿದರೂ ಅವನನ್ನು ಜಯಿಸಲಾಗುವುದಿಲ್ಲ. ಆದ್ದರಿಂದ ಆ ಹನುಮಂತನನ್ನು ಸಮಾಧಾನಪಡಿಸಿ ಅಲ್ಲಿರುವ ಔಷಧಿಯನ್ನು ಕೊಡು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ದೇವಯುದ್ಧವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
# ಪಂಚಚತ್ವಾರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಗುರುಭಾಷಿತಮಾಕರ್ಣ್ಯ ವೃಷಪರ್ವರಿಪುಃ ಸ್ವರಾಟ್ ।
ಜ್ಞಾತ್ವಾ ರಾಮಸ್ಯ ಕಾರ್ಯಾರ್ಥಮಾಗತಂ ಪವನಾತ್ಮಜಂ ॥ ೧ ॥

ಭಯಂ ತತ್ಯಾಜ ಮನಸಿ ವಾನರಾತ್ಸಮುಪಸ್ಥಿತಂ ।
ಜಹರ್ಷ ಚಿತ್ತೇ ಸ ಭೃಶಂ ವಾಚಸ್ಪತಿಮುವಾಚ ಹ ॥ ೨ ॥

॥ ಇಂದ್ರ ಉವಾಚ ॥

ಕಥಂ ಕಾರ್ಯಂ ಸುರಾಧೀಶ ದ್ರೋಣೋಽಯಂ ನೇಷ್ಯತೇ ಯದಿ ।
ದೇವಾನಾಂ ಜೀವಿತಂ ಭೂಯಃ ಕಥಂ ಸ್ಯಾದಿತಿ ಮೇ ವದ ॥ ೩ ॥

---

## ನಲವತ್ತೈದನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಗುರುವು ಹೇಳಿದುದನ್ನು ಆ ಇಂದ್ರನು ಕೇಳಿ ಕಪಿಯು ರಾಮಕಾರ್ಯಕ್ಕೋಸ್ಕರ ಬಂದಿರುವುದಾಗಿ ತಿಳಿದನು.

೨. ಇಂದ್ರನು ಕಪಿಯಿಂದುಂಟಾದ ಭಯವನ್ನು ಬಿಟ್ಟುಬಿಟ್ಟು ಸಂತೋಷಗೊಂಡವನಾಗಿ ಗುರುವನ್ನು ಕುರಿತಿಂತೆಂದನು.

೩. ಇಂದ್ರನು ಹೇಳಿದನು :—ಎಲೈ ಗುರುವೇ, ದ್ರೋಣಪರ್ವತವನ್ನು ತೆಗೆದುಕೊಂಡುಹೋದರೆ ಏನುಮಾಡುವುದು ? ದೇವತೆಗಳಿಗೆ ಜೀವನವು ಹೇಗೆ ಸಾಗುವುದು ಎಂಬುದನ್ನು ಹೇಳು.

ಇದಾನೀಂ ಪವನೋಽದ್ಭೂತಂ ಪ್ರಸಾದಯ ಯಥಾ ಕಥಂ ।
ರಾಮಃ ಪ್ರೀತಿಂ ಪರಾಂ ಯಾತಿ ದೇವಾನಾಂ ಚ ಸುಖಂ ಭವೇತ್ ॥ ೪ ॥

ದೇವಾಧಿಪಸ್ಯ ವಚನಂ ಶ್ರುತ್ವಾ ವಾಚಸ್ಪತಿಸ್ತದಾ ।
ಶಕ್ರಂ ತು ಪುರತಃ ಕೃತ್ವಾ ಸರ್ವದೇವೈಃ ಪರಿವೃತಂ ॥ ೫ ॥

ಜಗಾಮ ತತ್ರ ಯತ್ರಾಸ್ತೇ ಹನೂಮಾನ್ನಿರ್ಭಯಃ ಕಪಿಃ ।
ಗರ್ಜತಿ ಪ್ರಸಭಂ ಜಿತ್ವಾ ಸುರಾನ್ಸರ್ವಾನ್ಸುಖಾಸನಃ ॥ ೬ ॥

ತೇ ಗತ್ವಾ ಸವಿಧೇ ತಸ್ಯ ಬೃಹಸ್ಪತಿಪುರೋಗಮಾಃ ।
ಪೇತುಸ್ತೇ ಚರಣೌ ನತ್ವಾ ಸಮೀರತನುಜಸ್ಯ ಹಿ ॥ ೭ ॥

ಬೃಹಸ್ಪತಿಸ್ತು ತಂ ವೀರಂ ಜಗಾದ ಪ್ರೇರಿತೋ ಮುದಾ ।
ಸುರಾಧೀಶೇನ ಲೋಕಸ್ಯ ಗುರುಣಾ ವದತಾಂ ವರಃ ॥ ೮ ॥

॥ ಬೃಹಸ್ಪತಿರುವಾಚ ॥

ಅಜಾನದ್ಭಿಃ ಕೃತಂ ಕರ್ಮ ದೇವೈಸ್ತವ ಪರಾಕ್ರಮಂ ।
ರಾಮಸ್ಯ ಚರಣಯೋಸ್ತ್ವಂ ಸೇವಕೋಽಸಿ ಮಹಾಮತೇ ॥ ೯ ॥

---

೪. ಈಗ ಹೇಗಾದರೂ ಕಪಿಯನ್ನು ಸಮಾಧಾನಪಡಿಸು. ರಾಮನು ಪ್ರೀತಿಯನ್ನು ಹೊಂದಬೇಕು. ದೇವತೆಗಳಿಗೆ ಸುಖವಾಗಬೇಕು. ಹಾಗೆ ಮಾಡು.

೫. ದೇವತೆಗಳ ರಾಜನಾದ ಇಂದ್ರನ ಮಾತನ್ನು ಗುರುವು ಕೇಳಿ ಜೊತೆಯಲ್ಲಿ ಅವನನ್ನೂ ದೇವತೆಗಳನ್ನೂ ಸಹ ಕರೆದುಕೊಂಡು ಹೋದನು.

೬. ನಿರ್ಭಯವಾಗಿ ಸುಖವಾಗಿ ಕುಳಿತುಕೊಂಡು ಗರ್ಜಿಸುತ್ತಿರುವ ಆ ಕಪಿಯಿರುವಲ್ಲಿಗೆ ಹೋದನು.

೭. ಬೃಹಸ್ಪತಿಯೇ ಮುಂತಾದವರು ಅಲ್ಲಿಗೆ ಹೋಗಿ ಆ ಕಪಿಗೆ ನಮಸ್ಕರಿಸಿದರು.

೮. ಇಂದ್ರನಿಂದ ಪ್ರೇರಿತನಾದ ಗುರುವು ಆ ಕಪಿಯನ್ನು ಕುರಿತಿಂತೆಂದನು.

೯. ಬೃಹಸ್ಪತಿಯು ಹೇಳಿದನು:—ದೇವತೆಗಳು ನಿನ್ನ ಪರಾಕ್ರಮವನ್ನು ತಿಳಿಯದೆ ಹೀಗೆ ಯುದ್ಧಮಾಡಿದರು. ನೀನು ರಾಮಸೇವಕನಾಗಿದ್ದೀಯೆ.

ಕಿಮರ್ಥಮಯಮಾರಂಭಃ ಕಥಮತ್ರ ಸಮಾಗಮಃ ।
ತತ್ಕರಿಷ್ಯಾಮಹೇ ಸರ್ವೇ ಸನ್ನತಾಸ್ತವ ಭಾಷಿತಂ ॥ ೧೦ ॥

ರೋಷಂ ತ್ಯಕ್ತ್ವಾ ಕೃಪಾಂ ಕೃತ್ವಾ ದೇವಾಧೀಶಂ ವಿಲೋಕಯ ।
ಪವನಾತ್ಮಜ ದೈತ್ಯಾನಾಂ ಭಯಂಕರವಪುರ್ಧರ ॥ ೧೧ ॥

॥ ಶೇಷ ಉವಾಚ ॥

ಇತ್ಥಂ ಭಾಷಿತಮಾಕರ್ಣ್ಯ ದೇವಾನಾಂ ಸ ಗುರೋರ್ವಚಃ ।
ಉವಾಚ ದೇವಾನ್ಸಕಲಾನ್ಗುರುಂ ಚೈವ ಮಹಾಯಶಾಃ ॥ ೧೨ ॥

ರಾಜ್ಞೋ ವೀರಮಣೇಸ್ಸಂಖ್ಯೇ ಶತಾಶ್ಯರ್ವೇಣ ಭೂರಿಶಃ ।
ಭಟಾಸ್ತಾನ್ಸ್ವೈ ಜೀವಯಿತುಂ ದ್ರೋಣಂ ನೇಷ್ಯಾಮಿ ಪರ್ವತಂ ॥ ೧೩ ॥

ತಂ ಯೇ ನಿವಾರಯಿಷ್ಯಂತಿ ಸ್ವವೀರ್ಯಬಲದರ್ಪಿತಾಃ ।
ತಾನ್ನೇಷ್ಯಾಮಿ ಕ್ಷಣಾದೇವ ಯಮಸ್ಯ ಸದನಂ ಪ್ರತಿ ॥ ೧೪ ॥

---

೧೦. ಈ ಕೆಲಸದ ಉದ್ದೇಶವೇನು? ಇಲ್ಲಿಗೇಕೆ ಬಂದೆ? ಹೇಳಿದರೆ ಅದೆಲ್ಲವನ್ನೂ ಶಿರಸಾವಹಿಸಿ ನಾವೆಲ್ಲರೂ ಮಾಡುತ್ತೇವೆ.

೧೧. ಕೋಪವನ್ನು ಬಿಡು. ಕೃಪೆಯಿಡು. ದೇವಾಧೀಶನನ್ನು ನೋಡು. ನೀನು ದೈತ್ಯರಲ್ಲಿ ಭಯಂಕರನಾಗಿರು.

೧೨. ಈ ಮಾತನ್ನು ಕೇಳಿ ದೇವತೆಗಳನ್ನೂ ಬೃಹಸ್ಪತಿಯನ್ನೂ ಕುರಿತು ಇಂತೆಂದನು.

೧೩. ರಾಜನಾದ ವೀರಮಣಿಯ ಯುದ್ಧದಲ್ಲಿ ಶಿವನು ಬಹು ಜನ ಭಟರನ್ನು ಕೊಂದಿರುವನು. ಅವರನ್ನು ಬದುಕಿಸಲು ಈ ದ್ರೋಣಪರ್ವತವನ್ನು ಕೊಂಡು ಹೋಗುತ್ತೇನೆ.

೧೪. ತಮ್ಮ ಬಲದಿಂದ ಅದನ್ನು ಯಾರು ತಡೆಯುತ್ತಾರೋ ಅವರನ್ನು ಯಮನ ಪಟ್ಟಣಕ್ಕೆ ಕಳುಹಿಸುತ್ತೇನೆ.

ತಸ್ಮಾದ್ದದತು ಮೇ ಯೂಯಂ ದ್ರೋಣಂ ವಾಥ ತದೌಷಧಂ ।
ಯೇನ ಸಂಜೀವಯಿಷ್ಯಾಮಿ ಮೃತಾನ್ವೀರಾನ್ರಣಾಂಗಣೇ ॥ ೧೫ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಪವನಸ್ಯ ಸುತಸ್ಯ ಹಿ ।
ತೇ ಸರ್ವೇ ಪ್ರಣತಿಂ ಗತ್ವಾ ದದುಃ ಸಂಜೀವನೌಷಧಂ ॥ ೧೬ ॥

ತೇ ಪ್ರಹೃಷ್ಟಾ ಭಯಂ ತ್ಯಕ್ತ್ವಾ ಸುರಾಸ್ಸ್ವರ್ಗೌಕಸಸ್ಸಮಂ ।
ಯಯುಃ ಸುರಪತಿಂ ಕೃತ್ವಾ ಪುರಃ ಸೌಖ್ಯಸಮನ್ವಿತಾಃ ॥ ೧೭ ॥

ಹನೂಮಾನ್ಭೇಷಜಂ ತತ್ತು ಸಮಾದಾಯ ಗತೋ ರಣಂ ।
ಸ್ತುತಸ್ಸರ್ವೈಸ್ಸುರಗಣೈರ್ಮಹಾಕಾರ್ಯಸಮುತ್ಸುಕೈಃ ॥ ೧೮ ॥

ತಮಾಗತಂ ಹನೂಮಂತಂ ವೀಕ್ಷ್ಯ ಸರ್ವೇಽಪಿ ವೈರಿಣಃ ।
ಸಾಧು ಸಾಧು ಪ್ರಶಂಸಂತೋ ಅದ್ಭುತಂ ಮೇನಿರೇ ಕಪಿಂ ॥ ೧೯ ॥

---

೧೫ ಆದ್ದರಿಂದ ಆ ಪರ್ವತವನ್ನಾಗಲಿ, ಇಲ್ಲವೇ ಔಷಧಿಯನ್ನಾಗಲಿ ನನಗೆ ಕೊಡಿ ಅದರಿಂದ ರಣಭೂಮಿಯಲ್ಲಿ ಸತ್ತವರನ್ನು ಬದುಕಿಸುತ್ತೇನೆ.

೧೬. ಶೇಷನು ಹೇಳಿದನು!—ಹನುಮಂತನ ಈ ಮಾತನ್ನು ಕೇಳಿ ಅವರೆಲ್ಲರೂ ನಮಸ್ಕರಿಸಿ ಸಂಜೀವನೌಷಧಿಯನ್ನು ಕೊಟ್ಟರು.

೧೭. ಅವರೆಲ್ಲರೂ ಭಯವನ್ನು ಬಿಟ್ಟು ಇಂದ್ರನನ್ನು ಮುಂದುಮಾಡಿಕೊಂಡು ಹೊರಟರು.

೧೮. ಮಹಾಕಾರ್ಯದಲ್ಲಿ ಆಸಕ್ತರಾದ ಆ ದೇವತೆಗಳಿಂದ ಹೊಗಳಲ್ಪಟ್ಟು ರಣದಲ್ಲಿ ಸತ್ತವರಿಗೆ ಔಷಧವನ್ನು ಕೊಡಲು ಹೊರಟನು.

೧೯. ವೈರಿಗಳು ಹನೂಮಂತನನ್ನು ನೋಡಿ ಸಾಧು ಸಾಧು ಎಂದು ಹೊಗಳುತ್ತ ಆ ಕಪಿಯನ್ನು ಅದ್ಭುತವನ್ನಾಗಿ ತಿಳಿದರು.

ಕಪಿಸ್ಸಮಾಗತ್ಯ ಮಹಾಮುದಾ ಯುತಃ
ಪುರೋ ಭಟಂ ಪುಷ್ಕಲಮಾಗತಂ ಮೃತಂ ।
ಶಿವೇನ ಸಂರಕ್ಷಿತಮುಗ್ರಮಂಡಲೇ
ಶ್ರೀರಾಮಚಿತ್ತಂ ಸವಿಧೇ ಜಗಾಮ ಹ ॥ ೨೦॥

ಸುಮತಿಂ ಚ ಸಮಾಹೂಯ ಮಂತ್ರಿಣಂ ಮಹತಾಂ ಮತಂ ।
ಉವಾಚ ಜೀವಯಾಮ್ಯದ್ಯ ಸರ್ವಾನ್ವೀರಾನ್ರಣೇ ಮೃತಾನ್ ॥ ೨೧ ॥

ಇದಮುಕ್ತ್ವಾ ಭೇಷಜಂ ತತ್ಪುಷ್ಕಲಸ್ಯ ಮಹೋರಸಿ ।
ಶಿರಃ ಕಾಯೇನ ಸಂಧಾಯ ಜಗಾದ ವಚನಂ ಶುಭಂ ॥ ೨೨ ॥

ಯದ್ಯಹಂ ಮನಸಾ ವಾಚಾ ಕರ್ಮಣಾ ರಾಘವಂ ಪತಿಂ ।
ಜಾನಾಮಿ ತರ್ಹಿ ಹ್ಯೇತೇನ ಭೇಷಜೇನಾಶು ಜೀವತು ॥ ೨೩ ॥

ಇತಿ ವಾಕ್ಯಂ ಯದಾ ವಕ್ತಿ ತಾವತ್ಪುಷ್ಕಲ ಉತ್ಥಿತಃ ।
ರಣಾಂಗಣೇಽ ದಶದ್ರೋಷಾದ್ದಂತಾನ್ ವೀರಶಿರೋಮಣಿಃ ॥ ೨೪ ॥

---

೨೦. ಆ ಹನುಮಂತನು ಸಂತೋಷದಿಂದ ಶಿವನು ರಕ್ಷಿಸುತ್ತಿರುವ ಭೂಮಿಗೆ ಬಂದು ಎದುರಿಗೆ ಸತ್ತುಬಿದ್ದಿದ್ದ ಪುಷ್ಕಲನನ್ನು ನೋಡಿ ರಾಮಧ್ಯಾನವನ್ನು ಮಾಡುತ್ತಾ ರಾಮಭಕ್ತನಾದ ಅವನ ಹತ್ತಿರಕ್ಕೆ ಹೋದನು.

೨೧. ಮಂತ್ರಿಯಾದ ಸುಮತಿಯನ್ನು ಕರೆದು ಸತ್ತಿರುವ ಎಲ್ಲಾ ವೀರರನ್ನೂ ಈಗ ಬದುಕಿಸುತ್ತೇನೆಂದನು.

೨೨. ಹೀಗೆಂದು ಹೇಳಿ ಆ ಔಷಧಿಯನ್ನು ಪುಷ್ಕಳನ ಎದೆಯಲ್ಲಿಟ್ಟು ತಲೆಯನ್ನು ರುಂಡದೊಂದಿಗೆ ಸೇರಿಸಿ ಇಂತೆಂದನು.

೨೩. ಮನೋವಾಕ್ಕಾಯಗಳಿಂದಲೂ ನಾನು ರಾಮನನ್ನು ಒಡೆಯನನ್ನಾಗಿ ತಿಳಿದಿದ್ದರೆ ಈ ಔಷಧದಿಂದ ಪುಷ್ಕಳನು ಬದುಕಲಿ.

೨೪. ಈ ಮಾತನ್ನು ಹೇಳಿದ ಒಡನೆಯೇ ಪುಷ್ಕಳನು ಎದ್ದು ಯುದ್ಧರಂಗದಲ್ಲಿ ಹಲ್ಲನ್ನು ಕಡಿಯುತ್ತ ನಿಂತನು.

ಕ್ವ ಗತೋ ವೀರಭದ್ರೋಽಸೌ ಮಾಂ ಸಮ್ಮೂರ್ಛ್ಯ ರಣಾಂಗಣೇ ।
ಸದ್ಯೋಽಹಂ ಪಾತಯಾಮ್ಯೇನಂ ಕ್ವಾಸ್ತಿ ಮೇ ಧನುರುತ್ತಮಂ ॥ ೨೫ ॥

ಇತಿ ತಂ ಭಾಷಮಾಣಂ ವೈ ಪ್ರಾಹ ವೀರಂ ಕಪೀಂದ್ರಕಃ ।
ಧನ್ಯೋಽಸಿ ವೀರ ಯದ್ಭೂಯೋ ವದಸ್ಯೇನಂ ರಣಾಂಗಣೇ ॥ ೨೬ ॥

ತ್ವಂ ಹತೋ ವೀರಭದ್ರೇಣ ರಘುನಾಥಪ್ರಸಾದತಃ ।
ಪುನಃ ಸಂಜೀವಿತೋಽಸ್ಯೇಹಿ ಶತ್ರುಘ್ನಂ ಯಾಮ ಮೂರ್ಛಿತಂ ॥ ೨೭ ॥

ಇತ್ಯುಕ್ತ್ವಾ ಪ್ರಯಯೌ ತತ್ರ ಸಂಗ್ರಾಮವರಮೂರ್ಧನಿ ।
ಶ್ವಸನ್ನಾಸ್ತೇ ಸ ಶತ್ರುಘ್ನಃ ಶಿವಬಾಣಪ್ರಪೀಡಿತಃ ॥ ೨೮ ॥

ತತ್ರ ಗತ್ವಾ ಸಮೀಪಂ ತಚ್ಛತ್ರುಘ್ನಸ್ಯ ಮಹಾತ್ಮನಃ ।
ನಿಧಾಯ ಭೇಷಜಂ ತಸ್ಯ ವಕ್ಷಸಿ ಶ್ವಾಸಮಾಗತೇ ॥ ೨೯ ॥

ಉವಾಚ ಹನುಮಾಂಸ್ತಂ ವೈ ಜೀವ ಶತ್ರುಘ್ನ ಸತ್ತಮ ।
ಮೂರ್ಛಿತೋಽಸಿ ರಣೇ ಕಸ್ಮಾನ್ಮಹಾಬಲಪರಾಕ್ರಮಃ ॥ ೩೦ ॥

---

೨೫. ವೀರಭದ್ರನು ಎಲ್ಲಿ ಹೋದನು? ನನ್ನನ್ನು ಮೂರ್ಛೆಗೊಳಿಸಿಹೋದ ನಲ್ಲ? ಈ ಕೂಡಲೇ ಕೊಲ್ಲುತ್ತೇನೆ? ನನ್ನ ಧನುಸ್ಸೆಲ್ಲಿ?

೨೬. ಹೀಗೆ ಹೇಳುತ್ತಿರುವ ಪುಷ್ಕಳನನ್ನು ಕುರಿತು ಕಪಿಯು ಎಲೈ ವೀರನೇ ನೀನು ಧನ್ಯನು. ರಣದಲ್ಲಿ ಪುನಃ ಹೀಗೆ ಹೇಳುತ್ತಿರುವೆಯಲ್ಲ!

೨೭. ನಿನ್ನನ್ನು ವೀರಭದ್ರನು ಕೊಂದುಹಾಕಿದನು. ರಾಮನ ಪ್ರಸಾದದಿಂದ ಪುನಃ ಬದುಕಿದ್ದೀಯೆ. ಶತ್ರುಘ್ನನು ಮೂರ್ಛೆಗೊಂಡಿರುವನು. ಅಲ್ಲಿಗೆ ಹೋಗೋಣ ಬಾ.

೨೮. ಹೀಗೆಂದು ಹೇಳಿ ರಣದಲ್ಲಿ ಶಿವನ ಬಾಣದಿಂದ ಮೂರ್ಛಿತನಾದ ಶತ್ರುಘ್ನನಲ್ಲಿಗೆ ಹೋದರು.

೨೯-೩೦. ಶತ್ರುಘ್ನನ ಬಳಿಗೆ ಹೋಗಿ ಎದೆಯಲ್ಲಿ ಔಷಧಿಯನ್ನಿಟ್ಟು ಶ್ವಾಸವು ಬರಲು ಶತ್ರುಘ್ನನೇ ಜೀವಿಸು. ಪರಾಕ್ರಮಿಯಾದ ನೀನು ಏಕೆ ಮೂರ್ಛೆಯನ್ನು ಹೊಂದಿದೆ?

ಯದ್ಯಪಂ ಬ್ರಹ್ಮಚರ್ಯಂ ಚ ಜನ್ಮಪರ್ಯಂತಮುದ್ಯತಃ ।
ಪಾಲಯಾಮಿ ತದಾ ವೀರಃ ಶತ್ರುಘ್ನೋ ಜೀವತಾತ್ಕ್ಷಣಾತ್ ॥ ೩೧ ॥

ಉಕ್ತಮಾತ್ರೇಣ ತೇನೇದಂ ಜೀವಿತಃ ಕ್ಷಣಮಾತತ್ರಃ ।
ಕ್ವ ಶಿವಃ ಕ್ವ ಶಿವೋ ಯಾತೋ ವಿಹಾಯ ರಣಮಂಡಲಂ ॥ ೩೨ ॥

ಅನೇಕೇ ನಿಹತಾಸ್ಸಂಖ್ಯೇ ಶ್ರೀರುದ್ರೇಣ ಪಿನಾಕಿನಾ ।
ತೇ ಸರ್ವೇ ಜೀವಿತಾ ವೀರಾಃ ಕಪೀಂದ್ರೇಣ ಮಹಾತ್ಮನಾ ॥ ೩೩ ॥

ತದಾ ಸರ್ವೇ ಸುಸಂನದ್ಧಾ ರೋಷಪೂರಿತಮಾನಸಾಃ ।
ಸ್ವೇ ಸ್ವೇ ರಥೇ ಸ್ಥಿತಾಶ್ಶತ್ರೂನ್ಪ್ರಯಯುಃ ಕ್ಷತವಿಗ್ರಹಾಃ ॥ ೩೪ ॥

ಪುಷ್ಕಲೋ ವೀರಭದ್ರಂ ತು ಚಂಡಂ ಚೈವ ಕುಶಧ್ವಜಃ ।
ನಂದಿನಂ ಹನುಮಾನ್ವೀರಃ ಶತ್ರುಘ್ನಸ್ಸಂಗರೇ ಶಿವಂ ॥ ೩೫ ॥

ಧನುರ್ವಿಸ್ಫಾರಯಂತಂ ತಂ ಶತ್ರುಘ್ನಂ ಬಲಿನಾಂ ವರಂ ।
ಸಂಗ್ರಾಮೇ ಶಿವಮಾಹೂಯ ತಿಷ್ಠಂತಂ ಪ್ರಯಯೌ ನೃಪಃ ॥ ೩೬ ॥

---

೩೧. ನಾನು ಜನ್ಮವಿರುವವರೆಗೂ ಬ್ರಹ್ಮಚರ್ಯವನ್ನು ಕಾಪಾಡಿಕೊಳ್ಳುವ ಪಕ್ಷದಲ್ಲಿ ಶತ್ರುಘ್ನನು ಜೀವಿಸಲಿ ಎಂದನು.

೩೨. ಅವನು ಹೀಗೆ ಹೇಳಿದೊಡನೆಯೇ ಜೀವಿಸಿಕೊಂಡೆದ್ದು ಶಿವನೆಲ್ಲಿ? ಶಿವನೆಲ್ಲಿ? ಯುದ್ಧಭೂಮಿಯನ್ನು ಬಿಟ್ಟು ಎಲ್ಲಿ ಹೋದನು? ಎಂದನು.

೩೩. ರುದ್ರನಿಂದ ಕೊಲ್ಲಲ್ಪಟ್ಟವರೆಲ್ಲರನ್ನೂ ಹನುಮಂತನು ಬದುಕಿಸಿದನು.

೩೪. ಆಗ ಎಲ್ಲರೂ ಎದ್ದು ಕೋಪದಿಂದ ಕೂಡಿಕೊಂಡು ತಮ್ಮ ತಮ್ಮ ರಥದಲ್ಲಿ ಕುಳಿತು ಮತ್ತೆ ಯುದ್ಧಕ್ಕೆ ಹೊರಟರು.

೩೫. ಪುಷ್ಕಳನು ವೀರಭದ್ರನ ಮೇಲೂ, ಕುಶಧ್ವಜನು ಚಂಡನ ಮೇಲೆಯೂ, ನಂದಿಯ ಮೇಲೆ ಹನುಮಂತನೂ, ಶತ್ರುಘ್ನನು ಶಿವನ ಮೇಲೆಯೂ ಹೊರಟರು.

೩೬. ಯುದ್ಧಭೂಮಿಯಲ್ಲಿ ಧನುಷ್ಟಂಕಾರಮಾಡುತ್ತಾ ಬಲಿಷ್ಠನಾದ ಶತ್ರುಘ್ನನು ಶಿವನನ್ನು ಕರೆಯುತ್ತಿರುವುದನ್ನು ನೋಡಿ ರಾಜನು ಅವನ ಮೇಲೆ ಹೋದನು.

ರಾಜಾ ವೀರಮಣಿರ್ವೀರಃ ಶತ್ರುಘ್ನಸ್ಸಮರೇ ಬಲೀ ॥
ಅನ್ಯೋನ್ಯಂ ಚಕ್ರತುರ್ಯುದ್ಧಂ ಮುನಿವಿಸ್ಮಯಕಾರಕಂ ॥ ೩೭ ॥

ರಾಜ್ಞಾ ವೈ ವೀರಮಣಿನಾ ರಥಾ ಭಗ್ನಾಶ್ಶತಾಧಿಕಾಃ ।
ಶತ್ರುಘ್ನಸ್ಯ ನರೇಂದ್ರಸ್ಯ ತಿಲಶಃ ಕ್ಷಣತೋ ದ್ವಿಜ ॥ ೩೮ ॥

ತದಾ ಪ್ರಕುಪಿತೋಽತ್ಯಂತಂ ಶತ್ರುಘ್ನೋ ರಣಮಂಡಲೇ ।
ಅಗ್ನೇಯಾಸ್ತ್ರಂ ಮುಮೋಚಾಸ್ಮೈ ದಗ್ಧಂ ಸೈನ್ಯಸಮನ್ವಿತಂ ॥ ೩೯ ॥

ದಾಹಕಂ ತನ್ಮಹದ್ದೃಷ್ಟ್ವಾ ಮಹಾಸ್ತ್ರಂ ಶತ್ರುಮೋಚಿತಂ ।
ಅತ್ಯಂತಂ ಕುಪಿತೋ ರಾಜಾ ವಾರುಣಾಸ್ತ್ರಂ ಸಮಾದದೇ ॥ ೪೦ ॥

ವಾರುಣಾಸ್ತ್ರೇಣ ಶೀತಾರ್ತಂ ವೀಕ್ಷ್ಯರಾಮಾನುಜೋ ಬಲೀ ।
ವಾಯುವ್ಯಾಸ್ತ್ರಂ ಮುಮೋಚಾಸ್ಮೈ ತೇನ ವಾಯುರ್ಮಹಾನಭೂತ್॥ ೪೧॥

ವಾಯುನಾ ಸಂಹತಾ ಮೇಘಾ ಯಯುಸ್ತೇ ಸರ್ವತೋ ದಿಶಂ ।
ಇತಸ್ತತೋ ಗತಾಸ್ಸರ್ವೇ ಸೈನ್ಯಂ ತತ್ಸುಖಿತಂ ಬಭೌ ॥ ೪೨ ॥

---

೩೭. ರಾಜನಾದ ವೀರಮಣಿಯೂ ಶತ್ರುಘ್ನನೂ ಒಬ್ಬರಿಗೊಬ್ಬರು ಅದ್ಭುತವಾದ ಯುದ್ಧವನ್ನು ಮಾಡಿದರು.

೩೮. ವೀರಮಣಿಯು ಕ್ಷಣಕಾಲದಲ್ಲಿ ಶತ್ರುಘ್ನನ ಅನೇಕ ರಥಗಳನ್ನು ಪುಡಿಪುಡಿಮಾಡಿದನು.

೩೯. ಆಗ ಶತ್ರುಘ್ನನು ಕೋಪಗೊಂಡು ಆಗ್ನೇಯಾಸ್ತ್ರವನ್ನು ಬಿಡಲು ಎಲ್ಲರನ್ನೂ ಸುಟ್ಟಿತು.

೪೦. ವೀರಮಣಿಯು ಆ ಅಸ್ತ್ರವು ಸುಡುತ್ತಿರುವುದನ್ನು ನೋಡಿ ಕೋಪಗೊಂಡು ವಾರುಣಾಸ್ತ್ರವನ್ನು ಬಿಟ್ಟನು.

೪೧. ವಾರುಣಾಸ್ತ್ರದಿಂದ ಶೀತವಾಗಲು ಶತ್ರುಘ್ನನು ವಾಯುವ್ಯಾಸ್ತ್ರವನ್ನು ಬಿಟ್ಟು ಗಾಳಿಯನ್ನುಂಟುಮಾಡಿದನು.

೪೨. ಆ ಗಾಳಿಯಿಂದ ಒಟ್ಟುಗೂಡಿದ್ದ ಮೇಘಗಳೆಲ್ಲಾ ಚಲ್ಲಾಪಿಲ್ಲಿಯಾದುವು. ಆಗ ಸೈನ್ಯಗಳೆಲ್ಲಾ ಸುಖಗೊಂಡುವು.

ಸೈನ್ಯೇ ಪವನಪೀಡಾರ್ತೇ ನೃಪೋ ವೀರಮಣಿರ್ಮಹಾನ್ ।
ಪರ್ವತಾಸ್ತ್ರಂ ರಿಪೂದ್ಧಾರಿ ಜಗ್ರಾಹ ಚ ಶರಾಸನೇ ॥ ೪೩ ॥

ಪರ್ವತೈಸ್ತಂಭಿತೋ ವಾಯುರ್ನ ಪ್ರಸರ್ಪತಿ ಸಂಗರೇ ।
ತದ್ವೀಕ್ಷ್ಯ ರಾಮಾವರಜೋ ವಜ್ರಾಸ್ತ್ರಂ ತು ಸಮಾದದೇ ॥ ೪೪ ॥

ವಜ್ರಾಸ್ತ್ರೇಣ ಹತಾಃ ಸರ್ವೇ ನಾಗಾಸ್ತು ತಿಲಶಃ ಕೃತಾಃ ।
ಚೂರ್ಣತಾಂ ಪ್ರಾಪುರೇತಸ್ಮಿನ್ರಣೇ ವೀರವರಾರ್ಚಿತೇ ॥ ೪೫ ॥

ವಜ್ರಾಸ್ತ್ರೇಣ ವಿದೀರ್ಣಾಂಗಾ ವೀರಾಶ್ಶೋಣಿತಶೋಭಿತಾಃ ।
ಬಭೂವುಸ್ಸಮರಸ್ಯಾಂತೇ ಚಿತ್ರಂ ಸಮಭವದ್ರಣಂ ॥ ೪೬ ॥

ತದಾ ಪ್ರಕುಪಿತೋಽತ್ಯಂತಂ ರಾಜಾ ವೀರಮಣಿರ್ಮಹಾನ್ ।
ಬ್ರಹ್ಮಾಸ್ತ್ರಂ ಚಾಪ ಆಧತ್ತ ವೈರಿದಾಹಕಮುದ್ಭುತಂ ॥ ೪೭ ॥

---

೪೩. ಸೈನ್ಯವೆಲ್ಲವೂ ಗಾಳಿಯ ಹೊಡೆತಕ್ಕೀಡಾಗಲು ವೀರಮಣಿಯು ಪರ್ವತಾಸ್ತ್ರವನ್ನು ಹೂಡಿದನು.

೪೪. ಪರ್ವತವು ವಾಯುವು ಬೀಸದೆ ಇರುವಂತೆ ತಡೆಯಲು ಶತ್ರುಘ್ನನು ವಜ್ರಾಸ್ತ್ರವನ್ನು ಹೂಡಿದನು.

೪೫. ವಜ್ರಾಸ್ತ್ರವು ಪರ್ವತಗಳನ್ನು ಚೂರ್ಣಮಾಡಿತು. ಆ ಯುದ್ಧರಂಗದಲ್ಲಿ ಎರಚಿತು.

೪೬. ವಜ್ರಾಸ್ತ್ರದಿಂದ ಗಾಯಗೊಂಡ ವೀರರು ಅನೇಕರು ರಕ್ತದಿಂದ ಪ್ರಕಾಶಿಸಿದರು. ಯುದ್ಧವು ಬಹು ಚಿತ್ರವಾಗಿದ್ದಿತು.

೪೭. ಆಗ ಕೋಪಗೊಂಡು ರಾಜನಾದ ವೀರಮಣಿಯು ವೈರಿದಾಹಕವಾದ ಬ್ರಹ್ಮಾಸ್ತ್ರವನ್ನು ತೊಟ್ಟನು.

ಬ್ರಹ್ಮಾಸ್ತ್ರೇ ಸಂಧಿತೇ ಸೋಽಪಿ ಸಸ್ಮಾರ ಸುಮನೋಹರಂ ।
ಶರಂ ತದ್ಯೋಗಿನೀದತ್ತಂ ಸರ್ವಸ್ವೈರಿನಿಮೋಹನಂ ॥ ೪೮ ॥

ಬ್ರಹ್ಮಾಸ್ತ್ರಂ ತತ್ಕರಭ್ರಷ್ಟಮಾಗತಂ ಸ್ವೈರಿಣಂ ಪ್ರತಿ ।
ತಾವಚ್ಛತ್ರುಘ್ನನಾಮ್ನಾ ತು ಮುಕ್ತಂ ತನ್ಮೋಹನಾಸ್ತ್ರಕಂ ॥ ೪೯ ॥

ಮೋಹನಾಸ್ತ್ರೇಣ ತದ್ಬ್ರಾಹ್ಮಂ ದ್ವಿಧಾ ಛಿನ್ನಂ ಕ್ಷಣಾದಿಹ ।
ಲಗ್ನಂ ರಾಜ್ಞೋ ಹೃದಿ ಕ್ಷಿಪ್ರಂ ಮೂರ್ಛಾಮುಪ್ರಾಪಯನ್ನೃಪಂ ॥ ೫೦ ॥

ತೇ ಬಾಣಾಶ್ಶತಶೋ ಮುಕ್ತಾಶ್ಶತ್ರುಘ್ನೇನ ಮಹೀಭೃತಾ ।
ಸರ್ವೇಽಪಿ ಮೂರ್ಛಿತಾ ವೀರಾ ಗಣಾ ರುದ್ರಸ್ಯ ಯೇ ಪುನಃ ॥ ೫೧ ॥

ಶಿವಸ್ಯ ಚರಣೋಪಸ್ಥೇ ಮೂರ್ಧಾಃ ಪೇತುರ್ಮಹೀತಲೇ ।
ತದಾ ಶಿವಃ ಪ್ರಕುಪಿತೋ ರಥೇ ತಿಷ್ಠನ್ಯಯೌ ನೃಪಂ ॥ ೫೨ ॥

ಶಿವೇನ ಸಹಸಾ ಯೋದ್ಧುಂ ಸಮಾಯಾತೋ ರಣಾಂಗಣೇ ।
ಶತ್ರುಘ್ನಸ್ಸಜ್ಯಮಾತ್ತಜ್ಯಂ ಧನುಃ ಕೃತ್ವಾ ವ್ಯಯುಧ್ಯತ ॥ ೫೩ ॥

---

೪೮. ಅವನು ಬ್ರಹ್ಮಾಸ್ತ್ರವನ್ನು ತೊಡಲು ಶತ್ರುಘ್ನನು ಯೋಗಿನಿಯು ಕೊಟ್ಟ ಸರ್ವಮೋಹನಶರವನ್ನು ತೊಟ್ಟನು.

೪೯. ಆ ಬ್ರಹ್ಮಾಸ್ತ್ರವು ಶತ್ರುಘ್ನನ ಬಳಿಗೆ ಬರುವಷ್ಟರಲ್ಲಿ ಇವನು ಮೋಹ ನಾಸ್ತ್ರವನ್ನು ಬಿಟ್ಟನು.

೫೦. ಮೋಹನಾಸ್ತ್ರವು ಬ್ರಹ್ಮಾಸ್ತ್ರವನ್ನು ತುಂಡುಮಾಡಿ ವೀರಮಣಿಯ ಎದೆ ಯಲ್ಲಿ ನೆಟ್ಟಿತು.

೫೧. ಶತ್ರುಘ್ನನು ಸಾವಿರಗಟ್ಟಲೆ ಬಾಣವನ್ನು ಬಿಡಲು ಅಲ್ಲಿರುವ ವೀರರೂ ರುದ್ರಗಣಗಳೂ ತಡೆಯಲಾರದೆ ಶಿವನ ಪಾದದಲ್ಲಿ ಬಂದುಬಿದ್ದರು.

೫೨. ಶಿವನು ಕೋಪಗೊಂಡು ರಥದಲ್ಲಿ ಕುಳಿತು ಶತ್ರುಘ್ನನ ಮೇಲೆ ಹೋದನು.

೫೩. ಒಡನೆಯೇ ಶತ್ರುಘ್ನನು ಶಿವನೊಡನೆ ಯುದ್ಧಮಾಡಲು ಧನುಸ್ಸನ್ನು ಹೆದೆ ಏರಿಸಿಕೊಂಡು ಬಂದನು.

ತಯೋಸ್ಸಮಭವದ್ಘೋರಂ ರಣಂ ವೈರಿವಿದಾರಣಂ ।
ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರಾದೀಪಿತದಿಗಂತರಂ ॥ ೫೪ ॥

ಅಸ್ತ್ರಪ್ರತ್ಯಸ್ತ್ರಸಂಘಾತೈಸ್ತಾಡನಪ್ರತಿತಾಡನೈಃ ।
ದೇವಾನಾಮಪಿ ಯದ್ದೈನ್ಯಂ ತದಭೂದ್ರಣಮಂಡಲೇ ೫೫ ॥

ತದಾ ವ್ಯಾಕುಲಿತೋಽತ್ಯಂತಂ ಶತ್ರುಘ್ನಶ್ಶಿವಸಂಗರೇ ।
ಸಸ್ಮಾರ ಸ್ವಾಮಿನಂ ತತ್ರ ಪಾವನೇರುಪದೇಶತಃ ॥ ೫೬ ॥

ಹಾ ನಾಥ ಭ್ರಾತರತ್ಯುಗ್ರಃ ಶಿವಃ ಪ್ರಾಣಾಪಹಾರಣಂ ।
ಕರೋತಿ ಧನುರುನ್ನಮ್ಯ ತ್ರಾಯಸ್ವ ರಣಮಂಡಲೇ ॥ ೫೭ ॥

ಅನೇಕೇ ದುಃಖಪಾಥೋಧಿಂ ತೀರ್ಣಾ ರಾಮ ತವಾಖ್ಯಯಾ ।
ಮಾಮುದ್ಧರ ದುಃಖಸ್ಥಂ ರಾಮ ರಾಮ ಕೃಪಾನಿಧೇ ॥ ೫೮ ॥

---

೫೪. ಅವರಿಬ್ಬರಿಗೂ ಬಹು ಘೋರವಾದ ಶಸ್ತ್ರಾಸ್ತ್ರಗಳಿಂದ ಯುದ್ಧವು ನಡೆಯಿತು.

೫೫. ಅಸ್ತ್ರ ಅಸ್ತ್ರಕ್ಕೆ ಬದಲಾದ ಅಸ್ತ್ರ, ಏಟುಏಟಿಗೆ ಪ್ರತಿ ಏಟು, ಇವುಗಳಿಂದ ದೇವತೆಗಳೂ ಕೂಡ ದುಃಖಪಡುವಷ್ಟು ಘೋರವಾದ ಯುದ್ಧವು ನಡೆಯಿತು.

೫೬. ಆಗ ಆ ಬಾಣಗಳಿಂದ ಶತ್ರುಘ್ನನು ಬಹು ವ್ಯಥೆಪಟ್ಟನು. ಹನುಮಂತನ ಉಪದೇಶಪ್ರಕಾರ ಅವನು ರಾಮನನ್ನು ಧ್ಯಾನಮಾಡಿದನು.

೫೭. ಎಲೈ ನಾಥನೇ ! ಸೋದರನೇ ! ಶಿವನು ಧನುಸ್ಸನ್ನು ಏರಿಸಿಕೊಂಡು ಬಂದು ಪ್ರಾಣವನ್ನು ತೆಗೆಯುತ್ತಿದ್ದಾನೆ. ನನ್ನನ್ನು ರಣಮಂಡಲದಲ್ಲಿ ಕಾಪಾಡು.

೫೮. ಎಲೈ ಅಣ್ಣನೇ ! ನಿನ್ನ ಹೆಸರನ್ನು ಹೇಳಿಕೊಂಡು ಅನೇಕರು ದುಃಖ ಸಾಗರವನ್ನು ದಾಟಿದರು. ಕೃಪಾನಿಧಿಯಾದ ರಾಮನೇ ನನ್ನನ್ನೂ ಕಾಪಾಡು.

ಇತ್ಥಂ ವಕ್ತಿ ಯದಾ ತಾವದ್ದೀಕ್ಷಿತೋ ರಣಮಂಡಲೇ ।
ನೀಲೋತ್ಪಲದಳಶ್ಯಾಮೋ ರಾಮೋ ರಾಜೀವಲೋಚನಃ ॥ ೫೯ ॥

ಮೃಗಶೃಂಗಂ ಕರೇ ಧೃತ್ವಾ ದೀಕ್ಷಿತಂ ವಪುರುದ್ವಹನ್ ।
ತಂ ದೃಷ್ಟ್ವಾ ವಿಸ್ಮಯಂ ಪ್ರಾಪ ಶತ್ರುಘ್ನಸ್ಸಮರಾಂಗಣೇ ॥ ೬೦ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷ ವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಶ್ರೀರಾಮಸಮಾಗಮೋ ನಾಮ
ಪಂಚಚತ್ವಾರಿಂಶೋಽಧ್ಯಾಯಃ

---

---

೫೯. ಹೀಗೆ ಹೇಳುತ್ತಿರುವಾಗಲೇ ನೀಲೋತ್ಪಲದಂತೆ ಬಣ್ಣವುಳ್ಳ, ರಾಜೀವ ಲೋಚನನಾದ ಮೃಗಶೃಂಗವನ್ನು ಕೈಯ್ಯಲ್ಲಿ ಹಿಡಿದಿರುವ, ದೀಕ್ಷಿತನಾದ ಶ್ರೀರಾಮನು ರಣರಂಗದಲ್ಲಿ ಕಾಣಿಸಿಕೊಂಡನು.

೬೦. ಆ ರಾಮನನ್ನು ಯುದ್ಧಭೂಮಿಯಲ್ಲಿ ಶತ್ರುಘ್ನನು ನೋಡಿ ಆಶ್ಚರ್ಯ ಭರಿತನಾದನು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನಸಂವಾದದ
ರಾಮಾಶ್ವಮೇಧದಲ್ಲಿ ಶ್ರೀರಾಮಸಮಾಗಮವೆಂಬ ನಲವತ್ತೈದನೆಯ
ಅಧ್ಯಾಯವು ಮುಗಿದುದು.



ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ

## ಷಟ್ಚತ್ವಾರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಆಗತಂ ವೀಕ್ಷ್ಯ ಶ್ರೀರಾಮಂ ಶತ್ರುಘ್ನಃ ಪ್ರಣತಾರ್ತಿಹಂ ।
ಭ್ರಾತರಂ ಸಕಲಾದ್ದುಃಖಾನ್ಮುಕ್ತೋಽಭೂದ್ದ್ವಿಜಸತ್ತಮ ॥ ೧ ॥

ಹನೂಮಾನ್ವೀಕ್ಷ್ಯ ವಿಭ್ರಾನ್ತೋ ರಾಮಸ್ಯ ಚರಣೌ ಮುದಾ ।
ವವಂದೇ ಭಕ್ತರಕ್ಷಾರ್ಥಮಾಗತಂ ನಿಜಗಾದ ಹ ॥ ೨ ॥

ಸ್ವಾಮಿಂಸ್ತ್ವಯ್ಯೈತದ್ಯುಕ್ತಂ ತು ಸ್ವಭಕ್ತಪರಿಪಾಲನಂ ।
ಯತ್ಸಂಗ್ರಾಮಜಿತಂ ಶರ್ವಪಾಶಬಂಧಮಮೋಚಯಃ ॥ ೩ ॥

---

### ನಲವತ್ತಾರನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಶತ್ರುಘ್ನನು, ಭಕ್ತರಕ್ಷಕನಾದ ಶ್ರೀರಾಮನು ಬಂದುದನ್ನು ನೋಡಿ ಸಕಲ ದುಃಖದಿಂದಲೂ ಮುಕ್ತನಾದನು.

೨. ಹನುಮಂತನು ರಾಮನು ಬಂದುದನ್ನು ನೋಡಿ ವಿಭ್ರಾನ್ತನಾಗಿ ಅವನ ಚರಣಗಳಗೆರಗಿದನು ಮತ್ತು ಇಂತೆಂದನು.

೩. ಸ್ವಾಮಿ, ಶಿವನ ಸಂಗ್ರಾಮದಲ್ಲಿ ಪಾಶಬಂಧವನ್ನು ಬಿಡಿಸಿದುದರಿಂದ ಭಕ್ತ ಪರಿಪಾಲನವು ನಿನಗೆ ಯುಕ್ತವಾದುದು.

ವಯಂ ಧನ್ಯಾ ಇದಾನೀಂ ನೈ ಯದ್ರಕ್ಷ್ಯಾನೋ ಭವತ್ಪದೇ ।
ಜೇಷ್ಯಾಮೋಽರೀನ್ ಕ್ಷಣಾದೇವ ತ್ವತ್ಕೃಪಾತೋ ರಘೂದ್ವಹ ॥ ೨ ॥

॥ ಶೇಷ ಉವಾಚ ॥

ಸ್ಥಾಣುಸ್ತದಾಗತಂ ರಾಮಂ ಯೋಗಿನಾಂ ಧ್ಯಾನಗೋಚರಂ ।
ಪತಿತ್ವಾ ಪಾದಯೋರ್ವಿಪ್ರ ಜಗಾದ ಪ್ರಣತಾಭಯಂ ॥ ೩ ॥

ಏಕಸ್ತ್ವಂ ಪುರುಷಸ್ಸಾಕ್ಷಾತ್ಪ್ರಕೃತೇಃ ಪರ ಈರ್ಯಸೇ ।
ಯಸ್ಸ್ವಾಂಶಕಲಯಾ ವಿಶ್ವಂ ಸೃಜತ್ಯವತಿ ಹಂತಿ ಚ ॥ ೪ ॥

ಅರೂಪಸ್ತ್ವಮಶೇಷಸ್ಯ ಜಗತಃ ಕಾರಣಂ ಪರಂ ।
ಏಕ ಏವ ತ್ರಿಧಾ ರೂಪಂ ಗೃಹ್ಣಾಸಿ ಕುಹಕಾನ್ವಿತಃ ॥ ೫ ॥

ಸೃಷ್ಟೌ ವಿಧಾತೃರೂಪಸ್ತ್ವಂ ಪಾಲನೇ ಸ್ವಪ್ರಭಾಮಯಃ ।
ಪ್ರಳಯೇ ಜಗತಸ್ಸಾಕ್ಷಾದಹಂ ಶರ್ವಾಖ್ಯತಾಂ ಗತಃ ॥ ೬ ॥

---

೨. ಸ್ವಾಮಿಯೇ, ಈಗ ನಿನ್ನ ಕೃಪೆಯಿಂದ ನಾವು ಶತ್ರುಗಳನ್ನು ಜಯಿಸು. ತ್ತೇವೆ. ನಿನ್ನ ಪಾದಕಮಲವನ್ನು ನೋಡಿದುದರಿಂದ ನಾವೇ ಧನ್ಯರು.

೩. ಶೇಷನು ಹೇಳಿದನು :—ರಾಮನು ಅಲ್ಲಿಗೆ ಬಂದುದನ್ನು ನೋಡಿ ಶಿವನು ಯೋಗಿಗಳಿಗೂ ಅಗೋಚರನಾದ ರಾಮನು ಬಂದನಲ್ಲಾ ಎಂದು ಅವನ ಪಾದಗಳಿಗೆ ಬಿದ್ದು ಅಭಯವನ್ನು ಕೇಳಿದನು.

೪. ನೀನೊಬ್ಬನೇ ಸಾಕ್ಷಾತ್ಪುರುಷನು. ಪ್ರಕೃತಿಗಿಂತ ಪರನಾದವನು. ನೀನು ನಿನ್ನ ಒಂದು ಕಲೆಯಿಂದಲೇ ಪ್ರಪಂಚವನ್ನು ಹುಟ್ಟಿಸುತ್ತಿ. ಕಾಪಾಡುತ್ತಿ ಕೊಲ್ಲುತ್ತಿ.

೫. ನೀನು ರೂಪರಹಿತನು. ಸಮಸ್ತ ಜಗತ್ತಿಗೂ ಕಾರಣನು. ಒಬ್ಬನೇ ಆದರೂ ಸತ್ವರಜೋಸ್ತಮೋರೂಪವಾದ ರೂಪಗಳನ್ನು ಹೊಂದುತ್ತೀಯೆ.

೬. ಸೃಷ್ಟಿಯಲ್ಲಿ ಬ್ರಹ್ಮರೂಪವನ್ನೂ, ಪಾಲನದಲ್ಲಿ ವಿಷ್ಣುರೂಪವನ್ನೂ. ಪ್ರಳಯದಲ್ಲಿ ನನ್ನ ರೂಪವಾದ ಈಶ್ವರನ ರೂಪವನ್ನೂ ನೀನು ಹೊಂದುತ್ತೀಯೆ.

ತವ ಯತ್ಪರಮೇಶಸ್ಯ ಹಯಮೇಧಕ್ರತುಕ್ರಿಯಾ ।
ಬ್ರಹ್ಮಹತ್ಯಾಪನೋದಾಯ ತದ್ವಿಡಂಬನಮದ್ಭುತಂ ॥ ೯ ॥

ಯತ್ಪಾದಶೌಚಮತುಲಂ ಗಂಗಾಖ್ಯಂ ಶಿರಸೋಽನ್ತರಾ ।
ವಹಾಮಿ ಪಾಪಶಾನ್ತ್ಯರ್ಥಂ ತಸ್ಯ ತೇ ಪಾತಕಂ ಕುತಃ ॥ ೧೦ ॥

ಮಯಾ ವತ್ಸೋಪಕಾರಾಯ ಕೃತಂ ಕರ್ಮ ತವ ಸ್ಫುಟಂ ।
ಕ್ಷಮ್ಯತಾಂ ಕೃಪಾಲೋ ಹಿ ಭವತೋ ವ್ಯವಧಾಯಕಂ ॥ ೧೧ ॥

ಕಿಂ ಕರೋಮಿ ಮಯಾ ಸತ್ಯಪಾಲನಾರ್ಥಮಿದಂ ಕೃತಂ ।
ಜಾನನ್ಪ್ರಭಾವಂ ಭವತೋ ಭಕ್ತರಕ್ಷಾರ್ಥಮಾಗತಃ ॥ ೧೨ ॥

ಅಸೌ ಪುರಾ ಉಜ್ಜಯಿನ್ಯಾಂ ಮಹಾಕಾಲನಿಕೇತನೇ ।
ಸ್ನಾತ್ವಾ ಕ್ಷಿಪ್ರಾಖ್ಯಸರಿತಿ ತಪಸ್ತೇಪೇ ಮಹಾದ್ಭುತಂ ॥ ೧೩ ॥

ತಪಃ ಪ್ರಸನ್ನೋಽಹಮಹೋ ಜಗಾದ ಭೂಮಿಪಂ ಪ್ರತಿ ।
ಯಾಚಯಸ್ವ ಮಹಾರಾಜ ಸ ವವ್ರೇ ರಾಜ್ಯಮದ್ಭುತಂ ॥ ೧೪ ॥

---

೯. ಪರಮೇಶ್ವರನ ಅಶ್ವಮೇಧಯಾಗದ ಕೆಲಸವೂ, ಬ್ರಹ್ಮಹತ್ಯಾನಾಶವೆಂಬುದೂ ಬೂಟಾಟಿಕೆಯೇ ಸರಿ.

೧೦. ನೀನು ತೊಳೆದುಕೊಂಡ ಪಾದದ ನೀರೇ ಗಂಗೆಯು. ಆ ಗಂಗೆಯನ್ನು ನಾನು ಪಾಪಶಾಂತಿಗೋಸ್ಕರ ತಲೆಯಲ್ಲಿ ಧರಿಸಿದ್ದೇನೆ. ಹೀಗಿರುವಾಗ ನಿನಗೆ ಪಾಪವೆಲ್ಲಿಯದು ?

೧೧. ನಾನು ಹುಡುಗರಿಗೆ ಒಳ್ಳೆಯದಕ್ಕೆ ಇದನ್ನು ಮಾಡಿದನೆಂಬುದು ನಿನಗೆ ಸ್ಫುಟವಾಗಿ ಗೊತ್ತಾಗಿದೆ. ನೀನು ಕೃಪಾಳು. ಅದನ್ನು ಕ್ಷಮಿಸು.

೧೨. ನಾನೇನು ಮಾಡಲಿ ? ಭಕ್ತಪಾಲನೆಗೆ ಈ ಕೆಲಸಮಾಡಿದೆನು. ನಿನ್ನ ಪ್ರಭಾವವು ಗೊತ್ತಿದ್ದರೂ ಭಕ್ತರಕ್ಷಣೆಗೋಸ್ಕರ ಬಂದೆನು.

೧೩. ಇವನು ಪೂರ್ವದಲ್ಲಿ ಉಜ್ಜಯಿನಿಯಲ್ಲಿ ಕ್ಷಿಪ್ರಾನದಿಯಲ್ಲಿ ಸ್ನಾನಮಾಡಿ ಘೋರವಾದ ತಪಸ್ಸನ್ನು ಮಾಡಿದನು.

೧೪. ಅನಂತರ ನಾನು ಈತನಿಗೆ ಪ್ರಸನ್ನನಾದೆನು. ರಾಜನನ್ನು ವರವನ್ನು ಕೇಳೆನ್ನಲು ಅವನು ಅದ್ಭುತವಾದ ರಾಜ್ಯವನ್ನು ಕೇಳಿದನು.

ಮಯಾ ಪ್ರೋಕ್ತಂ ದೇವಪುರೇ ತವ ರಾಜ್ಯಂ ಭವಿಷ್ಯತಿ ।
ಯಾವದ್ರಾಮಹಯಃ ಪುರ್ಯಾಮಾಗಮಿಷ್ಯತಿ ಯಾಜ್ಞಿಕಃ ॥ ೧೫ ॥

ತಾವತ್ಪ್ರಭೃತ್ಯಹಂ ಸ್ಥಾನೇ ತವ ರಕ್ಷಾರ್ಥಮುದ್ಯತಃ ।
ಏತದ್ದತ್ತವರೋ ರಾಮ ಕಿಂ ಕರೋಮಿ ಚ ಸತ್ಯತಃ ॥ ೧೬ ॥

ಘೃಣಿತೋಽಸ್ತ್ಯಧುನಾ ರಾಜಾ ಸಪುತ್ರಪಶುಬಾಂಧವಃ ।
ಹಯಂ ಸಮರ್ಪ್ಯ ಭವತೇ ಪಾದಸೇವಾಂ ವಿಧಾಸ್ಯತಿ ॥ ೧೭ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಮಹೇಶಸ್ಯ ರಘೂತ್ತಮಃ ।
ಉವಾಚ ಧೀರಯಾ ವಾಣ್ಯಾ ಕೃಪಯಾ ಪೂರ್ಣಲೋಚನಃ ॥ ೧೮ ॥

॥ ಶ್ರೀರಾಮ ಉವಾಚ ॥

ದೇವಾನಾಮಯಮೇವಾಸ್ತಿ ಧರ್ಮೋ ಭಕ್ತಸ್ಯ ಪಾಲನಂ ।
ತ್ವಯಾ ಸಾಧು ಕೃತಂ ಕರ್ಮ ಯದ್ಭಕ್ತೋ ರಕ್ಷಿತೋಽಧುನಾ ॥ ೧೯ ॥

ಮಮಾಸ್ತಿ ಹೃದಯೇ ಶರ್ವೋ ಭವತೋ ಹೃದಯೇ ತ್ವಹಂ ।
ಆವಯೋರಂತರಂ ನಾಸ್ತಿ ಮೂಢಾಃ ಪಶ್ಯಂತಿ ದುರ್ಧಿಯಃ ॥ ೨೦ ॥

---

೧೫-೧೬. ನೀನು ದೇವಪುರದಲ್ಲಿ ರಾಜ್ಯಭಾರಮಾಡು. ರಾಮನ ಯಜ್ಞದ ಕುದುರೆಯು ಅಲ್ಲಿಗೆ ಬರುವವರೆಗೂ ನಾನು ಅಲ್ಲೇ ಇದ್ದು ನಿನ್ನನ್ನು ಕಾಪಾಡುತ್ತೇನೆ, ಎಂದು ವರಕೊಟ್ಟೆನು. ಏನುಮಾಡಲಿ ರಾಮ! ಸತ್ಯದಿಂದ ತಪ್ಪಲಾರೆ.

೧೭. ಈ ವೀರಮಣಿಯು ನಾಚಿಕೊಂಡಿದ್ದಾನೆ. ಅವನು ನಿನಗೆ ಕುದುರೆಯನ್ನು ಅರ್ಪಿಸಿ ಪರಿವಾರದೊಂದಿಗೆ ಪಾದಸೇವೆಮಾಡುತ್ತಾನೆ.

೧೮. ಶೇಷನು ಹೇಳಿದನು:—ರಾಮನು ಶಿವನ ಮಾತನ್ನು ಕೇಳಿ ಕೃಪೆಯಿಂದಿಂತೆಂದನು.

೧೯. ಶ್ರೀರಾಮನು ಹೇಳಿದನು:—ದೇವತೆಗಳಿಗೂ ಕೂಡ ಭಕ್ತಪಾಲನವೇ ಧರ್ಮವು. ನೀನು ಭಕ್ತಪರಿಪಾಲನೆ ಮಾಡಿದುದರಿಂದ ಒಳ್ಳೆಯದನ್ನು ಮಾಡಿದೆ.

೨೦. ನನ್ನ ಹೃದಯದಲ್ಲಿ ಶಿವನಿದ್ದಾನೆ. ಶಿವನಾದ ನಿನ್ನ ಹೃದಯದಲ್ಲಿ ನಾನಿದ್ದೇನೆ. ನಮ್ಮಿಬ್ಬರಿಗೂ ಭೇದವಿಲ್ಲ. ಮೂಢರು ಇದೆಯೆಂದು ತಿಳಿಯುತ್ತಾರೆ.

ಯೇ ಭೇದಂ ವಿದಧತ್ಯದ್ಧಾ ಆವಯೋರೇಕರೂಪಯೋಃ ।
ಕುಂಭೀಪಾಕೇಷು ಪಚ್ಯಂತೇ ನರಾಃ ಕಲ್ಪಸಹಸ್ರಕಂ ॥ ೨೦ ॥

ಯೇ ತ್ವದ್ಭಕ್ತಾಃ ಸದಾಸಂಸ್ತೇ ಮದ್ಭಕ್ತಾ ಧರ್ಮಸಂಯುತಾಃ ।
ಮದ್ಭಕ್ತಾ ಅಪಿ ಭೂಯಸ್ಯಾ ಭಕ್ತ್ಯಾ ತವ ನತಿಂಕರಾಃ ॥ ೨೨ ॥

॥ ಶೇಷ ಉವಾಚ ॥

ಇತ್ಥಂ ಭಾಷಿತಮಾಕರ್ಣ್ಯ ಶರ್ವೋ ವೀರಮಣಿಂ ನೃಪಂ ।
ಮೂರ್ಛಿತಂ ಜೀವಯಾಮಾಸ ಕರಸ್ಪರ್ಶಾದಿನಾ ಪ್ರಭುಃ ॥ ೨೩ ॥

ಅನ್ಯಾನಪಿ ಸುತಾನಸ್ಯ ಮೂರ್ಛಿತಾನ್ ಶರಪೀಡಿತಾನ್ ।
ಜೀವಯಾಮಾಸ ಸ ಮೃಡಃ ಸಮರ್ಥಃ ಪ್ರಭುರೀಶ್ವರಃ ॥ ೨೪ ॥

ಸಜ್ಞಂ ವಿಧಾಯ ತಂ ಭೂಪಂ ಶ್ರೀರಾಮಪದಯೋರ್ನತಂ ।
ಕಾರಯಾಮಾಸ ಭೂತೇಶಃ ಪುತ್ರಪೌತ್ರಪರಿವೃತಂ ॥ ೨೫ ॥

---

೨೧. ಏಕರೂಪರಾದ ನಮ್ಮಿಬ್ಬರಿಗೂ ಭೇದಮಾಡುವವರು ಕುಂಭೀಪಾಕ ನರಕದಲ್ಲಿ ಬೀಳುತ್ತಾರೆ.

೨೨. ಯಾರು ನಿನ್ನ ಭಕ್ತರೋ ಅವರು ನನಗೂ ಭಕ್ತರು. ನಿಶ್ಚಯ. ನನ್ನ ಭಕ್ತರೂ ಕೂಡ ನಿನಗೆ ನಮಸ್ಕಾರಮಾಡತಕ್ಕವರೇ.

೨೩. ಶೇಷನು ಹೇಳಿದನು :—ಹೀಗೆ ರಾಮನು ಹೇಳಲು ಶಿವನು ವೀರಮಣಿ ಯನ್ನು ಕೈಯಿಂದ ಸವರಲು ಅವನು ಜೀವಿಸಿಕೊಂಡಿದ್ದನು.

೨೪. ವಿರಮಣಿಯ ಮಕ್ಕಳನ್ನೆಲ್ಲಾ ಇದೇರೀತಿಯಾಗಿ ಈಶ್ವರನು ಬದುಕಿ ಸಿದನು.

೨೫. ಆ ವೀರಮಣಿಯನ್ನು ಶಿವನು ಪರಿವಾರದೊಡನೆ ಶ್ರೀರಾಮನ ಪಾದಕ್ಕೆ ನಮಸ್ಕಾರಮಾಡುವಂತೆ ಮಾಡಿದನು.

ಧನ್ಯೋ ರಾಜಾ ವೀರಮಣಿರ್ಯೋ ದದರ್ಶ ರಘೂತ್ತಮಂ ।
ಯೋಗಿಭಿರ್ಯೋಗನಿಷ್ಠಾಭಿರ್ದುಷ್ಪ್ರಾಪ್ಯಮಯುತಾಯುತೈಃ ॥ ೨೬ ॥

ತೇ ನತ್ವಾ ರಘುನಾಥಂ ತಂ ಕೃತಾರ್ಥೀಕೃತವಿಗ್ರಹಾಃ ।
ಬ್ರಹ್ಮಾದಿಭಿಃ ಪೂಜ್ಯತಮಾ ಅಭೂವನ್ದ್ವಿಜಸತ್ತಮ ॥ ೨೭ ॥

ಶತ್ರುಘ್ನಹನುಮದ್ಭ್ಯಾಂ ಚ ಪುಷ್ಕಲಾದಿಭಿರುದ್ಭಟೈಃ ।
ಪರಿಷ್ಟುತಾಯ ರಾಮಾಯ ದದೌ ರಾಜಾ ಹಯೋತ್ತಮಂ ॥ ೨೮ ॥

ರಾಜ್ಯೇನ ಸಹಿತಂ ಸರ್ವಂ ಸಪುತ್ರಪಶುಬಾಂಧವಂ ।
ಶರ್ವೇಣ ಪ್ರೇರಿತಃ ಪ್ರಾದಾದ್ಭೂಪೋ ವೀರಮಣಿಸ್ತದಾ ॥ ೨೯ ॥

ತತೋ ರಾಮೋ ನುತಃ ಸರ್ವೈರ್ವೈರಿಭಿರ್ನಿಜಸೇವಕೈಃ ।
ಶತ್ರುಘ್ನಾದಿಭಿರತ್ಯಂತಮುತ್ಸುಕೈಶ್ಚ ವಿಶೇಷತಃ ॥ ೩೦ ॥

ರಥೇ ಮಣಿಮಯೇ ತಿಷ್ಠನ್ಬಭೂವ ಸ ತಿರೋಹಿತಃ ।
ಅಂತರ್ಹಿತೇ ರಾಮಚಂದ್ರೇ ಸರ್ವೇ ಪ್ರಾಪುಃ ಸುವಿಸ್ಮಯಂ ॥ ೩೧ ॥

---

೨೬. ಯೋಗಿಗಳಿಂದಲೂ ಕೂಡ ಹೊಂದಲಸಾಧ್ಯವಾದ ಶ್ರೀರಾಮನನ್ನು ನೋಡಿದುದರಿಂದ ವೀರಮಣಿಯು ಧನ್ಯನು.

೨೭. ಅವರೆಲ್ಲರೂ ರಾಮನನ್ನು ನಮಸ್ಕರಿಸಿ, ಪವಿತ್ರವಾದ ಶರೀರವುಳ್ಳವರಾಗಿ ಬ್ರಹ್ಮಾದಿಗಳಿಗೂ ಪೂಜ್ಯರಾದರು.

೨೮. ಶತ್ರುಘ್ನ, ಹನುಮಂತ, ಪುಷ್ಕಳ ಮುಂತಾದ ಭಟರೊಡನೆ ಸಂತೋಷದಿಂದಿರುವ ರಾಮನಿಗೆ ವೀರಮಣಿಯು ಕುದುರೆಯನ್ನರ್ಪಿಸಿದನು.

೨೯. ರಾಜ್ಯ, ಪಶು, ಪುತ್ರ, ಬಾಂಧವರನ್ನೂ ಆ ವೀರಮಣಿಯು ಶಿವನ ಮಾತಿನಮೇರೆ ಒಪ್ಪಿಸಿದನು.

೩೦-೩೧. ರಾಮನು ವೈರಿಗಳಿಂದಲೂ ತನ್ನವರಿಂದಲೂ ಹೊಗಳಲ್ಪಟ್ಟು ಉತ್ತಮವಾದ ರಥದಲ್ಲಿ ಕುಳಿತು ಮಾಯವಾದನು. ಆಗ ಎಲ್ಲರೂ ಆಶ್ಚರ್ಯಪಟ್ಟರು.

ಮಾ ಜಾನೀಹಿ ಮನುಷ್ಯಂ ತ್ವಂ ರಾಮಂ ಲೋಕೈಕವಂದಿತಂ ।
ಜಲೇ ಸ್ಥಲೇ ಚ ಸರ್ವತ್ರ ವರ್ತತೇಽಂತಸ್ಥಿತಸ್ಸದಾ ॥ ೩೨ ॥

ತತೋ ವೀರಾ ಅಲಂ ಹೃಷ್ಟಾ ಅನ್ಯೋನ್ಯಂ ಪರಿರೇಭಿರೇ ।
ತೂರ್ಯಮಂಗಲವಾದಿತ್ರೈರ್ಬಹುರುತ್ಸವಕೋಽಭವತ್ ॥ ೩೩ ॥

ತತೋ ಮುಕ್ತೋ ಹಯಸ್ಸರ್ವೈ ವೀರೈಶ್ಶಸ್ತ್ರಾಸ್ತ್ರಕೋವಿದೈಃ ।
ಸರ್ವೈರನುಗತಃ ಪ್ರೀತೈರ್ವಿಸ್ಮಯೇನ ಸಮನ್ವಿತೈಃ ॥ ೩೪ ॥

ಶರ್ವಸ್ಸತ್ಯಪ್ರತಿಜ್ಞಶ್ಚ ತಮನುಜ್ಞಾಪ್ಯ ಸೇವಕಂ ।
ಪ್ರೋಚ್ಯ ಶ್ರೀರಾಮಶರಣಂ ಯಾಹಿ ಲೋಕೈಕದುರ್ಲಭಂ ॥ ೩೫ ॥

ಸ್ವಯಮಂತರ್ಹಿತಸ್ತತ್ರ ಪ್ರಲಯೋತ್ಪತ್ತಿಕಾರಕಃ ।
ಕೈಲಾಸಮಗತ್ಸರ್ವೈಃ ಸೇವಕೈಃ ಪರಿಶೋಭಿತಃ ॥ ೩೬ ॥

ಭೂಪೋ ವೀರಮಣಿರ್ಧ್ಯಾಯನ್ ಶ್ರೀರಾಮಚರಣೌ ಭೃಶಂ ।
ಜಗಾಮ ಸಾಕಂ ಶತ್ರುಘ್ನಬಲಿನಾ ಬಲಸಂಯುತಃ ॥ ೩೭ ॥

---

೩೨. ಲೋಕಗಳಿಂದ ವಂದಿತನಾದ ರಾಮನನ್ನು ಮನುಷ್ಯನೆಂದು ತಿಳಿಯಬೇಡ. ಅವನು ನೀರು, ನೆಲ, ಒಳಗೆ ಹೊರಗೆ ಎಲ್ಲೆಲ್ಲೂ ಇದ್ದಾನೆ.

೩೩. ಅನಂತರ ವೀರರು ಸಂತೋಷಗೊಂಡು ಅನ್ಯೋನ್ಯವಾಗಿ ಆಲಂಗಿಸಿಕೊಂಡರು. ಮಂಗಳವಾದ್ಯದೊಡನೆ ಬಹು ಉತ್ಸವವಾಯಿತು.

೩೪. ಅನಂತರ ಕುದುರೆಯನ್ನು ಬಿಟ್ಟು ಎಲ್ಲಾ ವೀರರೂ ಹಿಂದೆ ಹೊರಟರು.

೩೫. ಶಿವನು ಸತ್ಯಪ್ರತಿಜ್ಞನಾಗಿ ತನ್ನ ಸೇವಕನಿಗೆ ರಾಮನನ್ನು ಶರಣು ಹೊಂದೆಂದು ಹೇಳಿದನು.

೩೬. ಶಿವನೂ ಅಂತರ್ಧಾನನಾಗಿ ತನ್ನ ಗಣಗಳೊಡನೆ ಕೈಲಾಸಕ್ಕೆ ಹೋದನು.

೩೭. ರಾಜನಾದ ವೀರಮಣಿಯೂ ಕೂಡ ಶ್ರೀರಾಮನ ಪಾದಪದ್ಮಗಳನ್ನು ನೆನೆಸುತ್ತ ಶತ್ರುಘ್ನನ ಜೊತೆಯಲ್ಲಿ ಸೈನ್ಯದೊಡನೆ ಹೊರಟನು.

ಏತದ್ರಾಮಸ್ಯ ಚರಿತಂ ಯೇ ಶೃಣ್ವಂತಿ ನರೋತ್ತಮಾಃ ।
ತೇಷಾಂ ಸಂಸಾರಜಂ ದುಃಖಂ ನ ಭವಿಷ್ಯತಿ ಕರ್ಹಿಚಿತ್ ॥ ೩೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಹಯಪ್ರಸ್ಥಾನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

---

೩೮. ಈ ರಾಮಚರಿತ್ರೆಯನ್ನು ಕೇಳಿದವರು ಸಂಸಾರದುಃಖವನ್ನು ಹೊಂದು ವುದೇ ಇಲ್ಲ.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಹಯಪ್ರಸ್ಥಾನವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತಚತ್ವಾರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಹಯೋ ಗತೋ ಹೇಮಕೂಟಂ ಭಾರತಾಂತೇ ದ್ವಿಜೋತ್ತಮ ।
ಅನೇಕಭಟಸಾಹಸ್ರೈ ರಕ್ಷಿತೋ ಬದ್ಧಚಾಮರಃ ॥ ೧ ॥

ಯೋ ವೈ ವಿಸ್ತಾರತೋ ದೈರ್ಘ್ಯಾದ್ಯೋಜನಾನಾಂ ಸಮಂತತಃ ।
ಅಯುತೇನ ಸುಶೃಂಗೈಶ್ಚ ರಾಜತೈಃ ಕಾಂಚನಾದಿಭಿಃ ॥ ೨ ॥

ತತ್ರೋದ್ಯಾನಂ ಮಹಚ್ಛ್ರೇಷ್ಠಂ ಪಾದಪೈಃ ಪರಿಶೋಭಿತಂ ।
ಶಾಲೈಸ್ತಾಲೈಸ್ತಮಾಲೈಶ್ಚ ಕರ್ಣಿಕಾರೈಸ್ಸಮಂತತಃ ॥ ೩ ॥

ಹಿಂತಾಲೈರ್ನಾಗಪುನ್ನಾಗೈಃ ಕೋವಿದಾರೈಸ್ಸಬಿಲ್ವಕೈಃ ।
ಚಂಪಕೈರ್ಬಕುಲೈರ್ಮೋಕ್ಷೈರ್ಮದನೈಃ ಕುಟಜಾದಿಭಿಃ ॥ ೪ ॥

---

## ನಲವತ್ತೇಳನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಅನಂತರ ಯಾಗದ ಕುದುರೆಯು ಅನೇಕ ಭಟರಿಂದ ರಕ್ಷಿಸಲ್ಪಡುತ್ತಾ ಹೇಮಕೂಟಕ್ಕೆ ಹೋಯಿತು.

೨. ಆ ಹೇಮಕೂಟದ ಉದ್ದವು ಹತ್ತುಸಾವಿರ ಯೋಜನಗಳೂ, ಅಗಲವು ಹತ್ತುಸಾವಿರ ಯೋಜನವೂ ಇದ್ದು ಶಂಖ, ಬೆಳ್ಳಿ, ಚಿನ್ನಗಳಿಂದ ಬೆಳಗುತ್ತಿರುವುದು.

೩. ಅಲ್ಲಿ ಒಂದು ಶ್ರೇಷ್ಠವಾದ ಉದ್ಯಾನವಿರುವುದು. ಅಲ್ಲಿ ಸಾಲ, ಹೊಂಗೆ, ಕರ್ಣಿಕಾರವೇ ಮುಂತಾದ ಅನೇಕ ಮರಗಳಿರುತ್ತವೆ.

೪-೫. ಹಿಂತಾಳ, ನಾಗ, ಪುನ್ನಾಗ, ಕಂಚುವಾರ, ಬ್ವಿಲ್ವ, ಸಂಪಿಗೆ, ಪಗಡೆ,

ಜಾತಿಕಾಭಿರ್ಯೂಥಿಕಾಭಿರ್ನವಮಾಲಿಕಯಾ ತಥಾ ।
ಆಮ್ರೈರ್ಮಾಧವದಕ್ಷ್ಮೈಶ್ಚ ದಾಡಿಮ್ಯೈಶ್ಯೋಽಭಿತಂ ಪರಂ ॥ ೫ ॥

ಅನೇಕಪಕ್ಷಿಸಂಘುಷ್ಟಂ ಭ್ರಮರೈರ್ನಿನದೀಕೃತಂ ।
ಮಯೂರಕೇಕಾರವತಂ ಸರ್ವರ್ತುಸುಖದಂ ಹಯಃ ॥ ೬ ॥

ಪ್ರವಿವೇಶ ಸಶತ್ರುಘ್ನೋ ಮನೋವೇಗಸಮನ್ವಿತಃ ।
ಸ್ವರ್ಣಪತ್ರಂ ವಿಶಾಲೇ ಸ್ವೇ ಫಾಲೇ ಬಿಭ್ರನ್ಮನೋರಮಂ ॥ ೭ ॥

ಗಚ್ಛಸ್ತಸ್ಯ ವಾಹಸ್ಯ ಹಯಮೇಧಕ್ರತೋಸ್ತದಾ ॥
ಅಕಸ್ಮಾದಭವಚ್ಚಿತ್ರಂ ತಚ್ಛೃಣುಷ್ವ ದ್ವಿಜೋತ್ತಮ ॥ ೮ ॥

ಗಾತ್ರಸ್ತಂಭೋಽಭವತ್ತಸ್ಯ ನ ಚಚಾಲ ಪಥಿ ಸ್ಥಿತಃ ।
ಹೇಮಕೂಟ ಇವಾಚಾಲ್ಯೋ ಬಭೂವ ಹಯಸತ್ತಮಃ ॥ ೯ ॥

ತದಾ ತದ್ರಕ್ಷಕಾಸ್ಸರ್ವೇ ಕಶಾಘಾತಾನ್ವಿತೇನಿರೇ ।
ತದಾ ಹಯೋಽಪಿ ನ ಯಯೌ ಸ್ತಬ್ಧಗಾತ್ರೋ ಹಯೋತ್ತಮಃ ॥ ೧೦ ॥

---

ಮದನದಮರ, ಗಿರಿಮಲ್ಲಿಗೆ, ಯೂಥಿಕಾ (ದಾಸವಾಳ,) ನವಮಾಲಿಕೆ, ಮಾವು, ದಾಳಿಂಬೆ ಮುಂತಾದುವುಗಳಿಂದ ಶೋಭಿತವಾಗಿವೆ.

೬-೭. ಅನೇಕ ಪಕ್ಷಿಗಳಿಂದಲೂ, ಭ್ರಮರಗಳಿಂದಲೂ, ಸದ್ದುಮಾಡಲ್ಪಟ್ಟು ತಾ ನವೀನಧ್ವನಿಯಿಂದ ಕೂಡಿದ ಈ ಉದ್ಯಾನಕ್ಕೆ ವೇಗವುಳ್ಳ ಆ ಕುದುರೆಯು ಸ್ವರ್ಣ ಪತ್ರವನ್ನು ಹಣೆಯಲ್ಲಿ ಹೊಂದಿ ಪ್ರವೇಶಿಸಿತು.

೮. ಯಜ್ಞದ ಕುದುರೆಯು ಅಲ್ಲಿ ಹೋಗುತ್ತಿರಲು ಒಂದು ಅದ್ಭುತವಾಯಿತು. ಅದನ್ನು ಕೇಳು.

೯. ಅದರ ದೇಹವು ಚಲಿಸದಂತಾಯಿತು. ದಾರಿಯಲ್ಲಿದ್ದರೂ ಅಲ್ಲಾಡಲೇ ಇಲ್ಲ. ಹೇಮಕೂಟದಂತೆಯೇ ಆಲ್ಲಾಡಿಸಲು ಅಸಾಧ್ಯವಾಯಿತು.

೧೦. ಅದರ ರಕ್ಷಕರು ಒಡನೆಯೇ ಚಾವಟಿಯಿಂದ ಹೊಡೆದರೂ ಕೂಡ ಹೋಗಲೇ ಇಲ್ಲ. ಅಲ್ಲಾಡದೆ ನಿಂತಿದ್ದಿತು.

ಶತ್ರುಘ್ನ ಸವಿಧೇ ಗತ್ವಾ ಚುಕ್ರುಶುರ್ವಾಜಿರಕ್ಷಕಾಃ ।
ಸ್ವಾಮಿನ್ನಯಂ ನ ಜಾನೀಮಃ ಕಿಮಭೂದ್ಧಯಸತ್ತಮೇ ॥ ೧೧ ॥

ಗಚ್ಛತೋ ವಾಹವರ್ಯಸ್ಯ ಮನೋವೇಗಸ್ಯ ಭೂಪತೇ ।
ಆಕಸ್ಮಿಕೋಽಭವತ್ತಸ್ಯ ಗಾತ್ರಸ್ತಂಭೋ ಮಹಾಮತೇ ॥ ೧೨ ॥

ಕಶಾಭಿಸ್ತಾಡಿತೋಽಸ್ಮಾಭಿಃ ಪರಂ ತತ್ರ ಚಚಾಲ ನ ।
ಏವಂ ವಿಚಾರ್ಯ ಯತ್ಕಾರ್ಯಂ ತತ್ಕುರುಷ್ವ ನೃಪೋತ್ತಮ ॥ ೧೩ ॥

ತದಾ ವಿಸ್ಮಯಮಾಪನ್ನೋ ಭೂಪತಿಸ್ಸಹ ಸೈನಿಕೈಃ ।
ಜಗಾಮ ಸಹಿತಸ್ಸರ್ವೈರ್ಹಯಸ್ಯ ಮಹತೋಂತಿಕೇ ॥ ೧೪ ॥

ಪುಷ್ಕಲೋ ಬಾಹುನಾ ಧೃತ್ವಾ ಚರಣೌ ತಸ್ಯ ಭೂತಳಾತ್ ।
ಉತ್ಪಾಟಯಾಮಾಸ ತದಾ ಪರಂ ನೋ ಚೇಲತುಸ್ತತಃ ॥ ೧೫ ॥

ಬಲೇನ ಬಲಿನಾಕ್ರಾನ್ತೋ ನಾಕಂಪತ ಹಯಸ್ತದಾ ।
ಹನೂಮಾಂಸ್ತಂ ಸಮುದ್ಧರ್ತುಂ ಮತಿಂ ಚಕ್ರೇ ಮಹಾಮನಾಃ ॥ ೧೬ ॥

---

೧೧-೧೨. ಅವರೆಲ್ಲರೂ ಶತ್ರುಘ್ನನ ಬಳಿಗೆ ಹೋಗಿ ಸ್ವಾಮಿ, ಏನಾಯಿತೋ ನಮಗೆ ಗೊತ್ತಿಲ್ಲ. ಕುದುರೆಯು ಹೋಗುತ್ತಿದ್ದ ಹಾಗೆ ಅಕಸ್ಮಾತ್ತಾಗಿ ಚಲಿಸದೆ ನಿಂತು ಹೋಗಿದೆ.

೧೩. ನಾವು ಚಾವಟಿಯಿಂದ ಕೂಡಾ ಹೊಡೆದವು. ಆದರೂ ಚಲಿಸಲಿಲ್ಲ. ಇದನ್ನು ಹೇಳಿದ್ದೇವೆ. ಚಿತ್ತಕ್ಕೆ ಬಂದಂತೆ ಮಾಡಬಹುದು.

೧೪. ಆಗ ರಾಜನು ಆಶ್ಚರ್ಯಪಟ್ಟು ಸೈನಿಕರೊಡನೆ ಕುದುರೆಯ ಬಳಿಗೆ ಹೋದನು.

೧೫. ಪುಷ್ಕಳನು ತೋಳಿನಿಂದ ಹಿಡಿದು ಕಾಲುಗಳನ್ನು ಕಿತ್ತನು. ಆದರೂ ಸಹ ಅದು ಅಲ್ಲಾಡಲಿಲ್ಲ.

೧೬. ಎಷ್ಟು ಬಲದಿಂದ ಎಳೆದರೂ ಕುದುರೆಯು ಅಲ್ಲಾಡಲೇ ಇಲ್ಲ. ಆಗ ಹನುಮಂತನು ಅದನ್ನು ಕೀಳಲು ಪ್ರಯತ್ನಪಟ್ಟನು.

**ಲಾಂಗೂಲೇನ ಸಮಾವೇಷ್ಟ್ಯ ಬಲೇನ ಬಲಿನಾಂ ವರಃ ।**
**ಆಚಕರ್ಷ ಬಲಾದ್ವಾಹಂ ನ ಚಚಾಲ ತಥಾಪಿ ಸಃ ॥ ೧೭ ॥**

**ತದೋವಾಚ ಕಪಿಶ್ರೇಷ್ಠೋ ಹನೂಮಾನ್ವಿಸ್ಮಯಾನ್ವಿತಃ ।**
**ಶತ್ರುಘ್ನಂ ಬಲಿನಾಂ ಶ್ರೇಷ್ಠಂ ವೀರಾಣಾಂ ಪರಿಶೃಣ್ವತಾಂ ॥ ೧೮ ॥**

**ಮಯಾ ದ್ರೋಣೋ ಲಾಂಗುಲೇನ ಲೀಲಯೋತ್ಪಾಟಿತೋಽಧುನಾ ।**
**ಪರಮತ್ರ ಮಹಾಶ್ಚರ್ಯಂ ಕಂಪತೇ ನ ಹಯೋಽಲ್ಪಕಃ ॥ ೧೯ ॥**

**ದಿಷ್ಟಮತ್ರ ನಿದಾನಂ ಹಿ ವೀರೈರ್ಬಲಿಭಿರುದ್ಧೃತೈಃ ।**
**ಆಕೃಷ್ಟೋಽಪಿ ನ ಚ ಸ್ಥಾನಾಚ್ಚಚಾಲ ತಿಲಮಾತ್ರತಃ ॥ ೨೦ ॥**

**ಕಪಿಭಾಷಿತಮಾಕರ್ಣ್ಯ ಶತ್ರುಘ್ನೋ ವಿಸ್ಮಯಾನ್ವಿತಃ ।**
**ಸುಮತಿಂ ಮಂತ್ರಿಣಾಂ ಶ್ರೇಷ್ಠಮುವಾಚ ವದತಾಂ ವರಃ ॥ ೨೧ ॥**

---

೧೭. ಆ ಬಲಿಷ್ಠನು ಬಾಲದಿಂದ ಕಟ್ಟಿ ಎಳೆದರೂ ಕುದುರೆಯು ಅಲ್ಲಾಡಲೇ ಇಲ್ಲ. ಆಗ ಹನುಮಂತನು ತುಂಬಾ ಶ್ರಮಪಟ್ಟರೂ ಕುದುರೆಯು ಚಲಿಸಲಿಲ್ಲ.

೧೮. ಅಗ ಹನುಮಂತನು ಆಶ್ಚರ್ಯಗೊಂಡು ವೀರನಾದ ಶತ್ರುಘ್ನನಿಗಿಂತೆಂದನು.

೧೯. ನಾನು ದ್ರೋಣಪರ್ವತವನ್ನು ಬಹುಲೀಲೆಯಿಂದಲೇ ಕಿತ್ತೆನು. ಆದರೆ ಈ ಅಲ್ಪವಾದ ಕುದುರೆಯು ನನ್ನ ಬಲವನ್ನೆಲ್ಲಾ ಬಿಟ್ಟು ಎಳೆದರೂ ಬರುವುದಿಲ್ಲ. ಇದು ಬಹು ಆಶ್ಚರ್ಯವು.

೨೦. ಬಲಿಷ್ಠರಾದ ವೀರರು ಎಳೆದರೂ ಕೂಡ ಬಾರದುದರಿಂದ ಇದರ ವಿಷಯದಲ್ಲಿ ಏನೋ ದೇವರ ಕಾರಣವಿರಬಹುದು ಎಂದನು.

೨೧. ಕಪಿಯಾದ ಹನುಮಂತನು ಹೀಗೆನ್ನಲು ಶತ್ರುಘ್ನನು ಸುಮತಿಯನ್ನು ಕರೆದು ಕೇಳಿದನು.

॥ ಶತ್ರುಘ್ನ ಉವಾಚ ॥

ಮಂತ್ರಿನ್ಕಿಮಭವದ್ವಾಹೇ ಸ್ತಂಭನಂ ವಪುಷೋಽನಘ ।
ಕೋಽತ್ರೋಪಾಯೋ ವಿಧೇಯಸ್ಸ್ಯಾದ್ಯೇನ ವಾಹಗತಿರ್ಭವೇತ್ ॥ ೨೨ ॥

॥ ಸುಮತಿರುವಾಚ ॥

ಸ್ವಾಮಿನ್ಕಶ್ಚಿನ್ಮುನಿರ್ಮೃಗ್ಯೋಽಖಿಲಜ್ಞಾನವಿಚಕ್ಷಣಃ ।
ದೇಶೋಽದ್ಭವಮಹಂ ಜಾನೇ ಪ್ರತ್ಯಕ್ಷಂ ನ ಪರೋಕ್ಷಜಂ ॥ ೨೩ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಸುಮತೇರ್ಧರ್ಮಕೋವಿದಃ ।
ಅನ್ವೇಷಯಾಮಾಸ ಮುನಿಂ ಸೇವಕೈಸ್ಸಹ ಶೋಭಿತಂ ॥ ೨೪ ॥

ತೇ ಸರ್ವೇ ಸರ್ವತೋ ಗತ್ವಾ ಮುನಿಂ ಧರ್ಮವಿದಂ ಭಟಾಃ ।
ವಿಲೋಕಯನ್ತಸ್ಸರ್ವತ್ರ ನ ಚಾಪಶ್ಯನ್ನೃಷೀಶ್ವರಂ ॥ ೨೫ ॥

ಏಕಸ್ತ್ವನುಚರೋ ವಿಪ್ರ ಗತೋ ಯೋಜನಮಾತ್ರತಃ ।
ಪೂರ್ವಸ್ಯಾಂ ದಿಶಿ ಚೋದ್ಯುಕ್ತಃ ಪಶ್ಯತಿ ಸ್ಮ ಮಹಾಶ್ರಮಂ ॥ ೨೬ ॥

---

೨೨. ಶತ್ರುಘ್ನನು ಹೇಳಿದನು :–ಮಂತ್ರಿಯೇ, ನಮ್ಮ ಕುದುರೆಗೇನಾಯಿತು ? ಸ್ತಂಭನವುಂಟಾಗಿದೆಯಲ್ಲ. ಇದರಲ್ಲಿ ಉಪಾಯವೇನು ? ಕುದುರೆಯು ಹೇಗೆ ಬಂದೀತು ?

೨೩. ಸುಮತಿಯು ಹೇಳಿದನು :—ಸ್ವಾಮಿ, ಜ್ಞಾನಿಯಾದ ಒಬ್ಬ ಋಷಿಯನ್ನು ಹುಡುಕಬೇಕು. ದೇಶದಲ್ಲಿ ಪ್ರತ್ಯಕ್ಷವಾಗಿರುವುದನ್ನು ನಾನು ಬಲ್ಲೆ. ಪರೋಕ್ಷವು ನನಗೆ ಗೊತ್ತಿಲ್ಲ.

೨೪. ಶೇಷನು ಹೇಳಿದನು :--ಸುಮತಿಯ ಈ ಮಾತನ್ನು ಕೇಳಿ ಶತ್ರುಘ್ನನು ಸೇವಕರಿಂದ ಅಲ್ಲಿ ಋಷಿಗಳನ್ನು ಹುಡುಕಿಸಿದನು.

೨೫. ಆ ಸೇವಕರೆಲ್ಲರೂ ಎಲ್ಲೆಲ್ಲಾ ಹುಡುಕಿದರೂ ಒಬ್ಬ ಋಷಿಯೂ ಸಿಕ್ಕಲಿಲ್ಲ.

೨೬. ಒಬ್ಬ ಆಳು ಮಾತ್ರ ಪೂರ್ವದಿಕ್ಕಿಗೆ ಒಂದು ಯೋಜನ ಹೋಗಲು ಒಂದು ಆಶ್ರಮವು ಕಾಣಿಸಿತು.

ಯತ್ರ ನಿರ್ವೈರಿಣಸ್ಸರ್ವೇ ಪಶವೋ ಜನತಾಸ್ತಥಾ ।
ಗಂಗಾಸ್ನಾನಹತಾಶೇಷಕಿಲ್ಬಿಷಾಸ್ಸುಮನೋಹರಾಃ ॥ ೨೭ ॥

ಯತ್ರ ಕೇಚಿತ್ತಪಶ್ಶ್ರೇಷ್ಠಂ ಕುರ್ವಂತಿ ಸುಹುತಾಶನೈಃ ।
ಧೂಮ್ರೈರಧೋಮುಖಾಃ ಕೇಚಿದ್ವಾಯುಭಿಸ್ತ್ವೋದರಂಭರಾಃ ॥ ೨೮ ॥

ಯತ್ರಾಗ್ನಿಹೋತ್ರಜೋ ಧೂಮಃ ಪವಿತ್ರಯತಿ ಸರ್ವದಾ ।
ಅನೇಕಮುನಿಸಂಜುಷ್ಟೋ ಮುಕ್ತಪತ್ರಲತೋತ್ತಮಃ ॥ ೨೯ ॥

ತಮಾಶ್ರಮಂ ಮುನೇರ್ಜ್ಞಾತ್ವಾ ಶೌನಕಸ್ಯ ಮನೋಹರಂ ।
ನ್ಯವೇದಯನ್ನೃಪಾಯಾಸೌ ವಿಸ್ಮಯಾವಿಷ್ಟಚೇತಸಾ ॥ ೩೦ ॥

ತಚ್ಛ್ರುತ್ವಾ ಹರ್ಷಿತೋಽತ್ಯಂತಂ ಶತ್ರುಘ್ನಸ್ಸಹ ಸೇವಕೈಃ ।
ಹನೂಮತ್ಪುಷ್ಕಲಾದ್ಯೈಶ್ಚ ಸಂಯುತೋಽಗಾತ್ತದಾಶ್ರಮಂ ॥ ೩೧ ॥

ತತ್ರ ವೀಕ್ಷ್ಯ ಮುನಿಶ್ರೇಷ್ಠಂ ಸಮ್ಯಗ್ಘುತಹುತಾಶನಂ ।
ಪ್ರಣಮ್ಯ ದಂಡವತ್ತಸ್ಯ ಚರಣೌ ಪಾಪಹಾರಿಣೌ ॥ ೩೨ ॥

---

೨೭. ಅಲ್ಲಿ ಜನಗಳೂ, ಮೃಗಗಳೂ ವೈರವನ್ನು ಬಿಟ್ಟಿದ್ದರು. ಗಂಗಾಸ್ನಾನದಿಂದ ಪಾಪಗಳನ್ನೆಲ್ಲಾ ಹಾಳುಮಾಡಿಕೊಂಡಿದ್ದರು.

೨೮. ಅಲ್ಲಿ ಕೆಲವರು ಅಗ್ನಿಯನ್ನಿಟ್ಟುಕೊಂಡು ತಪಸ್ಸನ್ನು ಮಾಡುತ್ತಿದ್ದರು. ಕೆಲವರು ತಲೆಕೆಳಕಾಗಿ ಹೊಗೆಕುಡಿಯುತ್ತಾ ತಪಸ್ಸುಮಾಡುತ್ತಿದ್ದರು. ಮತ್ತೆ ಕೆಲವರು ವಾಯ್ವಾಹಾರಿಗಳಾಗಿ ತಪಸ್ಸುಮಾಡುತ್ತಿದ್ದರು.

೨೯. ಅಲ್ಲಿರುವ ಅಗ್ನಿಹೋತ್ರದ ಹೊಗೆಯು ಎಲ್ಲರನ್ನೂ ಪವಿತ್ರಮಾಡುತ್ತಿದ್ದಿತು. ಅನೇಕ ಋಷಿಗಳು ಅದನ್ನು ಸೇವಿಸುತ್ತಿದ್ದರು.

೩೦. ಆ ಶೌನಕರ ಆಶ್ರಮವನ್ನು ನೋಡಿ ಆ ಸೇವಕನು ಶತ್ರುಘ್ನನಿಗೆ ತಿಳಿಸಿದನು.

೩೧. ಅದನ್ನು ಕೇಳಿ ಶತ್ರುಘ್ನನು ಸಂತೋಷಪಟ್ಟು ಸೇವಕರೊಡನೆಯೂ ಹನುಮಂತಪುಷ್ಕಳರೊಡನೆಯೂ ಆ ಆಶ್ರಮಕ್ಕೆ ಹೋದನು.

೩೨. ಅಲ್ಲಿ ಅಗ್ನಿಹೋತ್ರಪರನಾದ ಆ ಋಷಿಯನ್ನು ನೋಡಿ ಪಾದಗಳಿಗೆರಗಿದನು.

ತಮಾಯಾಂತಂ ನೃಪಂ ಜ್ಞಾತ್ವಾ ಶತ್ರುಘ್ನಂ ಬಲಿನಾಂ ವರಂ ।
ಅರ್ಘ್ಯಪಾದ್ಯಾದಿಕಂ ಚಕ್ರೇ ಪ್ರೀತಸ್ತದ್ದರ್ಶನಾದಭೂತ್ ॥ ೩೩ ॥

ಸುಖೋಪವಿಷ್ಟಂ ವಿಶ್ರಾಂತಂ ನೃಪಂ ಪ್ರಾಹ ಮುನೀಶ್ವರಃ ।
ಕಿಮರ್ಥಮಟನಂ ತೇಽತ್ರ ಮಹತ್ಪರ್ಯಟನಂ ತವ ॥ ೩೪ ॥

ತ್ವಾದೃಶಾಃ ಪೃಥಿವೀಂ ಸರ್ವಾಂ ನೃಪಾ ವೈ ನ ಭ್ರಮಂತಿ ಚೇತ್ ।
ತದಾ ದುಷ್ಟಾ ಜನಾಸ್ಸಾಧೂನ್ಬಾಧಂತೇ ವಿಗತಜ್ವರಾಃ ॥ ೩೫ ॥

ಕಥಯಸ್ವ ಮಹೀಪಾಲ ಶತ್ರುಘ್ನ ಬಲಿನಾಂ ವರ ।
ಸರ್ವಂ ಶುಭಾಯ ನೋ ಭೂಯಾತ್ತವ ಪರ್ಯಟನಾದಿಕಂ ॥ ೩೬ ॥

॥ ಶೇಷ ಉವಾಚ ॥

ಇತ್ಯುಕ್ತವಂತಂ ಭೂದೇವಂ ಪ್ರತ್ಯುವಾಚ ಮಹೀಶ್ವರಃ ।
ಗದ್ಗದಸ್ವರಯಾ ವಾಚಾ ಹರ್ಷಿತಸ್ವೀಯವಿಗ್ರಹಃ ॥ ೩೭ ॥

॥ ಶತ್ರುಘ್ನ ಉವಾಚ ॥

ಅಕಸ್ಮಾದಭವಚ್ಚಿತ್ರಂ ರಾಮಾಶ್ವಸ್ಯ ಮನೋಽಹೃತಃ ।
ನಾತಿದೂರೇ ತ್ವದಾವಾಸಾತ್ತಚ್ಛೃಣುಷ್ವ ವಿದಾಂ ವರ ॥ ೩೮ ॥

---

೩೩. ಶತ್ರುಘ್ನನು ಬಂದಿರುವುದನ್ನು ಕಂಡು ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಅವನನ್ನು ನೋಡಿ ಸಂತೋಷಪಟ್ಟನು.

೩೪-೩೫. ಸುಖವಾಗಿ ಕುಳಿತಿರುವ ರಾಜನನ್ನು ಕುರಿತು ಬಂದಕಾರಣವೇನು? ಬಹಳದೂರದ ಪ್ರಯಾಣವಂತಿಪೆಯಲ್ಲ. ನಿನ್ನಂತಹ ರಾಜರು ಸುತ್ತದಿದ್ದರೆ ದುಷ್ಟರು ಸಾಧುಗಳನ್ನು ತೊಂದರೆಪಡಿಸುತ್ತಾರೆ.

೩೬. ಎಲೈ ರಾಜನಾದ ಶತ್ರುಘ್ನನೇ ಹೇಳು ನಿನ್ನ ಸಂಚಾರವು ನಮಗೆ ಒಳ್ಳೆಯದನ್ನುಂಟುಮಾಡುತ್ತದೆ.

೩೭. ಶೇಷನು ಹೇಳಿದನು:—ಹೀಗೆ ಹೇಳಿದ ಬ್ರಾಹ್ಮಣನನ್ನು ಕುರಿತು ರಾಜನು ಗದ್ಗದಸ್ವರದಿಂದ ಇಂತೆಂದನು.

೩೮. ಶತ್ರುಘ್ನನು ಹೇಳಿದನು;—ನಿನ್ನ ಆಶ್ರಮಕ್ಕೆ ಹತ್ತಿರದಲ್ಲಿಯೇ ರಾಮಾಶ್ವಕ್ಕೆ ಒಂದು ವಿಚಿತ್ರವಾಗಿದೆ. ಕೇಳು.

ಉದ್ಯಾನೇ ಪುಷ್ಪಶೋಭಾಢ್ಯೇ ಯದೃಚ್ಛಾತೋ ಹಯೋ ಗತಃ ।
ತತ್ಪ್ರಾನ್ತೇ ತಸ್ಯ ವಾಹಸ್ಯ ಗಾತ್ರಸ್ತಂಭೋಽಭವತ್ಕ್ಷಣಾತ್ ॥ ೩೯ ॥

ತದಾ ಮೇ ಬಲಿನೋ ವೀರಾಃ ಪುಷ್ಕಲಾದ್ಯಾ ಮಹೋತ್ಕಟಾಃ ।
ಬಲಾದಾಚಕೃಷುರ್ವಾಹಂ ನ ಚಚಾಲ ತಥಾಪ್ಯಸೌ ॥ ೪೦ ॥

ಅಸ್ಮಾನಪಾರದುಃಖಾಬ್ಧೌ ಮಗ್ನಾನ್ಪ್ರತಿ ತರಿಃ ಸ್ಮೃತಃ ।
ದೈವಾದ್ದೃಷ್ಟಸ್ಸುಭಾಗ್ಯೈಸ್ತ್ವಂ ಕಥಯಸ್ವ ನಿದಾನಕಂ ॥ ೪೧ ॥

॥ ಶೇಷ ಉವಾಚ ॥

ಏವಂ ಪೃಷ್ಟೋ ಮುನಿವರಃ ಕ್ಷಣಂ ದಧ್ಯೌ ಮಹಾಮತಿಃ ।
ತತಃ ಕಾರಣಸಂಯುಕ್ತಂ ವಿಚಾರೇಣ ದಧದ್ಧಯಂ ॥ ೪೨ ॥

ಕ್ಷಣಾತ್ತಜ್ಜ್ಞಾನತಾಂ ಪ್ರಾಪ್ಯ ವಿಸ್ಮಯೋತ್ಫುಲ್ಲಲೋಚನಃ ।
ಜಗಾದ ಸ ಮಹೀಪಾಲಂ ದುಃಖಿತಂ ಸಂಶಯಾನ್ವಿತಂ ॥ ೪೩ ॥

---

೩೯. ಈ ಪುಷ್ಪೋದ್ಯಾನಕ್ಕೆ ಅಕಸ್ಮಾತ್ತಾಗಿ ಕುದುರೆಯು ಹೋಯಿತು. ಅಲ್ಲಿ ಅವರ ದೇಹವು ಚಲಿಸಂತಾಗಿದೆ.

೪೦. ಆಗ ನನ್ನ ಕಡೆಯ ಬಲಿಷ್ಠರಾದ ಪುಷ್ಕಳಾದಿವೀರರು ಬಲದಿಂದ ಎಳೆದರೂ ಅಲ್ಲಾಡಲಿಲ್ಲ.

೪೧. ನಾವು ದುಃಖಸಾಗರದಲ್ಲಿ ಮುಳುಗಿರಲು ಒಂದು ದೋಣಿಯು ಸ್ಮರಿಸಲ್ಪಟ್ಟಿತು. ಅದೃಷ್ಟದಿಂದ ನಿನ್ನನ್ನು ನೋಡಿದೆನು.

೪೨. ಶೇಷನು ಹೇಳಿದನು :-ಆಗ ಆ ಋಷಿಯು ಯೋಗಾಭ್ಯಾಸಕ್ಕೆ ಕುಳಿತು ಕುದುರೆಯು ಹೀಗಾದ ಕಾರಣವನ್ನು ವಿಚಾರಮಾಡಿದನು.

೪೩. ಕ್ಷಣಕಾಲದಲ್ಲಿ ತಿಳಿದು ಕಣ್ಣುಗಳನ್ನು ಬಿಟ್ಟು ದುಃಖಗೊಂಡಿರುವ ಶತ್ರುಘ್ನನನ್ನು ಕುರಿತು ಇಂತೆಂದನು.

॥ ಶೌನಕ ಉವಾಚ ॥

ಶೃಣು ರಾಜನ್ಪ್ರವಕ್ಷ್ಯಾಮಿ ಹಯಸ್ತಂಭಸ್ಯ ಕಾರಣಂ ।
ಯಚ್ಛ್ರುತ್ವಾ ಮುಚ್ಯತೇ ದುಃಖಾದತಿಚಿತ್ರಂ ಕಥಾನಕಂ ॥ ೪೪ ॥

ಗೌಡದೇಶೇ ಮಹಾರಮ್ಯೇ ಕಾವೇರೀತೀರಭೂಷಿತೇ ।
ಬಾಡಬಃ ಸಾತ್ತ್ವಿಕೋನಾಮ್ನಾ ಚಚಾರ ಪರಮಂ ತಪಃ ॥ ೪೫ ॥

ಏಕಾಹಂ ಪಯಸಃ ಪ್ರಾಶೀ ದಿನೈಕಂ ವಾಯುಭಕ್ಷಕಃ ।
ದಿನೈಕಂ ತು ನಿರಾಹಾರ ಏವಂ ತ್ರಿದಿನಮುನ್ನಯೇತ್ ॥ ೪೬ ॥

ಏವಂ ವ್ರತೇ ಪ್ರವೃತ್ತಸ್ಯ ಕಾಲಸ್ಸರ್ವಕ್ಷಯಂಕರಃ ।
ಜಗ್ರಾಹ ಸ್ವಕೆದಂಷ್ಟ್ರಾಯಾಂ ಮೃತಿಂ ಪ್ರಾಪ ಮಹಾವ್ರತೀ ॥ ೪೭ ॥

ವಿಮಾನೇ ಸರ್ವಶೋಭಾಢ್ಯೇ ಸರ್ವರತ್ನವಿಭೂಷಿತೇ ।
ಬಾಡಬಃ ಸಾತ್ತ್ವಿಕೋ ನಾಮ್ನಾ ಯಯೌ ಮೇರೋಃ ಶಿಖಾಸ್ಥಿತಃ ॥೪೮॥

---

೪೪. ಶೌನಕನು ಹೇಳಿದನು:—ಎಲೈ ದೊರೆಯೇ, ನಿನ್ನ ಕುದುರೆಯ ಸ್ತಂಭಿತವಾದುದಕ್ಕೆ ಕಾರಣವನ್ನು ಹೇಳುತ್ತೇನೆ. ಅದನ್ನು ಕೇಳಿ ಚಿಂತೆಯನ್ನು ಬಿಡು.

೪೫. ಗೌಡದೇಶದಲ್ಲಿ ಕಾವೇರೀನದಿಯ ತೀರದಲ್ಲಿ ಸಾತ್ವಿಕನೆಂಬ ಬ್ರಾಹ್ಮಣನು ಬಹುವಾದ ತಪಸ್ಸನ್ನು ಮಾಡಿದನು.

೪೬. ಒಂದು ದಿನ ಹಾಲು, ಒಂದು ದಿನ ವಾಯು, ಒಂದು ದಿನ ಆಹಾರವೇ ಇಲ್ಲ. ಈರೀತಿ ಮೂರು ದಿನಗಳನ್ನು ಕಳೆಯುವನು.

೪೭. ಹೀಗೆ ವ್ರತದಿಂವ ತಪಸ್ಸುಮಾಡುತ್ತಿರಲು ಎಲ್ಲವನ್ನೂ ನಾಶಮಾಡುವ ಕಾಲವು ತನ್ನ ದವಡೆಗೆ ಆ ಋಷಿಯನ್ನೂ ತೆಗೆದುಕೊಂಡಿತು (ಎಂದರೆ ಸತ್ತನು.)

೪೮. ಸರ್ವಶೋಭೆಯಿಂದ ಕೂಡಿದ ಸಿಂಹಾಸನದಲ್ಲಿ ಕುಳಿತು ಆ ಸಾತ್ವಿಕನು ಮೇರುವಿನ ಶಿಖರಕ್ಕೆ ಹೋದನು.

ಜಂಬೂನಾಮ ಮಹಾವೃಕ್ಷಸ್ತತ್ರ ಸೇವ್ಯಸ್ತತೋಽಭವತ್ ।
ನದೀ ಜಾಂಬುವತೀ ಸಂಜ್ಞಾ ಸ್ವರ್ಣದ್ರವಸಮನ್ವಿತಾ । ॥ ೪೯ ॥

ತಸ್ಯಾಂ ಮುನಯೋಽಪ್ಸರೋಭಿಃ ಕ್ರೀಡನ್ತೇ ಕುತುಕಾನ್ವಿತಾಃ ।
ಅನೇಕತಪಸಾ ಪುಣ್ಯಾಃ ಸರ್ವಸೌಖ್ಯಸಮನ್ವಿತಾಃ ॥ ೫೦ ॥

ತತ್ರಾಸೌ ಸ್ವೇಚ್ಛಯಾ ಕ್ರೀಡನ್ನಪ್ಸರೋಭಿರ್ಮದಾನ್ವಿತಃ ।
ಪ್ರತೀಪಮಾಚರತ್ತೇಷಾಂ ಸ್ವಾಭಿಮಾನಮದೋದ್ಧತಃ ॥ ೫೧ ॥

ತತಸ್ತು ಶಪ್ತೋ ಮುನಿಭೀ ರಾಕ್ಷಸೋ ಭವ ದುರ್ಮದಃ ।
ತತೋಽತಿದುಃಖಿತಃ ಪ್ರಾಹ ಮುನೀನ್ವಿಖ್ಯಾತಪೋಧನಾನ್ ॥ ೫೨ ॥

ಅನುಗೃಹ್ಣಂತು ಮಾಂ ಸರ್ವೇ ವಿಪ್ರಾ ಯೂಯಂ ಕೃಪಾಲವಃ ।
ತದಾ ತೈರನುಗೃಹೀತೋ ಯಬಾ ರಾಮಹಯಂ ಭವಾನ್ ॥ ೫೩ ॥

---

೪೯. ಆ ಮೇರುಪರ್ವತದಲ್ಲಿ ಒಂದು ನೇರಳೆಯಮರವಿದೆ. ಅದನ್ನು ಸೇವಿಸಬೇಕು. ಅಲ್ಲಿಯೇ ಚಿನ್ನದನೀರಿನಿಂದ ಹರಿಯುವ ಜಾಂಬೂವತಿಯೆಂಬ ಒಂದು ನದಿಯಿದೆ.

೫೦. ಅಲ್ಲಿ ಋಷಿಗಳು ಅಪ್ಸರಸ್ತ್ರೀಯರೂಡನೆ ಕ್ರೀಡಿಸುತ್ತಿರುತ್ತಾರೆ. ಸರ್ವಸೌಖ್ಯದಿಂದಲೂ ಇದ್ದಾರೆ.

೫೧. ಅಲ್ಲಿ ಈತನು ಅಪ್ಸರಸ್ತ್ರೀಯರೊಡನೆ ಕ್ರೀಡಿಸುತ್ತಾ ಹೆಮ್ಮೆಯಿಂದ ಅಲ್ಲಿನ ಮಿಕ್ಕ ಋಷಿಗಳಿಗೆ ತೊಂದರೆಮಾಡುತ್ತಿದ್ದನು.

೫೨. ಆಗ ಮುನಿಗಳು ಅವನನ್ನು ರಾಕ್ಷಸನಾಗೆಂದು ಶಪಿಸಿದರು. ಆಗ ದುಃಖಗೊಂಡು ಋಷಿಗಳನ್ನು ಕುರಿತು ಕೇಳಿಕೊಂಡನು.

೫೩-೫೪. ನನ್ನನ್ನು ನೀವೆಲ್ಲರೂ ಅನುಗ್ರಹಿಸಿರಿ. ಕೃಪೆಮಾಡಿರಿ ಎನ್ನಲು ಅವರೆಲ್ಲರೂ ಆಗ ದಯೆಯಿಂದ, ಶ್ರೀರಾಮನ ಯಜ್ಞದಕುದುರೆಯು ಇಲ್ಲಿಗೆ ಬರುತ್ತದೆ.

ಸ್ತಂಭಯಿಷ್ಯತಿ ವೇಗೇನ ತತೋ ರಾಮಕಥಾಶ್ರುತಿಃ ।
ಪಶ್ಚಾನ್ಮುಕ್ತಿರ್ಭವಿತ್ರೀ ತೇ ಶಾಪಾದಸ್ಮಾತ್ಸುದಾರುಣಾತ್ ॥ ೫೪ ॥

ಸ ಪ್ರೋಕ್ತೋ ಮುನಿಭಿರ್ದೇವೋ ರಾಕ್ಷಸತ್ವಮಿತಃ ಪ್ರಭೋ ।
ಸ್ತಂಭಯಾಮಾಸ ರಾಮಾಶ್ವಂ ಮೋಚಯಾನಘ ಕೀರ್ತನೈಃ ॥ ೫೫ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಶಾಪಕೀರ್ತನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ**

---

ಆಗ ಬಲದಿಂದ ನೀನು ಅದನ್ನು ನಿಶ್ಚಲವನ್ನಾಗಿ ಮಾಡು. ಆಗ ರಾಮನ ಕಥೆಯನ್ನು ಕೇಳುತ್ತೀಯೆ. ಅನಂತರ ನಿನಗೆ ಶಾಪವು ಕಳೆದುಹೋಗುತ್ತದೆಂದರು.

೫೫. ಋಷಿಗಳು ಹಾಗೆನ್ನಲು ರಾಕ್ಷಸನಾಗಿ ಅಲ್ಲಿದ್ದನು. ರಾಮಾಶ್ವವನ್ನು ಸ್ತಂಭಿಸಿದನು. ರಾಮನ ಕೀರ್ತನೆಯಿಂದ ಬಿಡಿಸು ಹೋಗು ಎಂದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನ ಸಂವಾದದ ರಾಮಾಶ್ವಮೇಧದಲ್ಲಿ ಶಾಪಕೀರ್ತನವೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಚತ್ವಾರಿಂಶೋಽಧ್ಯಾಯಃ

---

॥ ಶೇಷ ಉವಾಚ ॥

ಇತಿ ಪ್ರೋಕ್ತಂ ತು ಮುನಿನಾ ಸಂಶ್ರುತ್ಯ ಪರವೀರಹಾ ।
ವಿಸ್ಮಯಂ ಮಾನಯಾಮಾಸ ಹೃದಿ ಶೌನಕಮಬ್ರವೀತ್ ॥ ೧ ॥

॥ ಶತ್ರುಘ್ನ ಉವಾಚ ॥

ಕರ್ಮಣೋ ಗಹನಾ ವಾರ್ತಾ ಯಯಾ ಸಾತ್ತ್ವಿಕನಾಮಧೃತ್ ।
ದಿವಂ ಪ್ರಾಪ್ತೋಽಪಿ ಮಹತಾ ಕರ್ಮಣಾ ರಾಕ್ಷಸೀಕೃತಃ ॥ ೨ ॥

ಸ್ವಾಮಿನ್ವದ ಮಹರ್ಷೇ ತ್ವಂ ಕರ್ಮಣಾಂ ಸ್ವಗತಿರ್ಯಥಾ ।
ಯೇನ ಕರ್ಮವಿಪಾಕೇನ ಯಾದೃಶಂ ನರಕಂ ಭವೇತ್ ॥ ೩ ॥

---

## ನಲವತ್ತೆಂಟನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಶತ್ರುಘ್ನನು, ಶೌನಕನು ಹೇಳಿದುದನ್ನು ಕೇಳಿ ಮನಸ್ಸಿನಲ್ಲಿ ವಿಸ್ಮಯಹೊಂದಿ ಶೌನಕನನ್ನು ಕುರಿತು ಇಂತೆಂದನು.

೨. ಶತ್ರುಘ್ನನು ಹೇಳಿದನು:—ಕರ್ಮದ ವಿಷಯವು ಬಹು ಗಹನವಾದುದು. ಸಾತ್ವಿಕನೆಂಬ ಹೆಸರಿದ್ದೂ ಅವನು ಸ್ವರ್ಗಕ್ಕೆ ಹೋದರೂ ರಾಕ್ಷಸನಾದನಲ್ಲ.

೩. ಸ್ವಾಮಿ! ತಾವು ಮಹರ್ಷಿಗಳು. ಕರ್ಮಗಳ ಗತಿಯು ಎಂತಹದು? ಯಾವ ಕರ್ಮದಿಂದ ಯಾವನರಕವನ್ನು ಹೊಂದುತ್ತಾನೆ ಎಂಬುದನ್ನು ತಿಳಿಸಿ.

॥ ಶೌನಕ ಉವಾಚ ॥

ಧನ್ಯೋಽಸಿ ರಾಘವಶ್ರೇಷ್ಠ ಯತ್ತೇ ಮತಿರಿಯಂ ಸದಾ ।
ಜಾನನ್ನಪಿ ಹಿತಾರ್ಥಾಯ ಲೋಕಾನಾಂ ತ್ವಂ ಬ್ರವೀಷಿ ಭೋಃ ॥ ೪ ॥

ಕಥಯಾಮಿ ವಿಚಿತ್ರಾಣಾಂ ಕರ್ಮಣಾಂ ವಿವಿಧಾಂ ಗತಿಂ ।
ತಾಂ ಶೃಣುಷ್ವ ಮಹಾರಾಜ ಯಚ್ಛ್ರುತ್ವಾ ಮೋಕ್ಷಮಾಪ್ನುಯಾತ್ ॥ ೫ ॥

ಪರವಿತ್ತಂ ಪರಾಪತ್ಯಂ ಕಲತ್ರಂ ಪಾರಕಂ ಚ ಯಃ ।
ಬಲಾತ್ಕಾರೇಣ ಗೃಹ್ಣಾತಿ ಭೋಗಬುದ್ಧ್ಯಾ ತು ದುರ್ಮತಿಃ ॥ ೬ ॥

ಕಾಲಪಾಶೇನ ಸಂಬದ್ಧೋ ಯಮದೂತೈರ್ಮಹಾಬಲೈಃ ।
ತಾಮಿಸ್ರೇ ಪಾತ್ಯತೇ ತಾವದ್ಯಾವದ್ವರ್ಷಸಹಸ್ರತಂ ॥ ೭ ॥

ತತ್ರ ತಾಡನಮುದ್ಧೂತಾಃ ಕುರ್ವಂತಿ ಯಮಕಿಂಕರಾಃ ॥
ಪಾಪಭೋಗೇ ನ ಸಂತಪ್ತಸ್ತತೋ ಯೋನಿಂ ತು ಶೌಕರೀಂ ॥ ೮ ॥

ತತ್ರ ಭುಕ್ತ್ವಾ ಮಹದ್ದುಃಖಂ ಮಾನುಷತ್ವಂ ಗಮಿಷ್ಯತಿ ।
ರೋಗಾದಿಚಿಹ್ನಿತಂ ತತ್ರ ದುರ್ಯಶೋಜ್ಞಾಪಕಂ ಸ್ವಕಂ ॥ ೯ ॥

---

೪. ಎಲೈ ಶತ್ರುಘ್ನನೇ ನೀನೇ ಧನ್ಯನು. ನಿನಗೆ ಯಾವಾಗಲೂ ಇದೇ ವಿಷಯದಲ್ಲಿ ಮನಸ್ಸಿದೆ. ನೀನು ತಿಳಿದಿದ್ದರೂ ಕೂಡ ಲೋಕಹಿತಕ್ಕೋಸ್ಕರ ಕೇಳು ತ್ತಿದ್ದೀಯೆ.

೫. ಕರ್ಮಗಳ ವಿಚಿತ್ರಗತಿಯನ್ನು ಹೇಳುತ್ತೇನೆ. ಅದನ್ನು ಕೇಳಿದರೂ ಮೋಕ್ಷಬರುತ್ತದೆ, ಕೇಳು.

೬-೭. ಪರರ ಹಣ, ಪರರ ಮಕ್ಕಳು, ಪರರ ಹೆಂಡಿರು. ಇವನ್ನು ಭೋಗ ಬುದ್ಧಿಯಿಂದ ಅಪಹರಿಸಿದರೆ ಯಮಪಾಶದಿಂದ ಕಟ್ಟಿ ಅವನನ್ನು ಸಾವಿರ ವರ್ಷಗಳ ವರೆಗೂ ನರಕದಲ್ಲಿ ಹಾಕುತ್ತಾರೆ.

೮-೯. ಅಲ್ಲಿ ಯಮದೂತರು ಕರೆದುಕೊಡೆಯುತ್ತಾರೆ. ಅಲ್ಲಿ ಪಾಪವನ್ನನು ಭವಿಸಿ ಅನಂತರ ಹಂದಿಯಾಗಿ ಹುಟ್ಟುತ್ತಾನೆ. ಅದರಲ್ಲಿ ಬಹು ಕಷ್ಟವನ್ನನುಭವಿಸಿ ರೋಗಚಿಹ್ನಗಳಿಂದ, ಪಾಪಿಯೆಂದು ತಿಳಿಯುವಂತೆ ಗುರ್ತುಹೊಂದಿ ಮನುಷ್ಯಜಾತಿ ಯಲ್ಲಿ ಹುಟ್ಟುತ್ತಾನೆ.

ಭೂತದ್ರೋಹಂ ವಿಧಾಯೈವ ಕೇವಲಂ ಸ್ವಕುಟುಂಬಕಂ ।
ಪುಷ್ಣಾತಿ ಪಾಪನಿರತಃ ಸೋಂಧತಾಮಿಸ್ರಕೇ ಪತೇತ್ ॥ ೧೦ ॥

ಯೇ ನರಾ ಇಹ ಜಂತೂನಾಂ ವಧಂ ಕುರ್ವಂತಿ ವೈ ವೃಥಾ ।
ತೇ ರೌರವೇ ನಿಪಾತ್ಯಂತೇ ಭಿದ್ಯಂತೇ ರುರುಭೀ ರುಷಾ ॥ ೧೧ ॥

ಯಸ್ತ್ವೋದರಾರ್ಥಂ ಭೂತಾನಾಂ ವಧಮಾಚರತಿ ಸ್ಫುಟಂ ।
ಮಹಾರೌರವಸಂಜ್ಞೇ ತು ಪಾತ್ಯತೇ ಚ ಯಮಾಜ್ಞಯಾ ॥ ೧೨ ॥

ಯೋ ವೈ ನಿಜಂ ತು ಜನಕಂ ಬ್ರಾಹ್ಮಣಂ ದ್ವೇಷ್ಟಿ ಪಾಪಕೃತ್ ।
ಕಾಲಸೂತ್ರೇ ಮಹಾದುಃಖೇ ಯೋಜನಾಯುತವಿಸ್ತೃತೇ ॥ ೧೩ ॥

ಯಾವಂತಿ ಪಶುರೋಮಾಣಿ ಗವಾಂ ದ್ವೇಷಂ ಕರೋತಿ ಯಃ ।
ತಾವದ್ವರ್ಷಸಹಸ್ರಾಣಿ ಪಚ್ಯತೇ ಯಮಕಿಂಕರೈಃ ॥ ೧೪ ॥

ಯೋ ಭೂಮೌ ಭೂಪತಿರ್ಭೂತ್ವಾ ದಂಡಾಯೋಗ್ಯಂತು ದಂಡಯೇತ್ ।
ಕರೋತಿ ಬ್ರಾಹ್ಮಣಸ್ಯಾಪಿ ದೇಹದಂಡಂ ಚ ಲೋಲುಪಃ ॥ ೧೫ ॥

ಸ ಶೂಕರಮುಖೈರ್ದುಷ್ಟೈಃ ಪೀಡ್ಯತೇ ಯಮಕಿಂಕರೈಃ ।
ಪಶ್ಚಾದ್ದುಷ್ಟಾಸು ಯೋನೀಷು ಜಾಯತೇ ಪಾಪಮುಕ್ತಯೇ ॥ ೧೬ ॥

---

೧೦. ತನ್ನ ಕುಟುಂಬಕ್ಕೋಸ್ಕರ ಯಾವನು ಪರರಿಗೆ ದ್ರೋಹವೆಸಗುತ್ತಾನೋ ಅವನನ್ನು ಅಂಧತಾಮಿಸ್ರವೆಂಬ ನರಕದಲ್ಲಿ ಕೆಡವುತ್ತಾರೆ.

೧೧. ವ್ಯರ್ಥವಾಗಿ ಯಾರು ಜಂತುಗಳನ್ನು ಕೊಲ್ಲುತ್ತಾರೋ ಅವರು ರೌರವ ನರಕದಲ್ಲಿ ಬೀಳುತ್ತಾರೆ. ರುರುಗಳು ಚುಚ್ಚಿ ತಿನ್ನುತ್ತವೆ.

೧೨. ತನ್ನ ಹೊಟ್ಟೆಗೋಸ್ಕರ ಪ್ರಾಣಿಗಳನ್ನು ಕೊಲ್ಲುವವರು ಮಹಾರೌರವದಲ್ಲಿ ಬೀಳುತ್ತಾರೆ.

೧೩. ಬ್ರಾಹ್ಮಣನಾದ ತನ್ನ ತಂದೆಯನ್ನು ದ್ವೇಷಿಸಿದರೆ ಕಾಲಸೂತ್ರವೆಂಬ ನರಕದಲ್ಲಿ ಬೀಳುತ್ತಾನೆ.

೧೪. ಗೋವನ್ನು ದ್ವೇಷಿಸಿದರೆ ಅವರಲ್ಲಿರುವ ರೋಮಗಳ ಸಂಖ್ಯೆಯಷ್ಟು ಸಾವಿರವರ್ಷಗಳವರೆಗೆ ನರಕದಲ್ಲಿ ಬೀಳುತ್ತಾನೆ.

೧೫-೧೬. ರಾಜನಾದವನು ಶಿಕ್ಷೆಗೆ ಅನರ್ಹನಾದವನನ್ನು ದಂಡಿಸಿದರೆ ಮತ್ತು ಬ್ರಾಹ್ಮಣನನ್ನು ದಂಡಿಸಿದರೆ ಅವನನ್ನು ನರಕದಲ್ಲಿ ಹಂದಿಯೇ ಮುಂತಾದುವುಗಳಿಂದ ತೊಂದರೆಪಡಿಸಿ ಅನಂತರ ಕೆಟ್ಟ ಜಾತಿಯಲ್ಲಿ ಹುಟ್ಟಿಸುತ್ತಾರೆ.

ಬ್ರಾಹ್ಮಣಾನಾಂ ಗವಾಂ ಯೇ ತು ದ್ರವ್ಯಂ ವೃತ್ತಂ ತಥಾಲ್ಪಕಂ ।
ವೃತ್ತಿಂ ವಾ ಗೃಹ್ಣತೇ ಮೋಹಾಲ್ಲುಂಪಂತಿ ಸ್ವಬಲಾನ್ನರಾಃ ॥ ೧೭ ॥

ತೇ ಪರತ್ರಾಂಧಕೂಪೇ ಚ ಪಾತ್ಯಂತೇ ಚ ಮಹಾರ್ದಿತಾಃ ।
ಯೋಽನ್ನಂ ಸ್ವಯಮುಪಾಹೃತ್ಯ ಮಧುರಂ ಚಾತ್ತಿ ಲೋಲುಪಃ ॥ ೧೮ ॥

ನ ದೇವಾಯ ನ ಸುಹೃದೇ ದದಾತಿ ರಸನಾತುರಃ ।
ಸ ಪತತ್ಯೇವ ನರಕೇ ಕೃಮಿಭೋಜನಸಂಜ್ಞಕೇ ॥ ೧೯ ॥

ಅನಾಪದಿ ನರೋ ಯಸ್ತು ಹಿರಣ್ಯಾದೀನ್ಯಪಾಹರೇತ್ ।
ಬ್ರಹ್ಮಸ್ವಂ ವಾ ಮಹಾದುಷ್ಟೇ ಸಂದಂಶೇ ನರಕೇ ಪತೇತ್ ॥ ೨೦ ॥

ಯಸ್ಸ್ವಂ ದೇಹಂ ಪ್ರಪುಷ್ಣಾತಿ ನಾನ್ಯಂ ಜಾನಾತಿ ಮೂಢಧೀಃ ।
ಸ ಪಾತ್ಯತೇ ತೈಲತಪ್ತೇ ಕುಂಭೀಪಾಕೇಽತಿದಾರುಣೇ ॥ ೨೧ ॥

ಯೋ ನಾಗಮ್ಯಾಂ ಸ್ತ್ರಿಯಂ ಮೋಹಾದ್ಯೋಷಿದ್ವಾಪ್ಯಾಚ್ಛಕಾಮಯೇತ್ ।
ತಂ ತಯಾ ಕಿಂಕರಾಃ ಸೂರ್ಮ್ಯಾ ಪರಿರಂಭಂ ಚ ಕುರ್ವತೇ ॥ ೨೨ ॥

---

೧೭. ಬ್ರಾಹ್ಮಣರ ಗೋವುಗಳು, ಅನ್ನ, ಹಣ, ಜೀವನವನ್ನೂ ಅಪಹರಿಸಿದರೆ ಅಂಧಕೂಪವೆಂಬ ನರಕದಲ್ಲಿ ಬೀಳುತ್ತಾರೆ.

೧೮-೧೯. ಮಧುರವಾದ ಪದಾರ್ಥಗಳನ್ನು ಮಾಡಿಕೊಂಡು ದೇವರಿಗಾಗಲಿ, ಸ್ನೇಹಿತರಿಗಾಗಲೀ, ಕೊಡದೆ ತಿನ್ನುತ್ತಾನೋ ಅವನು ಕೃಮಿಭೋಜನವೆಂಬ ನರಕದಲ್ಲಿ ಬೀಳುತ್ತಾನೆ.

೨೦. ಕಷ್ಟಬಾರದಿದ್ದರೂ ಯಾವನು ಚಿನ್ನ ಮೊದಲಾದುವನ್ನು ಕದಿಯುತ್ತಾನೋ ಅವನನ್ನು (ಬ್ರಾಹ್ಮಣ ಸ್ವತ್ತನ್ನು ಕದಿಯುವವನನ್ನೂ) ಸಂದಂಶವೆಂಬ ನರಕದಲ್ಲಿ ಹಾಕುತ್ತಾರೆ.

೨೧. ಯಾವನು ತನ್ನ ಹೊಟ್ಟೆಯನ್ನು ತುಂಬಿಕೊಳ್ಳುತ್ತಾ ಮತ್ತಾರನ್ನೂ ನೋಡುವುದೇ ಇಲ್ಲವೋ ಅವನನ್ನು ಕಾದ ಎಣ್ಣೆಯಿರುವ ಕುಂಭೀಪಾಕದಲ್ಲಿ ಹಾಕುತ್ತಾರೆ.

೨೨. ಹೆಂಗಸೆಂದೇ ತಿಳಿದು ತಾನು ಗಮಿಸಲು ಅನರ್ಹಳಾದವಳನ್ನೂ ರಮಿಸುತ್ತಾನೋ ಅವನನ್ನು ಕಾದ ಪ್ರತಿಮೆಯನ್ನು ಆಲಂಗಿಸುವಂತೆ ಮಾಡುತ್ತಾರೆ.

ಯೇ ಬಲಾದ್ವೇದಮರ್ಯಾದಾಂ ಲುಂಪಂತಿ ಸ್ವಬಲೋದ್ಧತಾಃ ।
ತೇ ವೈತರಿಣ್ಯಾಂ ಪತಿತಾ ಮಾಂಸಶೋಣಿತಭಕ್ಷಕಾಃ ॥ ೨೩ ॥

ವೃಷಲೀಂ ಯಃ ಸ್ತ್ರಿಯಂ ಕೃತ್ವಾ ತಯಾ ಗಾರ್ಹಸ್ಥ್ಯಮಾಚರೇತ್ ।
ಪೂಯೋದೇ ನಿಪತತ್ಯೇವ ಮಹಾದುಃಖಸಮನ್ವಿತಃ ॥ ೨೪ ॥

ಯೇ ದಂಭಾನಾಶ್ರಯನ್ತೇ ವೈ ಧೂರ್ತಾ ಲೋಕಸ್ಯ ವಂಚನೇ ।
ವೈಶಸೇ ನರಕೇ ಮೂಢಾಃ ಪತನ್ತಿ ಯಮತಾಡಿತಾಃ ॥ ೨೫ ॥

ಯೇ ಸವರ್ಣಾಂ ಸ್ತ್ರಿಯಂ ಮೂಢಾಃ ಪಾತಯನ್ತಿ ಸ್ವರೇತಸಃ ।
ರೇತಃಕುಲ್ಯಾಸು ತೇ ಪಾತ್ಯಾ ರೇತಃಪಾನೇಷು ತತ್ಪರಾಃ ॥ ೨೬ ॥

ಯೇ ಚೌರಾ ವಹ್ನಿದಾ ದುಷ್ಟಾ ಗರದಾ ಗ್ರಾಮಲುಂಠಕಾಃ ।
ಸಾರಮೇಯಾದನೇ ತೇ ವೈ ಪಾತ್ಯಂತೇ ಪಾತಕಾನ್ವಿತಾಃ ॥ ೨೭ ॥

ಕೂಟಸಾಕ್ಷ್ಯಂ ವದತ್ಯದ್ಧಾ ಪುರುಷಃ ಪಾಪಸಂಭೃತಃ ।
ಪರಕೀಯಂ ತು ದ್ರವ್ಯಂ ಯೋ ಹರತಿ ಪ್ರಸಭಂ ಬಲೀ ॥ ೨೮ ॥

---

೨೩. ಯಾರು ತನಗೆ ಬಲವಿದೆಯೆಂದು ವೇದದ ಧರ್ಮವನ್ನು ಉಲ್ಲಂಘಿಸು ತ್ತಾರೋ ಅವರು ವೈತರಣಿಯಲ್ಲಿ ಬೀಳುತ್ತಾರೆ. ಮತ್ತು ರಕ್ತ ಮಾಂಸಗಳನ್ನು ತಿನ್ನುತ್ತಾರೆ.

೨೪. ಶೂದ್ರ ಹೆಂಗಸನ್ನು ಇಟ್ಟುಕೊಂಡು ಸಂಸಾರಮಾಡಿದರೆ ಅವನು ಕೀವಿನ ಹೊಂಡದಲ್ಲಿ ಬೀಳುತ್ತಾನೆ.

೨೫. ಲೋಕವನ್ನು ವಂಚಿಸಲು ದಂಭಾಚಾರ ಹೊಂದಿರುವವರು ವೈಶಸ ವೆಂಬ ನರಕದಲ್ಲಿ ಬೀಳುತ್ತಾರೆ. ಮತ್ತು ಯಮಕಿಂಕರರು ಹೊಡೆಯುತ್ತಾರೆ.

೨೬. ಯಾವನು ಸವರ್ಣಳಾದ ಸ್ತ್ರೀಯಲ್ಲಿ ರಮಿಸುತ್ತಾನೋ ಅವನನ್ನು ರೇತಸ್ಸಿನ ಭಾವಿಯಲ್ಲಿ ತಳ್ಳಿ ಅದನ್ನೇ ಕುಡಿಯುವಂತೆ ಮಾಡುತ್ತಾರೆ.

೨೭. ಕಳ್ಳರು, ಬೆಂಕಿಹಾಕುವವರು, ದುಷ್ಟರು, ವಿಷಹಾಕುವವರು. ಊರನ್ನು ಲೂಟಿಮಾಡುವವರು, ಇವರನ್ನು ನರಕಕ್ಕೆ ಹಾಕಿ ನಾಯಿಗಳಿಂದ ತಿನ್ನಿಸುತ್ತಾರೆ.

೨೮-೨೯. ಯಾವನು ಸುಳ್ಳುಸಾಕ್ಷಿ ಹೇಳಿ ಪಾಪಿಯಾಗುತ್ತಾನೆಯೋ, ಪರರ ದ್ರವ್ಯವನ್ನು ಅಪಹರಿಸುತ್ತಾನೋ ಅವನನ್ನು ಅವೀಚಿಯೆಂಬ ನರಕದಲ್ಲಿ ತಲೆಕೆಳಕಾಗಿ

ಸೋಽವೀಚಿನರಕೇ ಪಾಪೀ ಹ್ಯವಾಗ್ವಕ್ತ್ರಃ ಪತತ್ಯಧಃ ।
ತತ್ರ ದುಃಖಂ ಮಹದ್ಭುಕ್ತ್ವಾ ಪಾಪಿಷ್ಠಾಂ ಯೋನಿಮಾವ್ರಜೇತ್ ॥ ೨೯ ॥

ಯೋ ನರೋ ರಸನಾಸ್ವಾದಾತ್ಸುರಾಂ ಪಿಬತಿ ಮೂಢಧೀಃ ।
ತಂ ಪಾತಯನ್ತಿ ಲೋಹಸ್ಯ ರಸಂ ಧರ್ಮಸ್ಯ ಕಿಂಕರಾಃ ॥ ೩೦ ॥

ಯೋ ಗುರೂನವಮನ್ಯೇತ ಸ್ವವಿದ್ಯಾಚಾರದರ್ಪಿತಃ ।
ಸ ಮೃತಃ ಪಾತ್ಯತೇ ಕ್ಷಾರನರಕೇಽಧೋಮುಖಃ ಪುಮಾನ್ ॥ ೩೧ ॥

ವಿಶ್ವಾಸಘಾತಂ ಕುರ್ವಂತಿ ಯೇ ನರಾ ಧರ್ಮನಿಸ್ಪೃಹಾಃ ।
ಶೂಲಪ್ರೋತೇ ತು ನರಕೇ ಪಾತ್ಯಂತೇ ಬಹುಯಾತನೇ ॥ ೩೨ ॥

ಪಿಶುನೋ ಯೋ ನರಾನ್ಸರ್ವಾನುದ್ವೇಜಯತಿ ವಾಕ್ಯತಃ ।
ದಂದಶೂಕೇ ಚ ಪತಿತೋ ದಂದಶೂಕೈಸ್ಸ ದಶ್ಯತೇ ॥ ೩೩ ॥

ಏವಂ ರಾಜನ್ನನೇಕೇ ವೈ ನರಕಾಃ ಪಾಪಕಾರಿಣಾಂ ।
ಪಾಪಂ ಕೃತ್ವಾ ಪ್ರಯಾಂತ್ಯೇತೇ ಪೀಡಾಂ ಯಾಂತಿ ಸುದಾರುಣಾಂ ॥ ೩೪ ॥

---

ಹಾಕುತ್ತಾರೆ. ಅಲ್ಲಿ ದುಃಖವನ್ನನುಭವಿಸಿದ ಮೇಲೆ ಪಾಪಿಷ್ಠವಾದ ಜನ್ಮಕ್ಕೆ ಹಾಕುತ್ತಾರೆ.

೩೦. ಯಾವನು ನಾಲಿಗೆಯ ಚಾಪಲ್ಯದಿಂದ ಹೆಂಡವನ್ನು ಕುಡಿಯುತ್ತಾನೆಯೋ ಅವನಿಗೆ ಕಬ್ಬಿಣವನ್ನು ಕರಗಿಸಿ ಯಮಕಿಂಕರರು ಬಾಯಲ್ಲಿ ಹುಯ್ಯುತ್ತಾರೆ.

೩೧. ಯಾವನು ತನ್ನ ವಿದ್ಯೆ ಆಚಾರಗಳಿಂದ ಹೆಮ್ಮೆಪಟ್ಟು ಗುರುಗಳನ್ನು ತಿರಸ್ಕರಿಸುತ್ತಾನೆಯೋ ಅವನನ್ನು ಕ್ಷಾರವುಳ್ಳ ನರಕದಲ್ಲಿ ತಲೆಕೆಳಗಾಗಿ ಹಾಕುತ್ತಾರೆ.

೩೨. ಯಾರು ಧರ್ಮವನ್ನು ಲಕ್ಷಿಸದೆ ವಿಶ್ವಾಸಘಾತಕತನಮಾಡುತ್ತಾರೆಯೋ ಅವರನ್ನು ಶೂಲಗಳಿರುವ ನರಕದಲ್ಲಿ ಹಾಕುತ್ತಾರೆ.

೩೩. ಚಾಡಿಕೋರನಾಗಿ ಜನಗಳನ್ನು ಕೋಪಗೊಳಿಸಿದರೆ ಅವನನ್ನು ಹಾವುಗಳಿರುವ ನರಕಕ್ಕೆ ಹಾಕಿ ಕಚ್ಚಿಸುತ್ತಾರೆ.

೩೪. ಈರೀತಿಯಾಗಿ ಪಾಪಿಗಳಿಗೆ ಬಗೆಬಗೆಯ ನರಕಗಳಿವೆ. ಪಾಪಿಗಳು ಈ ದುಷ್ಟ ನರಕಗಳಿಗೆ ನೂಕಲ್ಪಟ್ಟು ತೊಂದರೆಪಡಿಸುತ್ತಾರೆ.

ಯೈರ್ನ ಶ್ರುತಾ ರಾಮಕಥಾ ನ ಪರೋಪಕೃತಿಃ ಕೃತಾ ।
ತೇಷಾಂ ಸರ್ವಾಣಿ ದುಃಖಾನಿ ಭವಂತಿ ನರಕಾಂತರೇ ॥ ೩೫ ॥

ಅತ್ರ ಯಸ್ಯ ಸುಖಂ ಭೂಯಸ್ತಸ್ಯ ಸ್ವರ್ಗ ಇತೀರ್ಯತೇ ।
ಯೋ ದುಃಖಿನೋ।ರೋಗಯುತಾ ನರಕಸ್ಥಾ ಮಹೀಪತೇ ॥ ೩೬ ॥

॥ ಶೇಷ ಉವಾಚ ॥

ಏತಚ್ಛ್ರುತ್ವಾ ಮಹೀಪಾಲಃ ಕಂಪಮಾನಃ ಕ್ಷಣೇ ಕ್ಷಣೇ ।
ಪಪ್ರಚ್ಛ ಭೂಯಸ್ತಂ ವಿಪ್ರಂ ಸರ್ವಸಂಶಯನುತ್ತಯೇ ॥ ೩೭ ॥

ತತ್ತತ್ಪಾಪಸ್ಯ ಚಿಹ್ನಾನಿ ಕಥಯ ತ್ವಂ ಮಹಾಮುನೇ ।
ಕೇನ ಪಾಪೇನ ಕಿಂ ಚಿಹ್ನಂ ಭೂಲೋಕ ಉಪಜಾಯತೇ ॥ ೩೮ ॥

ಇತಿ ಶ್ರುತ್ವಾ ತು ತದ್ವಾಕ್ಯಂ ಮುನಿಃ ಪ್ರೋವಾಚ ಭೂಮಿಪಂ ।
ಶೃಣು ರಾಜನ್ಪ್ರವಕ್ಷ್ಯಾಮಿ ಚಿಹ್ನಾನಿ ಪಾಪಕಾರಿಣಾಂ ॥ ೩೯ ॥

---

೩೫. ಯಾರು ರಾಮಕಥೆಯನ್ನು ಕೇಳುವುದಿಲ್ಲವೋ ಪರೋಪಕಾರಮಾಡಿರುವುದಿಲ್ಲವೋ ಅವರಿಗೆ ನರಕದಲ್ಲಿ ಎಲ್ಲಾ ಬಗೆಯ ದುಃಖಗಳೂ ಉಂಟು.

೩೬. ಇಲ್ಲಿ ಯಾವನು ಸುಖವಾಗಿರುತ್ತಾನೋ ಅವನಿಗೆ ಸ್ವರ್ಗವೆಂದೂ, ದುಃಖಿಗಳೂ, ರೋಗಿಗಳೂ ಆದವರಿಗೆ ನರಕವೆಂದು ಹೇಳುತ್ತಾರೆ.

೩೭. ಇದನ್ನು ಕೇಳಿ ಶತ್ರುಘ್ನನು ನಡುಗುತ್ತಾ ಸಂಶಯನಿವಾರಕ್ಕೋಸ್ಕರ ಪುನಃ ಕೇಳಿದನು.

೩೮. ಆಯಾಯ ಪಾಪಗಳ ಗುರುತನ್ನು ಹೇಳು. ಭೂಲೋಕದಲ್ಲಿ ಯಾವ ಚಿಹ್ನೆಯಿಂದ ಯಾವ ಪಾಪಿಯೆಂದು ತಿಳಿಯಬಹುದು ?

೩೯. ಹೀಗೆಂದು ಕೇಳಲು ಋಷಿಯು ಎಲೈ ರಾಜನೇ, ಆಯಾಯ ಪಾಪ ಚಿಹ್ನೆಗಳನ್ನು ಹೇಳುತ್ತೇನೆ ಕೇಳು, ಎಂದನು.

॥ ಶೌನಕ ಉವಾಚ ॥

ಸುರಾಪಶ್ಯಾಮದಂತಸ್ಸ್ಯಾನ್ನರಕಾಂತೇ ಪ್ರಜಾಯತೇ ।
ಅಭಕ್ಷ್ಯಭಕ್ಷಕಾರೀ ತು ಜಾಯತೇ ಗುಲ್ಮಕೋದರಃ ॥ ೪೦ ॥

ಉದಕ್ಯಾ ವೀಕ್ಷಿತಂ ಭುಕ್ತ್ವಾ ಜಾಯತೇ ಕ್ರಿಮಿಲೋದರಃ ।
ಶ್ವಮಾರ್ಜಾರಾದಿಸಂಸ್ಪೃಷ್ಟಂ ಭುಕ್ತ್ವಾ ದುರ್ಗಂಧವಾನ್ಭವೇತ್ ॥ ೪೧ ॥

ಅನಿವೇದ್ಯ ಸುರಾದಿಭ್ಯೋ ಭುಂಜಾನೋ ಜಾಯತೇ ನರಃ ।
ಉದರೇ ರೋಗವಾನ್ದುಃಖೀ ಮಹಾರೋಗಪ್ರಪೀಡಿತಃ ॥ ೪೨ ॥

ಪರಾನ್ನವಿಘ್ನಕರಣಾದಜೀರ್ಣಮಭಿಜಾಯತೇ ।
ಮಂದೋದರಾಗ್ನಿರ್ಭವತಿ ಸತಿ ದ್ರವ್ಯೇ ಕದನ್ನದಃ ॥ ೪೩ ॥

ವಿಷದಶ್ಛರ್ದಿರೋಗೀಸ್ಯಾ ನ್ಮಾರ್ಗಹಾ ಪಾದರೋಗವಾನ್ ।
ಪಿಶುನೋನರಕಸ್ಯಾಂತೇ ಜಾಯತೇ ಕಾಸಶ್ವಾಸವಾನ್ ॥ ೪೪ ॥

---

೪೦-೪೧. ಶೌನಕನು ಹೇಳಿದನು :—ಹೆಂಡಕುಡುಕನು ಕಪ್ಪುಹಲ್ಲುಳ್ಳವನಾಗಿಯೂ, ಅಭಕ್ಷ್ಯಭಕ್ಷಕನು ಹೊಟ್ಟೆಶೂಲಿಯುಳ್ಳವನಾಗಿಯೂ ಮುಟ್ಟಾದವರ ನೋಡಿದುದನ್ನು ತಿಂದವನು ಶೂಲರೋಗವುಳ್ಳವನಾಗಿಯೂ, ನಾಯಿ ಬೆಕ್ಕುಗಳು ಮುಟ್ಟಿದುದನ್ನು ತಿಂದವನು ದುರ್ಗಂಧವುಳ್ಳವನಾಗಿಯೂ ಆಗುತ್ತಾನೆ.

೪೨. ದೇವರಿಗೆ ನೈವೇದ್ಯಮಾಡದೇ ತಿಂದರೆ ಹೊಟ್ಟೇನೋವೂ ದುಃಖವೂ ಸಹ ಉಂಟಾಗುತ್ತವೆ.

೪೩. ಪರರು ಊಟಮಾಡುವ ಅನ್ನಕ್ಕೆ ವಿಘ್ನಮಾಡಿದರೆ ಅಜೀರ್ಣರೋಗ ಬರುವುದು. ಹಣವಿದ್ದರೂ ಸರಿಯಾದ ಅನ್ನ ಹಾಕದಿದ್ದರೆ ಅಗ್ನಿಮಾಂದ್ಯ ಬರುತ್ತದೆ.

೪೪. ವಿಷಹಾಕಿದವನು ವಮನರೋಗವನ್ನೂ, ಮಾರ್ಗವನ್ನು ಹಾಳುಮಾಡುವವನು ಕಾಲಿನಲ್ಲಿ ರೋಗವುಳ್ಳವನೂ, ಚಾಡಿಕೋರನು ಗೂರಲು ಉಬ್ಬಸ ರೋಗವುಳ್ಳವನೂ, ಚಾಡಿಕೋರನು ಗೂರಲು ಉಬ್ಬಸ ರೋಗವುಳ್ಳವನೂ ಆಗುತ್ತಾರೆ.

ಧೂರ್ತೋಽಪಸ್ಮಾರರೋಗೀ ಸ್ಯಾಚ್ಛೂಲೀ ಚ ಪರತಾಪಕೃತ್ ।
ದಾವಾಗ್ನಿದಾಯಕಶ್ಚೈವ ರಕ್ತಾತಿಸಾರವಾನ್ಭವೇತ್ ॥ ೪೫ ॥

ಸುರಾಲಯಂ ಜಲಂ ವಾಪಿ ಶಕೃದ್ದುಷ್ಟಂ ಕರೋತಿ ಯಃ ।
ಗುದರೋಗೋ ಭವೇತ್ತಸ್ಯ ಪಾಪರೂಪಃ ಸುದಾರುಣಃ ॥ ೪೬ ॥

ಗರ್ಭಪಾತನಜಾ ರೋಗಾ ಯಕೃತ್ಪ್ಲೀಹಜಲೋದರಾಃ ।
ಪ್ರತಿಮಾಭಂಗಕಾರೀ ಚ ಅಪ್ರತಿಷ್ಠಶ್ಚ ಜಾಯತೇ ॥ ೪೭ ॥

ದುಷ್ಟವಾದೀ ಖಂಡಿತಸ್ಸ್ಯಾತ್ಖಲ್ವಾಟಃ ಪರನಿಂದಕಃ ।
ಸಭಾಯಾಂ ಪಕ್ಷಪಾತೀ ಚ ಜಾಯತೇ ಪಕ್ಷಘಾತವಾನ್ ॥ ೪೮ ॥

ಪರೋಕ್ತಹಾಸ್ಯಕೃತ್ಕಾಣಃ ಕುನಖೀ ವಿಪ್ರಹೇಮಹೃತ್ ।
ತುಂದೀ ವರೀತಾಮ್ರಚೌರಃ ಕಾಂಸ್ಯಹೃತ್ಕುಂಡರೀಕಿಕಃ ॥ ೪೯ ॥

ತ್ರಪುಹಾರೀ ಚ ಪುರುಷೋ ಜಾಯತೇ ಪಿಂಗಮೂರ್ಧಜಃ ।
ಸೀಸಹಾರೀ ಚ ಪುರುಷೋ ಜಾಯತೇ ಶೀರ್ಷರೋಗವಾನ್ ॥ ೫೦ ॥

---

೪೫. ಧೂರ್ತನು ಅಪಸ್ಮಾರಿಯೂ, ಪರರಿಗೆ ಕಷ್ಟಕೊಡುವವನು ಶೂಲ ರೋಗಿಯೂ, ಕಾಡಿಗೆ ಬೆಂಕಿ ಹಾಕುವವನು ರಕ್ತಾತಿಸಾರವುಳ್ಳವನಾಗಿಯೂಆಗುತ್ತಾರೆ

೪೬. ದೇವಸ್ಥಾನದಲ್ಲಿಯೂ, ನೀರುಗಳಲ್ಲಿಯೂ, ಹೇಸಿಗೆ ಮಾಡುವವನು ಗುದಯಲ್ಲಿ ರೋಗವುಳ್ಳವನಾಗಿ ಆಗುತ್ತಾನೆ.

೪೭. ಪ್ರತಿಮೆಗಳನ್ನು ಒಡೆದರೆ ಆಗರ್ಭಪಾತನದ ರೋಗಗಳೂ ಉದರ ರೋಗಗಳೂ ಉಂಟಾಗುತ್ತವೆ.

೪೮. ದುಷ್ಟಮಾತನಾಡುವವನು ಕುಂಟನಾಗಿಯೂ, ಪರನಿಂದಕನು ಬಟ್ಟೆ ತಲೆಯುಳ್ಳವನಾಗಿಯೂ, ಸಭೆಯಲ್ಲಿ ಪಕ್ಷಪಾತಮಾಡುವವನು ಪಾರ್ಶ್ವರೋಗವುಳ್ಳವನಾಗಿಯೂ, ಆಗುತ್ತಾನೆ.

೪೯. ಪರರ ಮಾತನ್ನು ಹಾಸ್ಯಮಾಡಿದರೆ ಕುರುಡನೂ, ಬ್ರಾಹ್ಮಣನ ಚಿನ್ನವನ್ನು ಕದ್ದರೆ ಹುಳುಕುಗುರುಳ್ಳವನೂ, ತಾಮ್ರದ ಕಳ್ಳನು ಹೊಟ್ಟೆದಪ್ಪನಾಗಿಯೂ, ಕಂಚನ್ನು ಕದ್ದವನು ಬೆಳ್ಳಗಾಗಿಯೂ ಆಗುತ್ತಾರೆ.

೫೦. ಹಿತ್ತಾಳೆ ಕದ್ದವನು, ಕೆಂಚಗೂದಲುಳ್ಳವನಾಗಿಯೂ, ಸೀಸಕದ್ದವನು ತಲೆನೋವುಳ್ಳವನೂ ಆಗುತ್ತಾನೆ.

ಘೃತಹಾರೀ ಚ ಪುರುಷೋ ಜಾಯತೇ ನೇತ್ರರೋಗವಾನ್ ।
ತ್ವಚಹಾರೀ ಚ ಪುರುಷೋ ಜಾಯತೇ ಮೇದಸಾ ವೃತಃ ॥ ೫೧ ॥

ಮಧುಚೌರಸ್ತು ಪುರುಷೋ ಜಾಯತೇ ಬಸ್ತಿಗಂಧವಾನ್ ।
ಲೋಹಹಾರೀ ಚ ಪುರುಷೋ ಬರ್ಬರಾಂಗಃ ಪ್ರಜಾಯತೇ ॥ ೫೨ ॥

ತೈಲಚೌರ್ಯೇಣ ಭವತಿ ನರಃ ಕಂಡ್ವಾತಿಪೀಡಿತಃ ।
ಆಮಾನ್ನಹರಣಾಚ್ಚೈವ ದಂತಹೀನಃ ಪ್ರಜಾಯತೇ ॥ ೫೩ ॥

ಪಕ್ವಾನ್ನಹರಣಾಚ್ಚೈವ ಜಿಹ್ವಾರೋಗಯುತೋ ಭವೇತ್ ।
ಮಾತೃಗಾಮೀ ಚ ಪುರುಷೋ ಜಾಯತೇ ಲಿಂಗವರ್ಜಿತಃ ॥ ೫೪ ॥

ಗುರುಜಾಯಾಭಿಗಮನಾನ್ಮೂತ್ರಕೃಚ್ಛ್ರಃ ಪ್ರಜಾಯತೇ ।
ಸ್ವಸುತಾಗಮನೇ ಚೈವ ರಕ್ತಕುಷ್ಠಃ ಪ್ರಜಾಯತೇ ॥ ೫೫ ॥

ಭಗಿನೀಗಮನೇ ಚೈವ ಪೀತಕುಷ್ಠಃ ಪ್ರಜಾಯತೇ ।
ಭ್ರಾತೃಭಾರ್ಯಾಭಿಗಮನೇ ಗುಲ್ಮಕುಷ್ಠಃ ಪ್ರಜಾಯತೇ ॥ ೫೬ ॥

---

೫೧. ತುಪ್ಪ ಕದ್ದವನು ಕಣ್ಣುರೋಗವುಳ್ಳವನೂ, ಚರ್ಮಕದ್ದವನು ಕೊಬ್ಬಿನ ರೋಗವುಳ್ಳವನಾಗಿಯೂ ಆಗುತ್ತಾರೆ.

೫೨. ಜೇನನ್ನು ಕದ್ದವನು ಹೊಟ್ಟೆಯಲ್ಲಿ ದುರ್ಗಂಧವುಳ್ಳವನಾಗಿಯೂ, ಕಬ್ಬಿಣ ಕದ್ದವನು ದಪ್ಪ ದೇಹವುಳ್ಳವನಾಗಿಯೂ ಆಗುತ್ತಾನೆ.

೫೩. ಎಣ್ಣೆ ಕದ್ದರೆ ತುರಿಕಜ್ಜಿಯೂ, ಅಕ್ಕಿ ಮುಂತಾದುವನ್ನು ಕದ್ದರೆ ಹಲ್ಲಿಲ್ಲದವನೂ ಆಗುತ್ತಾನೆ.

೫೪. ಅಡಿಗೆಮಾಡಿದ ಅನ್ನವನ್ನು ಕದ್ದರೆ ನಾಲಿಗೆ ರೋಗಿಯೂ, ತಾಯಿಯಲ್ಲಿ ಗಮಿಸಿದರೆ ಶಿಶ್ನವಿಲ್ಲದವನೂ ಆಗುತ್ತಾರೆ.

೫೫. ಗುರುವಿನ ಹೆಂಡತಿಯಲ್ಲಿ ರಮಿಸಿದರೆ ಮೂತ್ರದ ಕಲ್ಲುರೋಗಿಯೂ, ತನ್ನ ಮಗಳಲ್ಲಿ ರಮಿಸಿದರೆ ತೊನ್ನುಳ್ಳವನೂ ಆಗುತ್ತಾನೆ.

೫೬. ಸೋದರೀ ಗಮನಮಾಡಿದರೆ ಬಿಳಿತೊನ್ನುಂಟಾಗುತ್ತದೆ. ಅಣ್ಣ ತಮ್ಮಂದಿರ ಹೆಂಡತಿಯಲ್ಲಿ ಗಮಿಸಿದರೆ ಗುಲ್ಮಕುಷ್ಠವುಂಟಾಗುತ್ತದೆ.

ಸ್ವಾಮಿಗನ್ಯಾದಿಗಮನೇ ಜಾಯತೇ ದದ್ರುಮಂಡಲಂ ।
ವಿಶ್ವಸ್ತಭಾರ್ಯಾಗಮನೇ ಗಜಚರ್ಮಾ ಪ್ರಜಾಯತೇ ॥ ೫೭ ॥

ಪಿತೃಷ್ವಸೃಭಿಗಮನೇ ದಕ್ಷಿಣಾಂಗೇ ವ್ರಣೀ ಭವೇತ್ ।
ಮಾತುಲಾನ್ಯಾಸ್ತು ಗಮನೇ ವಾಮಾಂಗೇ ವ್ರಣವಾನ್ಭವೇತ್ ॥ ೫೮ ॥

ಪಿತೃವ್ಯಪತ್ನೀಗಮನೇ ಕಟಿಕುಷ್ಠಃ ಪ್ರಜಾಯತೇ ।
ಮಿತ್ರಭಾರ್ಯಾಭಿಗಮನೇ ಮೃತಭಾರ್ಯಃ ಪ್ರಜಾಯತೇ ॥ ೫೯ ॥

ಸ್ವಗೋತ್ರಸ್ತ್ರೀಪ್ರಸಂಗೇನ ಜಾಯತೇ ಚ ಭಗಂಧರಃ ।
ತಪಸ್ವಿನೀಪ್ರಸಂಗೇನ ಪ್ರಮೇಹೋ ಜಾಯತೇ ನರೇ ॥ ೬೦ ॥

ಶ್ರೋತ್ರಿಯಸ್ತ್ರೀಪ್ರಸಂಗೇನ ಜಾಯತೇ ನಾಸಿಕಾವ್ರಣೀ ।
ದೀಕ್ಷಿತಸ್ತ್ರೀಪ್ರಸಂಗೇನ ಜಾಯತೇ ದುಷ್ಟರಕ್ತಸೃಕ್ ॥ ೬೧ ॥

---

೫೭. ಸ್ವಾಮಿಯು ರಮಿಸುವವಳಲ್ಲಿ ರಮಿಸಿದರೆ, ದದ್ರುಕುಷ್ಠವೆಂಬ ಕುಷ್ಠ ರೋಗವೂ, ನಂಬಿದವರ ಹೆಂಡಿರಲ್ಲಿ ಪ್ರವೇಶಿಸಿದರೆ ಗಜಚರ್ಮ (ಆನೆಕಾಲು) ಎಂಬ ರೋಗವೂ ಬರುತ್ತದೆ.

೫೮. ಸೋದರತ್ತೆಯಲ್ಲಿ ರಮಿಸಿದರೆ ಬಲಗಡೆ ಹುಣ್ಣೇಳುತ್ತದೆ. ಸೋದರ ಮಾವನ ಹೆಂಡತಿಯಲ್ಲಿ ರಮಿಸಲು ಎಡಗಡೆ ವ್ರಣವೂ ಉಂಟಾಗುತ್ತದೆ.

೫೯. ತಂದೆಯ ಸೋದರರ ಹೆಂಡಿರಲ್ಲಿ ರಮಿಸಲು ಸೊಂಟದಲ್ಲಿ ಕುಷ್ಠವುಳ್ಳವನೂ ಮಿತ್ರಭಾರ್ಯೆಯರಲ್ಲಿ ರಮಿಸಿದರೆ ಹೆಂಡತಿ ಸಾಯುವವನಾಗಿಯೂ ಆಗುತ್ತಾನೆ.

೬೦. ಸ್ವಗೋತ್ರದ ಹೆಂಗಸನ್ನು ರಮಿಸಿದರೆ ಭಗಂದರ ರೋಗ ಬರುತ್ತದೆ. ತಪಸ್ವಿನಿಯರಲ್ಲಿ ಹೋಗಲು ಪ್ರಮೇಹವುಂಟಾಗುತ್ತವೆ.

೬೧. ಶ್ರೋತ್ರಿಯರ ಸ್ತ್ರೀಯಲ್ಲಿ ಗಮಿಸಿದರೆ ಮೂಗಿನಲ್ಲಿ ಹುಣ್ಣೂ, ದೀಕ್ಷಿತನ ಸ್ತ್ರೀಯಲ್ಲಿಗಮಿಸಿದರೆ ಕೆಟ್ಟರಕ್ತ ಸೋರಿಸುವವನೂ ಆಗುತ್ತಾನೆ.

ಸ್ವಜಾತಿಜಾಯಾಗಮನೇ ಜಾಯತೇ ಹೃದಯವ್ರಣೀ ।
ಜಾತ್ಯುನ್ನತಸ್ತ್ರೀಗಮನೇ ಜಾಯತೇ ಮಸ್ತಕವ್ರಣೀ ॥ ೬೨ ॥

ಪಶುಯೋನೌ ಚ ಗಮನಾನ್ಮೂತ್ರಘಾತಃ ಪ್ರಜಾಯತೇ ।
ಏತೇ ದೋಷಾ ನರಾಣಾಂ ಸ್ಯುರ್ನರಕಾಂತೇ ನ ಸಂಶಯಃ ॥ ೬೩ ॥

ಸ್ತ್ರೀಣಾಮಪಿ ಭವಂತ್ಯೇತೇ ತತ್ತತ್ಪುರುಷಸಂಗಮಾತ್ ।
ಏವಂ ರಾಜರ್ಷೇ ಹಿ ಚಿಹ್ನಾನಿ ಕೀರ್ತಿತಾನಿ ಸುಪಾಪಿನಾಂ ॥ ೬೪ ॥

ದಾನಪುಣ್ಯಪ್ರಸಂಗೇನ ತೀರ್ಥಾದಿಕ್ರಿಯಯಾ ತಥಾ ।
ರಾಮಚರಿತ್ರ ಸಂಶ್ರುತ್ಯಾ ತಪಸಾ ವಾ ಕ್ಷಯಂ ವ್ರಜೇತ್ ॥ ೬೫ ॥

ಸರ್ವೇಷಾಮುಪ್ಯುಪಾಯಾನಾಂ ಹರಿಕೀರ್ತಿಧುನೀ ನೃಣಾಂ ।
ಕ್ಷಾಲಯೇತ್ಪಾಪಿನಾಂ ಪಾಪಂ ನಾತ್ರ ಕಾರ್ಯಾ ವಿಚಾರಣಾ ॥ ೬೬ ॥

---

೬೨. ತನ್ನ ಜಾತಿಯವನ ಹೆಂಡತಿಯಲ್ಲಿ ರಮಿಸಲು ಹೃದಯದಲ್ಲಿ ಹುಣ್ಣೂ, ತನ್ನ ಜಾತಿಗಿಂತ ಉನ್ನತಜಾತಿಯ ಸ್ತ್ರೀಯರಲ್ಲಿ ರಮಿಸಲು ತಲೆಯಲ್ಲಿ ಹುಣ್ಣೂ ಸಹ ಉಂಟಾಗುತ್ತವೆ.

೬೩. ಪಶುಗಳಲ್ಲಿ ಗಮಿಸಲು ಮೂತ್ರಘಾತರೋಗವೂ, ಬರುತ್ತದೆ. ಈ ರೋಗಗಳು ನರಕವನ್ನು ಅನುಭವಿಸಿದ ನಂತರ ಪುನಃ ಜನ್ಮವೆತ್ತಿದಾಗ ಬರುತ್ತವೆ.

೬೪. ಸ್ತ್ರೀಯರಿಗೂ ಆಯಾಯ ಪುರುಷರನ್ನು ಸಂಗಮಮಾಡೋಣದರಿಂದ ಮೇಲೆ ಹೇಳಿದ ರೋಗಗಳು ಬರುತ್ತವೆ. ಎಲೈ ರಾಜನೇ ಈರೀತಿ ಪಾಪಿಗಳ ಗುರುತುಗಳನ್ನು ಹೇಳಿರುವೆನು.

೬೫. ಮೇಲೆ ಹೇಳಿದ ಈ ರೋಗಗಳು ದಾನಮಾಡುವುದರಿಂದಲೂ, ತೀರ್ಥಯಾತ್ರಾದಿಗಳಿಂದಲೂ, ಶ್ರೀರಾಮಚರಿತ್ರೆಯ ಶ್ರವಣದಿಂದಲೂ, ತಪಸ್ಸುಮಾಡುವುದರಿಂದಲೂ, ನಾಶವಾಗುತ್ತವೆ.

೬೬. ಎಲ್ಲಾ ಉಪಾಯಗಳಿಗಿಂತಲೂ ಹರಿಕೀರ್ತನವೆಂಬ ಉಪಾಯವೇ ಪಾಪವನ್ನು ತೊಳೆದುಕೊಳ್ಳಲು ಉತ್ತಮವಾದ ಸುಲಭೋಪಾಯವು ಇದಕ್ಕಿಂತ ಬೇರೆ ಯಾವುದೂ ಇಲ್ಲವು.

ಯಶ್ಚಾವಮನ್ಯೇತ ಹರಿಂ ತಂ ಗಂಗಾ ನ ಪುನಾತಿ ಹಿ ।
ತೀರ್ಥಾನ್ಯಪಿ ಸುಪುಣ್ಯಾನಿ ಪವಿತುಂ ನ ಕ್ಷಮಾಣಿ ತಂ ॥ ೬೭ ॥

ಹಸತೇ ಕೀರ್ತ್ಯಮಾನಂ ಯಶ್ಚರಿತ್ರಂ ಜ್ಞಾನದುರ್ಬಲಃ ।
ನ ತಸ್ಯ ನರಕಾನ್ಮುಕ್ತಿಃ ಕಲ್ಪಾನ್ತೇಽಪಿ ಭವಿಷ್ಯತಿ ॥ ೬೮ ॥

ಯಾಹಿ ರಾಜನ್ನಿಮೋಕ್ಷಾರ್ಥಂ ಹಯಸ್ಯಾನುಚರೈಸ್ಸಹ ।
ಶ್ರಾವಯ ಶ್ರೀಶಚರಿತಂ ಯತೋ ವಾಹಗತಿರ್ಭವೇತ್ ॥ ೬೯ ॥

॥ ಶೇಷ ಉವಾಚ ॥

ಇತಿ ಶ್ರುತ್ವಾ ಪ್ರಹೃಷ್ಟೋಽಭೂಚ್ಛತ್ರುಘ್ನಃ ಪರವೀರಹಾ ।
ಪ್ರಣಮ್ಯ ತಂ ಪರಿಕ್ರಮ್ಯ ಯಯೌ ಸೇವಕಸಂಯುತಃ ॥ ೭೦ ॥

ತತ್ರ ಗತ್ವಾ ಸ ಹನುಮಾನ್ ಹಯವರ್ಯಸ್ಯ ಪಾರ್ಶ್ವತಃ ।
ಉವಾಚ ರಾಮಚರಿತಂ ಮಹಾದುರ್ಗತಿನಾಶನಂ ॥ ೭೧ ॥

---

೬೭. ಯಾವನು ಹರಿಯನ್ನು ಅವಮಾನಮಾಡುವನೋ ಅಂತಹ ಪುರುಷನನ್ನು ಗಂಗೆಯೂ ಪವಿತ್ರಮಾಡಲಾರಳು. ತೀರ್ಥಗಳೂ ಸಹ ಅವನನ್ನು ಪವಿತ್ರಮಾಡಲಾರವು.

೬೮. ಹರಿಚರಿತ್ರೆಯನ್ನು ಹೇಳುತ್ತಿರಲು ಯಾವನಾದರೂ ವಷ್ಟನು ಹಾಸ್ಯಮಾಡಿದರೆ ಅವನಿಗೆ ಕಲ್ಪಾಂತದಲ್ಲಿಯೂ ಕೂಡ ನರಕದಿಂದ ಮುಕ್ತಿಯೇ ಇಲ್ಲವು.

೬೯. ಎಲೈ ರಾಜನೇ ಹೋಗು ಅಲ್ಲಿ ರಾಮನ ಚರಿತ್ರೆಯನ್ನು ಹೇಳು. ಅದರಿಂದ ಕುದುರೆಯ ಗಮನವುಂಟಾಗುತ್ತದೆ.

೭೦. ಇದನ್ನು ಕೇಳಿ ಸಂತೋಷಗೊಂಡ ಶತ್ರುಘ್ನನು ಆ ಋಷಿಯನ್ನು ನಮಸ್ಕರಿಸಿ ಸೇವಕರೊಡನೆ ಹೊರಟನು.

೭೧. ಹನುಮಂತನು ಅಲ್ಲಿಗೆ ಹೋಗಿ ಕುದುರೆಯ ಹತ್ತಿರ ದುರ್ಗತಿನಾಶಕವಾದ ರಾಮಚರಿತ್ರೆಯನ್ನು ಹೇಳಿದನು.

ಯಾಹಿ ದೇವ ವಿಮಾನಂ ಸ್ವಂ ರಾಮಕೀರ್ತನಪುಣ್ಯತಃ ।
ಸ್ವೈರಂ ಚರಸ್ವ ಲೋಕೇ ತ್ವಂ ಮುಕ್ತೋ ಭವಕುಯೋನಿತಃ ॥ ೭೨ ॥

ಇತಿ ವಾಕ್ಯಂ ಸಮಾಕರ್ಣ್ಯ ಶತ್ರುಘ್ನೋ ಯಾವದಾಸ್ಥಿತಃ ।
ತಾವದ್ದದರ್ಶವಿಮಲಂ ದೇವಂ ವೈಮಾನಿಕಂ ವರಂ ॥ ೭೩ ॥

ಸ ಉವಾಚ ಹ ಪೂತೋಽಹಂ ರಾಮಕೀರ್ತನಸಂಶ್ರುತೇಃ ।
ಯಾಮಿ ಸ್ವಂ ಭವನಂ ರಾಜನ್ನಾಜ್ಞಾಪಯ ಮಹಾಮತೇ ॥ ೭೪ ॥

ಇತ್ಯುಕ್ತ್ವಾ ಪ್ರಯಯೌ ದೇವೋ ವಿಮಾನೇ ಸ್ವೇ ಪರಿಸ್ಥಿತಃ ।
ತದಾ ವಿಸ್ಮಯಮಾಪುಸ್ತೇ ಶತ್ರುಘ್ನೇನ ಸಹಾನುಗಾಃ ॥ ೭೫ ॥

ತತೋ ವಾಹೋ ವಿನಿರ್ಮುಕ್ತೋ ಭೂತಲಾದ್ಗಾತ್ರಸ್ತಂಭನಾತ್ ।
ಯಯೌ ತದ್ವಿಪಿನಂ ಸರ್ವಂ ಭ್ರಮನ್ಪಕ್ಷಿಸಮಾಕುಲಂ ॥ ೭೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಲಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಹಯಮುಕ್ತಿರ್ನಾಮ ಅಷ್ಟಾಚತ್ವಾರಿಂಶೋಽಧ್ಯಾಯಃ

---

೭೨-೭೩. ರಾಮಕೀರ್ತನೆಯ ಪುಣ್ಯದಿಂದ ದೇವವಿಮಾನವಲ್ಲಿ ಹತ್ತಿಯೋಗು. ನಿನ್ನ ಲೋಕದಲ್ಲಿ ಯಥೇಚ್ಛವಾಗಿ ಸಂಚರಿಸು. ಕೆಟ್ಟ ಜನ್ಮದಿಂದ ಪಾರಾಗು. ಎಂದ ಮಾತನ್ನು ಕೇಳಿ ಶತ್ರುಘ್ನನಿರುವಾಗಲೇ ಉತ್ತಮವಾದ ದೇವವಿಮಾನವನ್ನು ಕಂಡನು. ಅದರಲ್ಲಿ ಈತನು ಕುಳಿತಿದ್ದನು.

೭೪. ರಾಮಕೀರ್ತನವನ್ನು ಕೇಳಿದುದರಿಂದ ಪವಿತ್ರನಾದೆ. ನನ್ನ ಸ್ಥಳಕ್ಕೆ ಹೋಗಲು ನನಗೆ ಅಪ್ಪಣೆಕೊಡೆಂದು ಶತ್ರುಘ್ನನನ್ನು ಕುರಿತು ಹೇಳಿದನು.

೭೫. ಇಂತೆಂದು ಹೇಳಿ ಆ ದೇವನು ವಿಮಾನದಲ್ಲಿ ಕುಳಿತು ಹೊರಟು ಹೋದನು. ಶತ್ರುಘ್ನನೂ ಅವನ ಕಡೆಯವರೂ ಆಶ್ಚರ್ಯಪಟ್ಟರು.

೭೬. ಅನಂತರ ಭೂಮಿಯಲ್ಲಿಟ್ಟ ನಿಶ್ಚಲತೆಯಿಂದ ಕುದುರೆಯು ಬಿಡಲ್ಪಟ್ಟಿತು. ಪಕ್ಷಿಗಳಿಂದ ಕೂಡಿದ ಆ ಕಾಡನ್ನು ಕುದುರೆಯು ಸುತ್ತಿತು.

ಇಂತು ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಹಯಮುಕ್ತಿಯೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

---

## ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕೋನಪಂಚಾಶತ್ತಮೋಽಧ್ಯಾಯಃ

---

॥ ಶೇಷ ಉವಾಚ ॥

ಮಾಸಾಸ್ಸಪ್ತಾಭವಂಸ್ತಸ್ಯ ಹಯವರ್ಯಸ್ಯ ಹೇಲಯಾ ।
ಚರತೋ ಭಾರತಂ ವರ್ಷಮನೇಕನೃಪಪೂರಿತಂ ॥ ೧ ॥

ಸ ಪೂಜಿತೋ ಭೂಪವರ್ಯೈಃ ಪರೀತ್ಯ ವರಭಾರತಂ ।
ಪರಿವೃತೋ ವೀರವರ್ಯೈಃ ಶತ್ರುಘ್ನಾದಿಭಿರುದ್ಭಟೈಃ ॥ ೨ ॥

ಸ ಬಭ್ರಾಮ ಬಹೂನ್ದೇಶಾನ್ ಹಿಮಾಲಯಸಮೀಪತಃ ।
ನ ಕೋಽಪಿ ತಂ ನಿಜಗ್ರಾಹ ಹಯಂ ರಾಮಬಲಂ ಸ್ಮರನ್ ॥ ೩ ॥

---

### ನಲವತ್ತೊಂಭತ್ತನೆಯ ಅಧ್ಯಾಯವು.

೧. ಅನೇಕ ರಾಜರಿಂದ ಕೂಡಿದ ಭಾರತವರ್ಷವನ್ನು ಸುತ್ತುತ್ತಿರಲು ಹೀಗೆ ಆ ಕುದುರೆ ಬಿಟ್ಟು ಏಳು ತಿಂಗಳುಗಳು ಕಳೆದುವು.

೨. ಶತ್ರುಘ್ನಾದಿಗಳಿಂದ ರಕ್ಷಿಸಲ್ಪಟ್ಟ ಆ ಕುದುರೆಯು ಎಲ್ಲಾ ಕಡೆಯಲ್ಲೂ ಎಲ್ಲಾ ರಾಜರಿಂದಲೂ ಪೂಜಿಸಲ್ಪಟ್ಟಿತು.

೩. ಹಿಮಾಲಯದ ಬಳಿ ಬಹು ದೇಶಗಳನ್ನು ಸುತ್ತಿತು. ರಾಮನ ಶಕ್ತಿಯನ್ನು ಸ್ಮರಿಸಿಕೊಂಡು ಒಬ್ಬರೂ ಅದನ್ನು ಹಿಡಿಯಲಿಲ್ಲ.

ಅಂಗವಂಗಕಳಿಂಗಾನಾಂ ರಾಜಭಿಸ್ಸಂಸ್ತುತೋ ಹಯಃ ।
ಜಗಾಮ ನಗರೇ ರಾಜ್ಞಃ ಸುರಥಸ್ಯ ಮನೋಹರೇ ॥ ೪ ॥

ಕುಂಡಲಂ ನಾಮ ನಗರಮದಿತೇರ್ಯತ್ರ ಕುಂಡಲಂ ।
ಕರ್ಣಯೋಃ ಪತಿತಂ ಭೂಮೌ ಹರ್ಷಭಯಸುಕಂಪಯೋಃ ॥ ೫ ॥

ಯತ್ರ ಧರ್ಮವ್ಯತಿಕ್ರಾಂತಿಂ ನ ಕರೋತಿ ಕದಾಪಿ ಸ ।
ಶ್ರೀರಾಮಸ್ಮರಣಂ ಪ್ರೇಮ್ಣಾ ಕರೋತಿ ಜನತಾನ್ವಹಂ ॥ ೬ ॥

ಅಶ್ವತ್ಥಾನಾಂ ತು ಯತ್ರಾರ್ಚಾ ತುಲಸ್ಯಾಃ ಪ್ರತ್ಯಹಂ ನೃಭಿಃ ।
ಕ್ರಿಯತೇ ರಘುನಾಥಸ್ಯ ಸೇವಕೈಃ ಪಾಪವರ್ಜಿತೈಃ ॥ ೭ ॥

ಯತ್ರ ದೇವಾಲಯಾ ರಮ್ಯಾ ರಾಘವಪ್ರತಿಮಾಯುತಾಃ ।
ಪೂಜ್ಯಂತೇ ಪ್ರತ್ಯಹಂ ಶುದ್ಧಚಿತ್ತೈಃ ಕಪಟವರ್ಜಿತೈಃ ॥ ೮ ॥

ವಾಚಿ ನಾಮ ಹರೇರ್ಯತ್ರ ನ ವೈ ಕಲಹಸಂಕಥಾ ।
ಹೃದಿ ಧ್ಯಾನಂ ತು ತಸ್ಯೈವ ನ ಚ ಕಾಮಫಲಸ್ಮೃತಿಃ ॥ ೯ ॥

---

೪. ಅಂಗ, ವಂಗ, ಕಳಿಂಗಗಳ ರಾಜರು ಆ ಕುದುರೆಯನ್ನು ಗೌರವಿಸಿದರು. ಹಾಗೆಯೇ ಮುಂದೆ ಹೋಗುತ್ತಾ ಸುರಥನ ದೇಶಕ್ಕೆ ಹೋಯಿತು.

೫. ಅದಿತಿಯ ಓಲೆಗಳು ಕೆಳಕ್ಕೆ ಬಿದ್ದುದರಿಂದ ಆ ಪಟ್ಟಣಕ್ಕೆ ಕುಂಡಲ ನಗರವೆಂದು ಹೆಸರು. ಅದು ಹರ್ಷಭಯಗಳಿಗೆ ಆಶ್ರಯವಾದ ಜಾಗವು.

೬. ಅಲ್ಲಿನ ಮನುಷ್ಯರು ಧರ್ಮವನ್ನು ಮೀರುತ್ತಲೇ ಇರಲಿಲ್ಲ. ಮತ್ತು ಯಾವಾಗಲೂ ಶ್ರೀರಾಮಸ್ಮರಣೆಯನ್ನು ಮಾಡುವರಾಗಿದ್ದರು.

೭. ಅಲ್ಲಿರುವ ರಾಮಭಕ್ತರು ಯಾವಾಗಲೂ, ಅಶ್ವತ್ಥಪೂಜೆಯನ್ನೂ ತುಲಸಿಯ ಪೂಜೆಯನ್ನೂ ಮಾಡುತ್ತಾರೆ.

೮. ಅಲ್ಲಿರುವ ದೇವಸ್ಥಾನಗಳಲ್ಲೆಲ್ಲಾ ರಾಮನ ಪ್ರತಿಮೆಗಳಿವೆ. ಅದನ್ನು ಕಪಟವಿಲ್ಲದ ಶುದ್ಧಚಿತ್ತದಿಂದ ಅಲ್ಲಿನವರು ಪೂಜಿಸುತ್ತಾರೆ.

೯. ಬಾಯಲ್ಲಿ ಯಾವಾಗಲೂ ಎಲ್ಲರೂ ರಾಮಜಪವನ್ನೇ ಮಾಡುವರು. ಜಗಳದ ಸುದ್ದಿಯೇ ಇಲ್ಲ. ಹೃದಯದಲ್ಲಿಯೂ ಆ ರಾಮನ ಧ್ಯಾನವೇ. ಫಲಾಪೇಕ್ಷೆಯಿಲ್ಲ.

**ದೇವನಂ ಯತ್ರ ರಾಮಸ್ಯ ನಾಮಾರ್ಣಭಿಃ ಪ್ರೀತದೇಹಿನಾಂ ।**
**ನ ಜಾತುಚಿನ್ನೃಣಾಮಸ್ತಿ ಸಪ್ತವ್ಯಸನಪೋಷಿಣಾಂ ॥ ೧೦ ॥**

**ಯಸ್ಮಿನ್ವಸತಿ ಧರ್ಮಾತ್ಮಾ ಸುರಥಃ ಸತ್ಯನಾಸ್ಥಲೀ ।**
**ರಘುನಾಥಪದಸ್ಮಾರಹೃಷ್ಟಚಿತ್ತಃ ಪರೋಽಸ್ಮಗಃ ॥ ೧೧ ॥**

**ಕಿಂ ವರ್ಣಯಾಮಿ ರಾಮಸ್ಯ ಸೇವಕಂ ಸುರಥಂ ನೃಪಂ ।**
**ಯಸ್ಯಾಶೇಷಗುಣಾ ಭೂಮೌ ವಿಸ್ತೃತಾಃ ಪಾವಯಂತ್ಯಘಂ ॥ ೧೨ ॥**
**ಸೇವಕಾಸ್ತಸ್ಯ ಭೂಪಸ್ಯ ಪರ್ಯಟಂತಃ ಕದಾಚನ ।**
**ಅಪಶ್ಯನ್ ಹಯಮೇಧಸ್ಯ ಹಯಂ ಚಂದನಚರ್ಚಿತಂ ॥ ೧೩ ॥**

**ತೇ ದೃಷ್ಟ್ವಾ ವಿಸ್ಮಯಂ ಪ್ರಾಪ್ತಾ ಹಯಪತ್ರಮಲೋಕಯನ್ ।**
**ಸ್ಪಷ್ಟಾಕ್ಷರಸಮಾಯುಕ್ತಂ ಚಂದನಾದಿಕಚರ್ಚಿತಂ ॥ ೧೪ ॥**

**ಜ್ಞಾತ್ವಾ ರಾಮೇಣ ಸಂಮುಕ್ತಂ ಹಯಂ ನೇತ್ರಮನೋಹರಂ ।**
**ಹೃಷ್ಟಾ ರಾಜ್ಞೇ ಸಭಾಸ್ಥಾಯ ಕಥಯಾಮಾಸುರುತ್ಸುಕಾಃ ॥ ೧೫ ॥**

---

೧೦. ಅಲ್ಲಿರುವ ಪುಣ್ಯಾತ್ಮರಿಗೆ ರಾಮನಾಮವೆಂಬುದೇ ಆಟ. ಅಲ್ಲಿರುವವರಿಗೆ ಸಪ್ತವ್ಯಸನಗಳೆಂಬುದೇ ಇಲ್ಲ.

೧೧. ಆ ಊರಿನಲ್ಲಿ ಸುರಥನೆಂಬ ಬಲಿಷ್ಠನಾದ ರಾಜನು ವಾಸಮಾಡುತ್ತಿದ್ದನು. ಅವನು ರಾಮಸ್ಮರಣೆಯಿಂದ ತಾನೂ ಸಂತೋಷಪಡುತ್ತಾ ಪರರನ್ನು ಸಂತೋಷಪಡಿಸುತ್ತಿದ್ದನು.

೧೨. ರಾಮಸೇವಕನಾದ ಸುರಥನನ್ನು ಎಷ್ಟೆಂದು ವರ್ಣಿಸಲಿ! ಅವನ ಗುಣಗಳು ಭೂಮಿಯಲ್ಲಿ ಹರಡಿಕೊಂಡು ಜನಗಳನ್ನು ಪಾವನಮಾಡುತ್ತಿವೆ.

೧೩. ಆ ರಾಜನ ಸೇವಕರು ದೇಶದಲ್ಲಿ ಸುತ್ತುತ್ತಿರುವಾಗ ರಾಮನ ಯಜ್ಞದ ಕುದುರೆಯನ್ನು ಕಂಡರು.

೧೪. ಅವರು ಕುದುರೆಯ ಹಣೆಯಲ್ಲಿರುವ ಆ ತಗಡನ್ನೂ ಅದರಲ್ಲಿರುವ ಸ್ಪಷ್ಟಾಕ್ಷರವನ್ನೂ ನೋಡಿ ಆಶ್ಚರ್ಯಪಟ್ಟರು.

೧೫. ಆ ಕುದುರೆಯು ರಾಮನದೆಂದು ಸಂತೋಷದಿಂದ ದೊರೆಗೆ ಹೇಳಿದರು.

ಸ್ವಾಮಿನ್ನಯೋಧ್ಯಾನಗರೀಪತಿಸ್ತಸ್ಯಾಸ್ತು ರಾಘವಃ ।
ಹಯಮೇಧಕ್ರತೌ ಯೋಗ್ಯೋ ಹಯೋ ಮುಕ್ತಃ ಪರಿಭ್ರಮನ್ ॥ ೧೬ ॥

ಸ ತೇ ಪುರಸ್ಯ ನಿಕಟೇ ಪ್ರಾಪ್ತಃ ಸೇವಕಸಂಯುತಃ ।
ಗೃಹಾಣ ತ್ವಂ ಮಹಾರಾಜ ಹಯಂ ತಂ ಸುಮನೋಹರಂ ॥ ೧೭ ॥

॥ ಶೇಷ ಉವಾಚ

ಇತಿ ಶ್ರುತ್ವಾ ನಿಜಪ್ರೋಕ್ತಂ ವಾಕ್ಯಂ ಹರ್ಷಪರಿಪ್ಲುತಃ ।
ಉವಾಚ ನೃಪತಿರ್ವೀರಾನ್ ಮೇಘಗಂಭೀರಯಾ ಗಿರಾ ॥ ೧೮ ॥

॥ ಸುರಥ ಉವಾಚ ॥

ಧನ್ಯಾ ವಯಂ ರಾಮಮುಖಂ ಪಶ್ಯಾಮಃ ಸಹಸೇವಕಾಃ ।
ಗ್ರಹೀಷ್ಯಾಮಿ ಹಯಂ ತಸ್ಯ ಭಟಕೋಟಿಪರಿವೃತಂ ॥ ೧೯ ॥

ತದಾ ಮೋಕ್ಷ್ಯಾಮಿ ನಾಹಂ ತಂ ಯದಾ ರಾಮಃ ಸಮಾವ್ರಜೇತ್ ।
ಕೃಪಾರ್ಥಂ ಮಮ ಭಕ್ತಸ್ಯ ಚಿರಂ ಧ್ಯಾನಪರಸ್ಯ ವೈ ॥ ೨೦ ॥

---

೧೬. ಅಯೋಧ್ಯಾನಗರದ ರಾಮನಂತೆ. ಅಶ್ವಮೇಧವನ್ನು ಮಾಡುವನಂತೆ. ಅವನ ಯಾಗದ ಕುದುರೆಯು ಸುತ್ತುತ್ತಾ ಬಂದಿದೆ.

೧೭. ಆ ಕುದುರೆಯು ನಿನ್ನ ಪಟ್ಟಣದ ಬಳಿಗೆ ಬಂದಿದೆ. ಆ ಕುದುರೆಯನ್ನು ನೀನು ಹಿಡಿದುಕಟ್ಟು.

೧೮. ಶೇಷನು ಹೇಳಿದನು :—ಈ ಮಾತನ್ನು ಕೇಳಿ ಹರ್ಷದಿಂದ ಆತನು ಗಂಭೀರವಾಗಿ ವೀರರನ್ನು ಕುರಿತಿಂತೆಂದನು.

೧೯. ನಾವೇ ಧನ್ಯರು. ರಾಮನ ಮುಖವನ್ನು ಎಲ್ಲರೂ ನೋಡುತ್ತೇವೆ. ಅವನ ಕುದುರೆಯನ್ನು ಹಿಡಿಯಬೇಕು.

೨೦. ಬಹು ಕಾಲದಿಂದ ಧ್ಯಾನಮಾಡುತ್ತಿರುವ ನನ್ನ ಮೇಲೆ ದಯೆಯಿಟ್ಟು ರಾಮನು ಬಂದರೆ ಆಗ ಕುದುರೆಯನ್ನು ಬಿಡಬೇಕು.

|| ಶೇಷ ಉವಾಚ ||

ಇತ್ಥಮುಕ್ತ್ವಾ ಮಹೀಪಾಲಃ ಸೇವಕಾನ್ಸ್ವಯಮಾದಿಶತ್ ।
ಗೃಹ್ಣಂತು ವಾಹಂ ಪ್ರಸಭಂ ನ ಮೋಚ್ಯೋಽಪ್ಯಕ್ಷಿಗೋಚರಃ || ೨೧ ||

ಅನೇನ ಸುಮಹಾಲಾಭೋ ಭವಿಷ್ಯತಿ ತು ಮೇ ಮತಂ ।
ಯದ್ರಾಮಚರಣೌ ಪ್ರೇಕ್ಷ್ಯೇ ಬ್ರಹ್ಮಶಕ್ರಾದಿದುರ್ಲಭೌ || ೨೨ ||

ಸ ಏವ ಧನ್ಯಸ್ಸ್ವಜನಃ ಪುತ್ರೋ ವಾ ಬಾಂಧವೋಽಥವಾ ।
ಪಶುರ್ವಾ ವಾಹನಂ ವಾಪಿ ರಾಮಾಪ್ತಿರ್ಯೇನ ಸಂಭವೇತ್ || ೨೩ ||

ತಸ್ಮಾದ್ಗೃಹೀತ್ವಾ ಕ್ರತ್ವಶ್ವಂ ಸ್ವರ್ಣಪತ್ರೇಣ ಶೋಭಿತಂ ।
ಬಧ್ನಂತು ವಾಜಿಶಾಲಾಯಾಂ ಕಾಮವೇಗಂ ಮನೋರಮಂ || ೨೪ ||

ಇತ್ಯುಕ್ತಾಸ್ತೇ ತತೋ ಗತ್ವಾ ವಾಹಂ ರಾಮಸ್ಯ ಶೋಭನಂ ।
ಗೃಹೀತ್ವಾ ತರಸಾ ರಾಜ್ಞೇ ದದುಃ ಸರ್ವಶುಭಾಂಗಿನಂ || ೨೫ ||

ರಾಜಾ ಪ್ರಾಪ್ಯ ಮಹಾಸಶ್ವಂ ರಾಮಸ್ಯ ದನುಜಾರ್ದಿನಃ ।
ಸೇವಕಾನ್ಪ್ರಾಹ ಬಲಿನೋ ಧರ್ಮಕೃತ್ಯವಿಚಕ್ಷಣಃ || ೨೬ ||

---

೨೧. ಹೀಗೆಂದು ಹೇಳಿ ರಾಜನು ಸೇವಕರಿಗೆ ಆಜ್ಞಾಪಿಸಿದನು. ಹೇಗಾದರೂ ಮಾಡಿ ಕುದುರೆಯನ್ನು ಹಿಡಿಯಿರಿ ಕಣ್ಣಿಗೆ ಬಿದ್ದರೆ ಬಿಡಬೇಡಿ.

೨೨. ಬ್ರಹ್ಮಾದಿಗಳಿಗೂ ದುರ್ಲಭವಾದ ರಾಮಚಂದ್ರನ ಚರಣಗಳನ್ನು ನೋಡುವುದೇ ಈ ಕುದುರೆಯನ್ನು ಹಿಡಿದುದರಿಂದಾಗುವ ಲಾಭವು.

೨೩. ಮಗನಾಗಲಿ, ಬಂಧುವಾಗಲಿ, ಪಶುವಾಗಲಿ, ವಾಹನವಾಗಲಿ, ಯಾವುದಾದರೂ ಆಗಲಿ. ಅದರಿಂದ ರಾಮನು ಬರುವುದಾದರೆ ಅವನೇ ಧನ್ಯನು.

೨೪. ಆದ್ದರಿಂದ ಆ ಯಾಗದ ಕುದುರೆಯನ್ನು ಕುದುರೆಯ ಲಾಯದಲ್ಲಿ ತಂದು ಕಟ್ಟಿರಿ.

೨೫. ಹೀಗೆ ಹೇಳಲು ಸೇವಕರು ಹೋಗಿ ಕುದುರೆಯನ್ನು ಹಿಡಿದು ತಂದು ರಾಜನಿಗೆ ಒಪ್ಪಿಸಿದರು.

೨೬. ರಾಕ್ಷಸಾಂತಕನಾದ ರಾಮನ ಕುದುರೆಯನ್ನು ಹೊಂದಿ ಆ ಸುರಥನು ಸೇವಕರಿಗಿಂತೆಂದನು.

ವಾತ್ಸ್ಯಾಯನ ಮಹಾಬುದ್ಧೇ ಶೃಣುಷ್ವೈಕಾಗ್ರಮಾನಸಃ ।
ನ ತಸ್ಯ ವಿಷಯೇ ಕಶ್ಚಿತ್ಪರದಾರರತೋ ನರಃ ॥ ೨೭ ॥

ನ ಪರದ್ರವ್ಯನಿರತೋ ನ ಕಾಮೇಷು ಚ ಲಂಪಟಃ ।
ನ ಜಿಹ್ವಾಭಿರನುನ್ಮಾರ್ಗಂ ಕೀರ್ತಯೇದ್ರಾಮಕೀರ್ತನಾತ್ ॥ ೨೮ ॥

ಯಸ್ಸೇವಕಾನ್ನೃಪೋ ವಕ್ತಿ ಯೂಯಂ ಸೇವಾರ್ಥಮಾಗತಾಃ ।
ಕಥಯಸ್ತು ಭವಚ್ಚೇಷ್ಟಾಂ ಧರ್ಮಕರ್ಮವಿಶಾರದಾಃ ॥ ೨೯ ॥

ಏಕಪತ್ನೀವ್ರತಧರಾಃ ನ ಪರದ್ರವ್ಯಲೋಲುಪಾಃ ।
ಪರಾಪವಾದನಿರತಾ ನ ಚ ವೇದೋತ್ಪಥಂ ಗತಾಃ ॥ ೩೦ ॥

ಶ್ರೀರಾಮಸ್ಮರಣಾದೀನಿ ಕುರ್ವತಿಂ ಪ್ರತ್ಯಹಂ ಭಟಾಃ ।
ತಾನಹಂ ಮಮ ಸೇವಾರ್ಥಂ ರಕ್ಷಾಮ್ಯಂತಿಕಶೋಭನಾನ್ ॥ ೩೧ ॥

ತಸ್ಯ ದೇಶೇ ನ ಪಾಪಿಷ್ಠಾಃ ಪಾಪಂ ಕುರ್ವಂತಿ ಮಾನಸೇ ।
ಹರಿಧ್ಯಾನಹತಾಶೇಷಪಾತಕಾ ಮೋದಸಂಯುತಾಃ ॥ ೩೨ ॥

---

೨೭. ಎಲೈ ವಾತ್ಸ್ಯಾಯನನೇ ಕೇಳು. ಆ ರಾಜನ ರಾಜ್ಯದಲ್ಲಿ ಒಬ್ಬನೂ ಪರರ ಹೆಂಡಿರನ್ನು ಕಾಮಿಸುತ್ತಿರಲಿಲ್ಲ.

೨೮. ಪರದ್ರವ್ಯವನ್ನು ಮುಟ್ಟುತ್ತಿರಲಿಲ್ಲ. ಕಾಮದಲ್ಲಿ ಅತ್ಯಾಸಕ್ತಿಯಿರಲಿಲ್ಲ. ನಾಲಿಗೆಯಿಂದ ರಾಮಧ್ಯಾನ ಬಿಟ್ಟು ಬೇರೆ ಮಾರ್ಗಕ್ಕೆ ಹೋಗುತ್ತಿರಲಿಲ್ಲ.

೨೯. ಅವನು ಸೇವಕರನ್ನು ಕುರಿತು ನೀವು ಸೇವೆಗೋಸ್ಕರ ಬಂದಿದ್ದೀರಿ. ಧರ್ಮಕರ್ಮತತ್ಪರರಾಗಿ ನೀವು ನಿಮ್ಮ ಕೆಲಸವನ್ನು ಮಾಡಿರಿ.

೩೦. ಏಕಪತ್ನೀವ್ರತವನ್ನು ಹೊಂದಿ ಪರದ್ರವ್ಯವನ್ನು ಮುಟ್ಟಬೇಡಿ. ಪರಾಪವಾದ ಮಾಡಬೇಡಿ. ವೇದವನ್ನು ಮೀರಿ ಹೋಗಬೇಡಿ.

೩೧. ಎಲೈ ಭಟರಿರಾ! ಶ್ರೀರಾಮಸ್ಮರಣೆಯನ್ನು ಮಾಡಿರಿ. ಅವರನ್ನು ನನ್ನ ಸೇವೆಗೆ ಇಟ್ಟುಕೊಂಡು ಕಾಪಾಡುತ್ತೇನೆ.

೩೨-೩೩. ಅವನ ದೇಶದಲ್ಲಿ ಪಾಪಿಷ್ಠರಿಲ್ಲ. ಮನಸ್ಸಿನಲ್ಲೂ ಪಾಪಮಾಡು ವುದಿಲ್ಲ. ಹರಿ ಧ್ಯಾನದಿಂದ ಪಾಪವೆಲ್ಲವನ್ನೂ ನಾಶಮಾಡಿಕೊಳ್ಳಬೇಕು. ಈ ರಾಮನ

ಏತದ್ವಿರುದ್ಧಧರ್ಮಾಣೋ ಯೇ ನರಾಃ ಪಾಪಸಂಯುತಾಃ ।
ತಾನಹಂ ವಿಷಯೇ ಮಹ್ಯಂ ವಾಸಯಾಮಿ ನ ದುರ್ಮತೀನ್ ॥ ३३ ॥

ಯದ್ಯೈವಮುಭವದ್ದೇಶೇ ರಾಜಾ ಧರ್ಮೇಣ ಸಂಯುತಃ ।
ತದಾ ತತ್ಸ್ಥಾ ನರಾಸ್ಸರ್ವೇ ಮೃತಾ ಗಚ್ಛಂತಿ ನಿರ್ವೃತಿಂ ॥ ३४ ॥

ಯಮಾನುಚರನಿರ್ವೇಶೋ ನಾಭವತ್ಸೌರಥೇ ಪುರೇ ।
ತದಾ ಯಮೋ ಮುನೇ ರೂಪಂ ಧೃತ್ವಾ ಪ್ರಾಗಾನ್ಮಹೇಶ್ವರಂ ॥ ३५ ॥

ವಲ್ಕಲಾಂಬರಧಾರೀ ಚ ಜಟಾಲೋಭಿತಶೀರ್ಷಕಃ ।
ಸುರಥಂ ಚ ಸದೋ ಮಧ್ಯೇ ದದರ್ಶ ಹರಿಸೇವಕಂ ॥ ३६ ॥

ತುಲಸೀ ಮಸ್ತಕೇ ಯಸ್ಯ ವಾಚಿ ನಾಮ ಹರೇಃ ಪರಂ ।
ಧರ್ಮಕರ್ಮರತಾಂ ವಾರ್ತಾಂ ಶ್ರಾವಯಂತಂ ನಿಜಾನ್ಭಟಾನ್ ॥ ३७ ॥

ತದಾ ಮುನಿಂ ನೃಪೋ ದೃಷ್ಟ್ವಾ ತಪೋಮೂರ್ತಿಮಿವ ಸ್ಥಿತಂ ।
ವವಂದೇ ಚರಣೌ ತಸ್ಯ ಪಾದ್ಯಾದಿಕಮಥಾಕರೋತ್ ॥ ३८ ॥

---

ಕೃತ್ಯಕ್ಕೆ ವಿರುದ್ಧವಾದ ಕೆಲಸಗಳನ್ನು ಮಾಡುವ ಪಾಪಿಗಳನ್ನು ನನ್ನ ರಾಜ್ಯದಲ್ಲಿರಲು ಎಡೆಗೊಡುವುದಿಲ್ಲ.

३४. ರಾಜ್ಯದಲ್ಲಿ ಈ ರೀತಿಯಾಗಿ ರಾಜನು ಧರ್ಮದಿಂದಿರಲು, ಆಗ ಅಲ್ಲಿರುವ ಜನರೆಲ್ಲರೂ ಸತ್ತನಂತರ ಸ್ವರ್ಗಕ್ಕೆ ಹೋಗುತ್ತಿದ್ದರು.

३५. ಆ ಸುರಥನ ನಗರದಲ್ಲಿ ಯಮಭಟರ ಪ್ರವೇಶವೇ ಇಲ್ಲ. ಆಗ ಯಮನು ಮುನಿಯ ರೂಪವನ್ನು ಹೊಂದಿ ರಾಜನ ಬಳಿಗೆ ಹೋದನು.

३६. ನಾರು ಬಟ್ಟೆಯನ್ನುಟ್ಟು, ಜಟೆಯನ್ನು ಧರಿಸಿಕೊಂಡು ಹೋಗಿ ಸಭೆಯ ಮಧ್ಯದಲ್ಲಿ ಸುರಥನನ್ನು ನೋಡಿದನು.

३७. ತಲೆಯಲ್ಲಿ ತುಳಸಿಯನ್ನು ಧರಿಸಿ ಬಾಯಲ್ಲಿ ರಾಮಸ್ಮರಣೆಮಾಡುತ್ತಾ ಧರ್ಮಿಷ್ಠರ ಕಥೆಗಳನ್ನು ತನ್ನ ಭಟರಿಗೆ ಹೇಳುತ್ತಿರುವ ರಾಜನಲ್ಲಿಗೆ ಹೋದನು.

३८. ತಪೋಮೂರ್ತಿಯಂತಿರುವ ಆ ಋಷಿಯನ್ನು ರಾಜನು ನೋಡಿ ನಮಸ್ಕರಿಸಿ ಪಾದ್ಯಾದಿಗಳನ್ನು ಕೊಟ್ಟನು.

ಸುಖೋಪವಿಷ್ಟಂ ವಿಶ್ರಾಂತಂ ಮುನಿಂ ಪ್ರಾಹ ನೃಪಾಗ್ರಣೀಃ ।
ಧನ್ಯಮದ್ಯ ಜನುರ್ಮಹ್ಯಂ ಧನ್ಯಮದ್ಯ ಗೃಹಂ ಮಮ ॥ ೩೯ ॥

ಕಥಾಃ ಕಥಯತಾನ್ಮಹ್ಯಂ ರಾಮಸ್ಯ ವಿವಿಧಾ ವರಾಃ ।
ಯಾಃ ಶೃಣ್ವತಾಂ ಪಾಪಹಾನಿರ್ಭವಿಷ್ಯತಿ ಪದೇ ಪದೇ ॥ ೪೦ ॥

ಇತ್ಥಮುಕ್ತಂ ಸಮಾಕರ್ಣ್ಯ ಜಹಾಸ ಸ ಮುನಿರ್ಭೃಶಂ ।
ದಂತಾನ್ಪ್ರದರ್ಶಯನ್ಸರ್ವಾಂಸ್ತಾಲಸ್ಫಾಲತಪಾಣಿಕಃ ॥ ೪೧ ॥

ಹಸನ್ತಂ ತಂ ಮುನಿಂ ಪ್ರಾಹ ಹಸನೇ ಕಾರಣಂ ಕಿಮು ।
ಕಥಯಸ್ವ ಪ್ರಸಾದೇನ ಯಥಾ ಸ್ಯಾನ್ಮೇ ಮನಸ್ಸುಖಂ ॥ ೪೨ ॥

ತತೋ ಮುನಿರ್ನೃಪಂ ಪ್ರಾಹ ಶೃಣು ರಾಜನ್ಧಿಯಾ ಯುತಃ ।
ಯದಹಂ ತೇಽಭಿಧಾಸ್ಯಾಮಿ ಸ್ಮಿತೇ ಕಾರಣಮುತ್ತಮಂ ॥ ೪೩ ॥

ತ್ವಯಾ ಪ್ರೋಕ್ತಂ ಹರೇಃ ಕೀರ್ತಿಂ ಕಥಯಸ್ವ ಮಮಾಗ್ರತಃ ।
ಕೋ ಹರಿಃ ಕಸ್ಯ ವಾ ಕೀರ್ತಿಃ ಸರ್ವೇ ಕರ್ಮವಶಾ ನರಾಃ ॥ ೪೪ ॥

---

೩೯. ಸುಖವಾಗಿ ಆತನು ಆಸನದಲ್ಲಿ ಕುಳಿತಮೇಲೆ ನನ್ನ ಜನ್ಮವು ಧನ್ಯವಾಯಿತು. ತಾವು ಮನೆಗೆ ಬಂದುದರಿಂದ ನನ್ನ ಮನೆಯೂ ಧನ್ಯವಾಯಿತೆಂದನು.

೪೦. ಯಾವ ರಾಮನ ಕಥೆಯನ್ನು ಕೇಳಿದರೆ ಪಾಪಹಾನಿಯಾಗುವುದೋ ಅಂತಹ ರಾಮನ ಆ ಕಥೆಗಳನ್ನು ನನಗೆ ಹೇಳು.

೪೧. ಹೀಗೆ ಹೇಳಿದುದನ್ನು ಕೇಳಿ ಆ ಮುನಿಯು ಹಲ್ಲು ಕಾಣುವಂತೆ ನಗುತ್ತಾ ಚಪ್ಪಾಳೆ ಹೊಡೆಯುತ್ತಾ ನಕ್ಕನು.

೪೨. ನಗುತ್ತಿರುವ ಆ ಮುನಿಯನ್ನು ಕುರಿತು ನಗಲು ಕಾರಣವೇನು ? ದಯವಿಟ್ಟು ಹೇಳಿ ಮನಸ್ಸಿಗೆ ಸಮಾಧಾನವಾಗಬೇಕೆಂದನು.

೪೩. ಎಲೈ ದೊರೆಯೇ ಬುದ್ಧಿಯಿಟ್ಟು ಕೇಳು. ಅದರ ಉತ್ತಮ ಕಾರಣವನ್ನು ಹೇಳುತ್ತೇನೆ.

೪೪. ನೀನು ಹೇಳಿದ ಹರಿಕೀರ್ತಿಯಾವುದು? ನನ್ನ ಮುಂದೆ ಹೇಳು. ಹರಿಯಾರು ಅವನ ಕೀರ್ತಿಯೇನು? ಮನುಷ್ಯರೆಲ್ಲರೂ ಕರ್ಮಕ್ಕೆ ಅಧೀನರೆಂಬುದನ್ನು ಕಾಣೆಯಾ?

**ಕರ್ಮಣಾ ಪ್ರಾಪ್ಯತೇ ಸ್ವರ್ಗಃ ಕರ್ಮಣಾ ನರಕಂ ವ್ರಜೇತ್ ।**
**ಕರ್ಮಣೇಹ ಭವೇತ್ಸರ್ವಂ ಪುತ್ರಪೌತ್ರಾದಿಕಂ ಬಹು ॥ ೪೫ ॥**

**ಶಕ್ರಶ್ಶತಂ ಕ್ರತೂನಾಂ ತು ಕೃತ್ವಾsಗಾತ್ಪರಮಂ ಪದಂ ।**
**ಬ್ರಹ್ಮಾಪಿ ಕರ್ಮಣಾ ಲೋಕಂ ಪ್ರಾಪ ಸತ್ಯಾಖ್ಯಮುದ್ಭುತಂ ॥ ೪೬ ॥**

**ಅನೇಕೇ ಕರ್ಮಣಾ ಸಿದ್ಧಾ ಮರುದಾದಯ ಈಶಿನಃ ।**
**ಕುರ್ವಂತಿ ಭೋಗಸೌಖ್ಯಂ ಚ ಅಪ್ಸರೋಗಣಸೇವಿತಾಃ ॥ ೪೭ ॥**

**ತಸ್ಮಾತ್ಕುರುಷ್ವ ಯಜ್ಞಾದೀನ್ ಯಜಸ್ವ ಕಿಲ ದೇವತಾಃ ।**
**ಯಥಾ ತೇ ವಿಮಲಾ ಕೀರ್ತಿರ್ಭವಿಷ್ಯತಿ ಮಹೀತಲೇ ॥ ೪೮ ॥**

**ಇತಿ ಶ್ರುತ್ವಾ ತು ತದ್ವಾಕ್ಯಂ ಕೋಪಕ್ಷುಭಿತಮಾನಸಃ ।**
**ಉವಾಚ ರಾಮೈಕಮನಾ ವಿಪ್ರಂ ಕರ್ಮವಿಶಾರದಂ ॥ ೪೯ ॥**

**ಮಾ ಬ್ರೂಹಿ ಕರ್ಮಣೋ ವಾರ್ತಾಂ ಕ್ಷಯಿಷ್ಣುಫಲದಾಯಿನೀಂ ।**
**ಗಚ್ಛ ಮನ್ನಗರಪ್ರಾಂತಾದ್ಬಾಹಿಲೋರ್ಕವಿಗರ್ಹಿತಃ ॥ ೫೦ ॥**

---

೪೫. ಕರ್ಮದಿಂದಲೇ ಸ್ವರ್ಗ. ಕರ್ಮದಿಂದಲೇ ನರಕವೂ ಬರುತ್ತವೆ. ಕರ್ಮದಿಂದಲೇ ಪುತ್ರಪೌತ್ರಾದಿಗಳೆಲ್ಲರೂ ಬರುವುದು.

೪೬. ಇಂದ್ರನು ನೂರು ಯಾಗಗಳನ್ನು ಮಾಡಿಯೇ ಉತ್ತಮಸ್ಥಾನವನ್ನು ಹೊಂದಿದನು. ಬ್ರಹ್ಮನೂ ಕೂಡ ಅದರಿಂದಲೇ ಸತ್ಯಲೋಕವನ್ನು ಹೊಂದಿದನು.

೪೭. ಮರುತ್ತೇ ಮೊದಲಾದ ದೇವತೆಗಳೆಲ್ಲರೂ ಕರ್ಮದಿಂದಲೇ ಸಿದ್ಧಿಯನ್ನು ಹೊಂದಿದುದು. ಅವರೆಲ್ಲರೂ ಆ ಕರ್ಮದಿಂದಲೇ ಅಪ್ಸರಸ್ತ್ರೀಯರೂಪನೆ ಭೋಗಿಸುವುದು.

೪೮. ಆದ್ದರಿಂದ ಯಜ್ಞಾದಿಗಳನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸು. ನಿನಗೂ ಲೋಕದಲ್ಲಿ ಪವಿತ್ರವಾದ ಕೀರ್ತಿಯು ಬರುತ್ತದೆ.

೪೯. ಈ ಮಾತನ್ನು ಕೇಳಿ ಕೋಪಗೊಂಡು ರಾಮಧ್ಯಾನಮಾಡುತ್ತಾ, ಕರ್ಮವನ್ನು ಉಪದೇಶಿಸುವ ಆತನನ್ನು ಕುರಿತು ಇಂತೆಂದನು.

೫೦. ನನ್ನ ಬಳಿ ಕರ್ಮದ ಮಾತನ್ನೆತ್ತಬೇಡ. ಅದು ಕ್ಷಯಿಸುವ ಫಲವನ್ನು ಕೊಡತಕ್ಕದು. ನೀನು ಅಯೋಗ್ಯ. ನನ್ನೂರಿನಿಂದ ಮೊದಲು ಹೊರಗೆ ಹೋಗು.

ಇಂದ್ರಃ ಪತಿಷ್ಯತಿ ಕ್ಷಿಪ್ರಂ ಪತಿಷ್ಯತಿ ಚ ಪದ್ಮಜಃ ।
ನ ಪತಿಷ್ಯಂತಿ ಮನುಜಾ ರಾಮಸ್ಯ ನಿಜಸೇವಕಾಃ ॥ ೫೧ ॥

ಪಶ್ಯ ಧ್ರುವಂ ಚ ಪ್ರಹ್ಲಾದಂ ವಿಭೀಷಣಮಥಾದ್ಭುತಂ ।
ಯೇ ಚಾನ್ಯೇ ರಾಮಭಕ್ತಾ ವೈ ಕದಾಪಿ ನ ಪತಂತಿ ತೇ ॥ ೫೨ ॥

ಯೇ ರಾಮನಿಂದಕಾ ದುಷ್ಟಾಸ್ತಾನಿಮೇ ಯಮಕಿಂಕರಾಃ ।
ತಾಡಯಿಷ್ಯಂತಿ ಲೋಹಸ್ಯ ಮುದ್ಗರೈಃ ಪಾಶಬಂಧನೈಃ ॥ ೫೩ ॥

ಬ್ರಾಹ್ಮಣತ್ವಾದ್ದೇಹದಂಡಂ ನ ಕುರ್ಯಾಂ ತೇ ದ್ವಿಜಾಧಮ ।
ಗಚ್ಛ ಗಚ್ಛ ಮದಾಲೋಕಾತ್ತಾಡಯಿಷ್ಯಾಮಿ ಚಾನ್ಯಥಾ ॥ ೫೪ ॥

ಇತ್ಥಮುಕ್ತವತಿ ಶ್ರೇಷ್ಠೇ ಭೂಪೇ ಸುರಥಸಂಜ್ಞಿತೇ ।
ಸೇವಕಾ ಬಾಹುನಾ ಧೃತ್ವಾ ನಿಷ್ಕಾಸಯಿತುಮುದ್ಯತಾಃ ॥ ೫೫ ॥

ತದಾ ಯಮೋ ನಿಜಂ ರೂಪಂ ಧೃತ್ವಾ ಲೋಕೈಕವಂದಿತಂ ।
ಪ್ರಾಹ ಭೂಪಂ ಪ್ರತುಷ್ಟೋಽಸ್ಮಿ ಯಾಚಸ್ವ ಹರಿಸೇವಕ ॥ ೫೬ ॥

---

೫೧. ಇಂದ್ರನಾಗಲಿ, ಬ್ರಹ್ಮನಾಗಲಿ ಜಾಗ್ರತೆಯಾಗಿಯೇ ಪದಚ್ಯುತರಾಗುತ್ತಾರೆ. ರಾಮಸೇವಕರಾದವರು ಪದಚ್ಯುತರಾಗುವುದಿಲ್ಲ.

೫೨. ಧ್ರುವ, ಪ್ರಹ್ಲಾದ, ವಿಭೀಷಣ, ಇವರನ್ನು ನೋಡು, ರಾಮಭಕ್ತರಾದವರು ಯಾವಾಗಲೂ ಪದಚ್ಯುತರಾಗಿ ಆ ಜಾಗದಿಂದ ಬೀಳುವುದೇ ಇಲ್ಲ.

೫೩. ರಾಮನಿಂದಕರಾದ ದುಷ್ಟರನ್ನು ಯಮಕಿಂಕರರು ಕಬ್ಬಿಣದ ದೊಣ್ಣೆಗಳಿಂದ ಹೊಡೆಯುತ್ತಾರೆ.

೫೪. ನೀನು ಬ್ರಾಹ್ಮಣನಾದುದರಿಂದ ದೇಹದಂಡವನ್ನು ಮಾಡುವುದಿಲ್ಲ ನನ್ನ ಕಣ್ಣೆದುರಿಗೆ ನಿಲ್ಲಬೇಡ ಹೊರಡು. ಇಲ್ಲದಿದ್ದರೆ ಹೊಡೆಯುತ್ತೇನೆ.

೫೫. ರಾಜನು ಹೀಗೆ ಹೇಳುತ್ತಿರಲು ಅವನ ಸೇವಕರು ತೋಳನ್ನು ಹಿಡಿದು ಹೊರಕ್ಕೆ ತಳ್ಳಲು ಸಿದ್ಧರಾದರು.

೫೬. ಆಗ ಯಮನು ತನ್ನ ನಿಜರೂಪವನ್ನು ತೋರಿಸಿ ರಾಜನನ್ನು ಕುರಿತು ನಿನ್ನ ರಾಮಭಕ್ತಿಗೆ ತುಷ್ಟನಾಗಿದ್ದೇನೆ. ವರವನ್ನು ಕೇಳು.

ಮಯಾ ಪ್ರಲೋಭಿತೋ ನಾಗ್ನಿಭಿರ್ಹ್ವೀಭಿರಪಿ ಸುವ್ರತ ।
ಚಲಿತೋಽಸಿ ನ ರಾಮಸ್ಯ ಸೇವಾಯಾಃ ಸಾಧುಸೇವಕಃ ॥ ೫೭ ॥

ತದಾ ಪ್ರೋವಾಚ ಭೂಮೀಶೋ ಯಮಂ ದೃಷ್ಟ್ವಾ ಸುತೋಷಿತಂ ।
ಉವಾಚ ಯದಿ ತುಷ್ಟೋಽಸಿ ದೇಹಿ ಮೇ ವರಮುತ್ತಮಂ ॥ ೫೮ ॥

ತಾವನ್ಮಮ ನ ವೈ ಮೃತ್ಯುರ್ಯಾವದ್ರಾಮಸಮಾಗಮಃ ।
ನ ಭಯಂ ಮೇ ಭವತ್ತೋ ಹಿ ಕದಾಚನ ಹಿ ಧರ್ಮರಾಟ್ ॥ ೫೯ ॥

ತದೋವಾಚ ಯಮೋ ಭೂಪಮಿದಂ ತವ ಭವಿಷ್ಯತಿ ।
ಸರ್ವಂ ತ್ವದೀಪ್ಸಿತಂ ತಥ್ಯಂ ಕರಿಷ್ಯತಿ ರಘೋಃ ಪತಿಃ ॥ ೬೦ ॥

ಇತ್ಯುಕ್ತ್ವಾಂತರ್ಹಿತೋ ಧರ್ಮೋ ಜಗಾಮ ಸ್ವಪುರಂ ಪ್ರತಿ ।
ಪ್ರಶಸ್ಯ ತಸ್ಯ ಚರಿತಂ ಹರಿಭಕ್ತಿಪರಾತ್ಮನಃ ॥ ೬೧ ॥

---

೫೭. ನಾನು ಅನೇಕ ಮಾತುಗಳಿಂದ ಆಸೆ ತೋರಿಸಿದರೂ ಕೂಡ ನೀನು ರಾಮಸೇವೆಯಿಂದ ಹಿಂತೆಗೆಯಲಿಲ್ಲವಲ್ಲಾ. ನೀನೇ ರಾಮನ ಉತ್ತಮಸೇವಕನು.

೫೮. ಆಗ ರಾಜನು ಯಮನನ್ನು ಕುರಿತು ನೀನು ಸಂತೋಷಪಟ್ಟಿದ್ದರೆ ನನಗೆ ಉತ್ತಮವಾದ ವರವನ್ನು ಕೊಡು ಎಂದನು.

೫೯. ರಾಮನು ನನ್ನ ಬಳಿಗೆ ಬರುವವರೆಗೂ ನನಗೆ ಸಾವು ಬರಕೂಡದು. ನಿನ್ನಿಂದ ನನಗೆ ಯಾವಾಗಲೂ ಭಯವಿರಕೂಡದು. ಎಂದನು.

೬೦. ಎಲೈ ರಾಜನೇ ನಿನ್ನಿಷ್ಟವೆಲ್ಲವೂ ನೆರವೇರುತ್ತದೆ. ಶ್ರೀರಾಮನು ನಿನ್ನಿಷ್ಟವೆಲ್ಲವನ್ನೂ ಈಡೇರಿಸುತ್ತಾನೆ.

೬೧. ಹರಿಭಕ್ತನಾದ ಆ ರಾಜನ ಭಕ್ತಿಯನ್ನು ಹೊಗಳಿ ಧರ್ಮರಾಜನು ಅಂತರ್ಧಾನನಾದನು.

ಸ ರಾಜಾ ಧಾರ್ಮಿಕೋ ರಾಮಸೇವಕಃ ಪರಯಾ ಮುದಾ ।
ಗೃಹೀತ್ವಾಶ್ವಂ ಪ್ರತ್ಯುವಾಚ ಸೇವಕಾನ್ಹರಿಸೇವಕಾನ್ ॥ ೬೨ ॥

ಮಯಾ ಗೃಹೀತೋ ವಾಹೋಽಸೌ ರಾಘವಸ್ಯ ಮಹೀಪತೇಃ ।
ಸಜ್ಜೀಭವಂತು ಸರ್ವತ್ರ ಯೂಯಂ ರಣವಿಶಾರದಾಃ ॥ ೬೩ ॥

ಇತಿ ಪ್ರೋಕ್ತಾಸ್ತು ತೇ ಸರ್ವೇ ಭಟಾ ರಾಜ್ಞೋ ಮಹಾಬಲಾಃ ।
ಸಜ್ಜೀಭೂತಾಃ ಕ್ಷಣಾದೇವ ಸಭಾಯಾಂ ಜಗ್ಮುರುಜ್ಜ್ವಲಾಃ ॥ ೬೪ ॥

ರಾಜ್ಞೋ ವೀರಾ ದಶ ಸುತಾಶ್ಚಂಪಕೋ ಮೋಹಕಸ್ತಥಾ ।
ರಿಪುಂಜಯಸ್ತು ದುರ್ವಾರಃ ಪ್ರತಾಪೀ ಬಲಮೋದಕಃ ॥ ೬೫ ॥

ಹರ್ಯಕ್ಷಃ ಸಹದೇವಶ್ಚ ಭೂರಿದೇವೋಽಸುತಾಪನಃ ।
ಇತಿ ರಾಜ್ಞೋ ದಶ ಸುತಾಃ ಸಜ್ಜೀಭೂತಾ ರಣಾಂಗಣೇ ॥ ೬೬ ॥

ಯಾತುಮಿಚ್ಛಾಮಕುರ್ವಂಸ್ತೇ ಮಹೋತ್ಸಾಹಸಮನ್ವಿತಾಃ ।
ರಾಜಾಪಿ ಸ್ವರಥಂ ಚಿತ್ರಂ ಹೇಮಶೋಭಾವಿನಿರ್ಮಿತಂ ॥ ೬೭ ॥

---

೬೨. ಧಾರ್ಮಿಕನೂ, ರಾಮಸೇವಕನೂ ಆದ ರಾಜನು ಕುದುರೆಯನ್ನು ಹಿಡಿದುಕೊಂಡು ಸೇವಕರನ್ನು ಕುರಿತು ಇಂತೆಂದನು.

೬೩. ನಾನು ರಾಮನ ಯಜ್ಞದ ಕುದುರೆಯನ್ನು ಹಿಡಿದಿದ್ದೇನೆ. ಯುದ್ಧಕೋವಿದರಾದ ನೀವೆಲ್ಲರೂ ಎಲ್ಲ ವಿಷಯದಲ್ಲಿಯೂ ಸಿದ್ಧರಾಗಿರಿ.

೬೪. ರಾಜನು ಹೀಗೆಂದು ಹೇಳಲು ಆ ಭಟರೆಲ್ಲರೂ ಸಿದ್ಧರಾಗಿ ಸಭೆಯಿಂದ ಹೊರಟರು.

೬೫-೬೬. ಚಂಪಕ, ಮೋಹಕ, ರಿಪುಂಜಯ ದುರ್ವಾರ, ಪ್ರತಾಪೀ, ಬಲಮೋದಕ, ಹರ್ಯಕ್ಷ, ಸಹದೇವ, ಭೂರಿದೇವ. ಅಸುತಾಪನ ಈ ಹತ್ತು ಜನ ರಾಜಪುತ್ರರೂ ಯುದ್ಧರಂಗಕ್ಕೆ ಸಿದ್ಧರಾದರು.

೬೭. ರಾಜನೂ ಕೂಡ ಚಿತ್ರವಿಚಿತ್ರವಾದ ರಥದಲ್ಲಿ ಕುಳಿತು ಸಿದ್ಧನಾದನು.

**ಆಹ್ವಯಾಮಾಸ ಸುಜವೈರ್ವಾಜಿಭಿಃ ಸಮಲಂಕೃತಂ ।**
**ರಣೋತ್ಸಾಹೇನ ಸಂಯುಕ್ತಃ ಸರ್ವಸೈನ್ಯಪರಿವೃತಃ ।**
**ಸಭಾಯಾಂ ಸೇವಕಾನ್ಸರ್ವಾನ್ದಿಶನ್ನಾಸ್ತೇ ಮಹೀಪತಿಃ　　　　॥ ೬೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಹಯಗ್ರಹಣಂ ನಾಮ ಏಕೋನಪಂಚಾಶತ್ತಮೋಽಧ್ಯಾಯಃ**

---

೬೮. ವೇಗದಿಂದ ಕೂಡಿರುವ ಕುದುರೆಗಳಿಂದ ಕೂಡಿದ ರಥವನ್ನು ತರಿಸಿದನು. ಸಭೆಮಾಡಿ ಸೇವಕರೆಲ್ಲರಿಗೂ ಹೊರಡಲು ಅಪ್ಪಣೆಮಾಡುತ್ತಿದ್ದನು.

ಇಂತು ಶ್ರೀಪದ್ಮಮಹಾಪುರಾಣದ ಪಾತಾಳಖಂಡದ ಶೇಷಾವಾತ್ಸ್ಯಾಯನ ಸಂವಾದದ ರಾಮಾಶ್ವಮೇಧದಲ್ಲಿ ಹಯಗ್ರಹಣವೆಂಬ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚಾಶತ್ತಮೋಽಧ್ಯಾಯಃ

---

॥ ಶೇಷ ಉವಾಚ ॥

ಅಥ ರಾಮಾನುಜೋ ವೇಗಾತ್ಸಮಾಗತ್ಯ ಸ್ವಸೇವಕಾನ್ ।
ಪಪ್ರಚ್ಛ ಕುತ್ರ ವಾಹೋಽಸೌ ಯಾಜ್ಞಿಕಸ್ಸುಮನೋಹರಃ ॥ ೧ ॥

ತದಾ ತೇ ವಚನಂ ಪ್ರೋಚುಃ ಶತ್ರುಘ್ನಂ ಸುಮಹಾಬಲಂ ।
ನ ಜಾನೀಮೋ ಭಟಾಃ ಕೇಚಿದ್ಧಯಂ ನೀತ್ವಾ ಗತಾಃ ಪುರೇ ॥ ೨ ॥

ವಯಂ ಚ ಧಿಕ್ಕೃತಾಸ್ಸರ್ವೇ ಬಲಿಭಿರಾಜಸೇವಕೈಃ ।
ಅತ್ರ ಪ್ರಮಾಣಂ ಭಗವಾನಿತಿಕರ್ತವ್ಯತಾಂ ಪ್ರತಿ ॥ ೩ ॥

ತಚ್ಛ್ರುತ್ವಾ ವಚನಂ ತೇಷಾಂ ಶತ್ರುಘ್ನಃ ಕೋಪಿತೋ ಭೃಶಂ ।
ದಶನ್ರೋಷಾತ್ಸ್ವದಶನಾನ್ ಜಿಹ್ವಯಾ ಲೇಲಿಹನ್ಮುಹುಃ ॥ ೪ ॥

---

## ಐವತ್ತನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಶತ್ರುಘ್ನನು ವೇಗವಾಗಿ ಬಂದು ತನ್ನ ಸೇವಕರನ್ನು ಕುರಿತು ಯಜ್ಞಾಶ್ವವೆಲ್ಲಿ ? ಎಂದು ಕೇಳಿದನು.

೨. ಆಗ ಶತ್ರುಘ್ನನನ್ನು ಕುರಿತು ಭಟರು, ಕೆಲವರು ಭಟರು ಬಂದು ಕುದುರೆಯನ್ನು ಹಿಡಿದುಕೊಂಡು ಆ ಊರಿಗೆ ಹೋದರು. ಅವರು ಯಾರೆಂಬುದು ಗೊತ್ತಿಲ್ಲ.

೩. ಅವರು ಬಲಿಷ್ಠರು. ನಮ್ಮನ್ನು ತಿರಸ್ಕರಿಸಿ ಬೈದರು. ಏನುಮಾಡಬೇಕೆಂಬುದು ತಮಗೆ ಸೇರಿದುದು.

೪. ಅವರ ಆ ಮಾತನ್ನು ಕೇಳಿ ಬಹು ಕೋಪಗೊಂಡು ಹಲ್ಲುಕಡಿಯುತ್ತಾ ನಾಲಗೆಯನ್ನು ಸವರುತ್ತಾ ಕೋಪವನ್ನು ತೋರಿಸುತ್ತಿದ್ದನು.

**ಉವಾಚ ವೀರೋ ಮದ್ವಾಹಂ ಹೃತ್ವಾ ಕುತ್ರ ಗಮಿಷ್ಯತಿ ।**
**ಇದಾನೀಂ ಪಾತಯೇ ಬಾಣೈಃ ಪುರಂ ಜನಸಮನ್ವಿತಂ ॥ ೫ ॥**

**ಇತ್ಯುಕ್ತ್ವಾ ಸುಮತಿಂ ಪ್ರಾಹ ಕಸ್ಯೇದಂ ಪುಟಭೇದನಂ ।**
**ಕೋ ವರ್ತತೇಽಸ್ಯಾಧಿಪತಿರ್ಯೋ ಮೇ ವಾಹಮಜೀಹರತ್ ॥ ೬ ॥**

**॥ ಶೇಷ ಉವಾಚ ॥**

**ಇತಿ ವಾಕ್ಯಂ ಸಮಾಕರ್ಣ್ಯ ಭೂಪತೇಃ ಕೋಪಸಂಯುತಂ ।**
**ಜಗಾದ ಮಂತ್ರೀ ಸುಗಿರಾ ಸ್ಫುಟಾಕ್ಷರಸಮನ್ವಿತಂ ॥ ೭ ॥**

**ವಿದ್ಧೀದಂ ಕುಂಡಲಂ ನಾಮ ನಗರಂ ಸುಮನೋಹರಂ ।**
**ಅಸ್ಮಿನ್ವಸತಿ ಧರ್ಮಾತ್ಮಾ ಸುರಥಃ ಕ್ಷತ್ರಿಯೋ ಬಲೀ ॥ ೮ ॥**

**ನಿತ್ಯಂ ಧರ್ಮಪರೋ ರಾಮಚರಣದ್ವಂದ್ವಸೇವಕಃ ।**
**ಮನಸಾ ಕರ್ಮಣಾ ವಾಚಾ ಹನೂಮಾನಿವ ಸೇವಕಃ ॥ ೯ ॥**

**ಚರಿತಾನ್ಯಸ್ಯ ಶತಶೋ ವರ್ತಂತೇ ಧರ್ಮಕಾರಿಣಃ ।**
**ಮಹಾಬಲಪರೀವಾರಃ ಸುರಥಃ ಸರ್ವಶೋಭನಃ ॥ ೧೦ ॥**

---

೫. ಆಗ ಆತನು ತನ್ನ ಕುದುರೆಯನ್ನು ಕದ್ದು ಎಲ್ಲಿಹೋಗುವನು ? ಈಗ ಬಾಣಗಳಿಂದ ಜನಸಹಿತವಾಗಿ ಈ ಊರನ್ನೇ ಕೆಡವುತ್ತೇನೆ.

೬. ಹೀಗೆಂದು ಸುಮತಿಯನ್ನು ಕುರಿತು ಇದು ಯಾರ ಊರು ? ಇದಕ್ಕೆ ದೊರೆಯಾರು ? ನನ್ನ ಕುದುರೆಯನ್ನು ಯಾವನು ಕದ್ದನು ? ಎಂದು ಕೇಳಿದನು.

೭. ಶೇಷನು ಹೇಳಿದನು :—ರಾಜನ ಕೋಪಯುಕ್ತವಾದ ಈ ಮಾತನ್ನು ಕೇಳಿ ಮಂತ್ರಿಯು ಇಂತೆಂದನು.

೮. ಇದು ಕುಂಡಲನಗರವು. ಇದರಲ್ಲಿ ಸುರಥನೆಂಬ ವೀರನಾದ ರಾಜನಿದ್ದಾನೆ.

೯. ಆ ರಾಜನು ಧರ್ಮಿಷ್ಠನು. ರಾಮಭಕ್ತನು, ಮನೋವಾಕ್ಕಾಯಗಳಿಂದ ಹನುಮಂತನಂತಹ ಸೇವಕನು.

೧೦. ಧರ್ಮಿಷ್ಠನಾದ ಇವನ ಚರಿತ್ರೆಗಳು ಅನೇಕಬಗೆಯಾಗಿ ಹರಡಿವೆ. ಈ ಸುರಥನು ಬಹು ಬಲವಾದ ಬಲದಿಂದ ಕೂಡಿದ್ದಾನೆ.

ಮಹದ್ಯುದ್ಧಂ ಭವೇತ್ತತ್ರ ಹೃತಶ್ಚೇದ್ವಾಹಸತ್ತಮಃ ।
ಅನೇಕೇ ಪ್ರಯುತಿಷ್ಯಂತಿ ವೀರಾ ರಣವಿಶಾರದಾಃ ॥ ೧೧ ॥

ಏವಮುಕ್ತಂ ಸಮಾಶ್ರುತ್ಯ ಶತ್ರುಘ್ನಸ್ಸಚಿವಂ ಪ್ರತಿ ।
ಉವಾಚ ಪುನರಪ್ಯೇವಂ ವಚನಂ ವದತಾಂ ವರಃ ॥ ೧೨ ॥

ಶತ್ರುಘ್ನ ಉವಾಚ ॥

ಕಥಮತ್ರ ಪ್ರಕರ್ತವ್ಯಂ ರಾಮಾಶ್ವೋಽನೇನ ಚೇದ್ಧೃತಃ ।
ನಾಯಾತಿ ಯೋದ್ಧುಂ ಪ್ರಬಲಂ ಕಟಕಂ ವೀರಸೇವಿತಂ ॥ ೧೩ ॥

॥ ಸುಮತಿರುವಾಚ ॥

ದೂತಃ ಪ್ರೇಷ್ಯೋ ಮಹಾರಾಜ ರಾಜಾನಂ ಪ್ರತಿ ವಾಗ್ಮಿಕಃ ।
ಯದ್ವಾಕ್ಯೇನ ಸಮಾಯಾತಿ ಬಲೇನ ಬಲಿನಾಂ ವರಃ ॥ ೧೪ ॥

ನ ಚೇದಜ್ಞಾನತೋ ವಾಹೋ ಧೃತಃ ಕೇನಾಪಿ ಮಾನಿನಃ ।
ಅರ್ಪಯಿಷ್ಯತಿ ನಃ ಸಾಧುರಶ್ವಂ ಕ್ರತುವರಂ ಶುಭಂ ॥ ೧೫ ॥

ಇತಿ ಶ್ರುತ್ವಾ ತು ತದ್ವಾಕ್ಯಂ ಶತ್ರುಘ್ನೋ ಬಲಿನಾಂ ಬಲೀ ।
ಅಂಗದಂ ಪ್ರತ್ಯುವಾಚೇದಂ ವಚನಂ ವಿನಯಾನ್ವಿತಂ ॥ ೧೬ ॥

---

೧೧. ಅವನು ಕುದುರೆಯನ್ನು ಕಟ್ಟಿದ್ದರೆ ಬಹು ದೊಡ್ಡ ಯುದ್ಧವಾಗುತ್ತವೆ. ಅನೇಕ ಜನ ಯುದ್ಧನಿಪುಣರು ಯುದ್ಧದಲ್ಲಿ ಭಾಗಿಗಳಾಗುತ್ತಾರೆ.

೧೨. ಮಂತ್ರಿಯ ಈ ಮಾತನ್ನು ಶತ್ರುಘ್ನನು ಕೇಳಿ ಪುನಃ ಇಂತೆಂದನು.

೧೩. ಶತ್ರುಘ್ನನು ಹೇಳಿದನು :—ರಾಮಾಶ್ವವನ್ನು ಇವನು ಕದ್ದಿದ್ದರೆ ಏನು ಮಾಡಬೇಕು ? ಪ್ರಬಲವಾಗಿ ಯುದ್ಧಮಾಡಲು ಸಾಧ್ಯವಿಲ್ಲ. ಶಿಬಿರವು ವೀರರಿಂದ ಕೂಡಿದೆ.

೧೪. ಸುಮತಿಯು ಹೇಳಿದನು ;—ಒಬ್ಬ ಗಟ್ಟಿಗನಾದ ವಾಚಾಳಿಯಾದ ದೂತನನ್ನು ಕಳುಹಿಸು. ಅವನ ಮಾತಿನಂತೆ ಬರುವನೋ ಇಲ್ಲವೋ ನೋಡೋಣ.

೧೫. ಬುದ್ಧಿಪೂರ್ವಕವಾಗಿ ಬಲಿಷ್ಠನಾದವನು ಹಿಡಿದಿದ್ದರೆ ನಮಗೆ ಕುದುರೆಯನ್ನು ಕೊಡುವುದಿಲ್ಲ.

೧೬. ಶತ್ರುಘ್ನನು ಈ ಮಾತನ್ನು ಕೇಳಿ ಅಂಗದನನ್ನು ಕುರಿತು ಇಂತೆಂದನು.

॥ ಶತ್ರುಘ್ನ ಉವಾಚ ॥

ಯಾಹಿ ತ್ವಂ ನಿಕಟಸ್ಥೇ ಶ್ವೈ ಸುರಥಸ್ಯ ಮಹಾಪುರೇ ।
ದೂತತ್ವೇನ ತತೋ ಗತ್ವಾ ಪ್ರಬ್ರೂಹಿ ನೃಪತಿಂ ಪ್ರತಿ ॥ ೧೭ ॥

ತ್ವಯಾ ಧೃತೋ ರಾಮವಾಹೋ ಜ್ಞಾನತೋಽಜ್ಞಾನತೋಽಪಿ ವಾ ।
ಅರ್ಪಯಾಶು ನ ವಾಯಾತು ಪ್ರಧನಂ ವೀರಸಂಯುತಂ ॥ ೧೮ ॥

ರಾಮಸ್ಯ ದೌತ್ಯಂ ಲಂಕಾಯಾಂ ರಾವಣಂ ಪ್ರತಿ ಯತ್ಕೃತಂ ।
ತಥೈವ ಕುರು ಭೂಯಿಷ್ಠ ಬಲಸಂಯುತ ಬುದ್ಧಿಮಾನ್ ॥ ೧೯ ॥

॥ ಶೇಷ ಉವಾಚ ॥

ಏತಚ್ಛ್ರುತ್ವಾಂಗದೋ ವೀರ ಓಮಿತಿ ಪ್ರೋಚ್ಯ ಭೂಮಿಪಂ ।
ಜಗಾಮ ಸಂಸದೋ ಮಧ್ಯೇ ವೀರಶ್ರೇಣಿಸಮನ್ವಿತಂ ॥ ೨೦ ॥

ದದರ್ಶ ಸುರಥಂ ಭೂಪಂ ತುಲಸೀಮಂಜರೀಧರಂ ।
ರಾಮಭದ್ರಂ ರಸನಯಾ ಬ್ರುವಂತಂ ಸೇವಕಾನ್ನಿಜಾನ್ ॥ ೨೧ ॥

---

೧೭. ಶತ್ರುಘ್ನನು ಹೇಳಿದನು:— ಎಲೈ ಅಂಗದನೇ, ಹತ್ತಿರವಿರುವ ಸುರಥನ ಪುರಕ್ಕೆ ದೂತನಾಗಿ ಹೋಗಿ ರಾಜನಿಗೆ ಹೇಳು.

೧೮. ಎಲೈ ಮಹಾಬಾಹುವೇ, ತಿಳಿದೋ ತಿಳಿಯದೆಯೋ ರಾಮನ ಕುದುರೆಯನ್ನು ಕಟ್ಟಿದ್ದೀಯೆ. ಅದನ್ನು ಕೊಟ್ಟುಬಿಡು. ಇಲ್ಲದಿದ್ದರೆ ಯುದ್ಧಕ್ಕೆ ಬಾ ಎಂದು ಹೇಳು.

೧೯. ಲಂಕೆಯಲ್ಲಿ ರಾಮನ ಕಡೆಯಿಂದ ರಾವಣನಿಗೆ ಯಾವರೀತಿ ದೌತ್ಯವನ್ನು ಮಾಡಿದೆಯೋ ಹಾಗೇನೇ ಇಲ್ಲಿಯೂ ಕೂಡ ಬಲಬುದ್ಧಿಗಳಿಂದ ಕೂಡಿದ ನೀನು ದೌತ್ಯವನ್ನು ಮಾಡು.

೨೦. ಶೇಷನು ಹೇಳಿದನು:-ಅಂಗದನು ಆಗಲೆಂದುಹೇಳಿ ಸಭೆಯ ಮಧ್ಯದಲ್ಲಿ ವೀರರೊಡನೆ ಕುಳಿತಿರುವ ರಾಜನ ಬಳಿಗೆ ಹೋದನು.

೨೧. ತುಳಸೀಮಾಲೆಯನ್ನು ಧರಿಸಿ ರಾಮನಾಮವನ್ನು ಹೇಳುತ್ತಾ ಸೇವಕರಿಗೂ ಅವನ ಚರಿತ್ರೆಯನ್ನು ಹೇಳುತ್ತಿರುವ ಆ ಸುರಥರಾಜನನ್ನು ನೋಡಿದನು.

ರಾಜಾಪಿ ದೃಷ್ಟ್ವಾ ಪ್ಲವಗಂ ಮನೋಹರವಪುರ್ಧರಂ ।
ಶತ್ರುಘ್ನದೂತಂ ಮತ್ವಾಪಿ ಪಾಲಿಜಂ ಪ್ರತ್ಯಭಾಷತ ॥ ೨೨ ॥

॥ ಸುರಥ ಉವಾಚ ॥
ಪ್ಲವಗಾಧಿಪ ಕಸ್ಮಾತ್ತ್ವಮಾಗತೋಽತ್ರ ಕಥಂ ಭವಾನ್ ।
ಬ್ರೂಹಿ ಮೇ ಕಾರಣಂ ಸರ್ವಂ ಯಥಾ ಜ್ಞಾತ್ವಾ ಕರೋಮಿ ತತ್ ॥ ೨೩ ॥

॥ ಶೇಷ ಉವಾಚ ॥
ಇತಿ ಸಂಭಾಷಮಾಣಂ ತಂ ಪ್ರತ್ಯುವಾಚ ಕಪೀಶ್ವರಃ ।
ವಿಸ್ಮಯಂಶ್ಚೇತಸಿ ಭೃಶಂ ರಾಮಸೇವಾಕರಂ ನೃಪಂ ॥ ೨೪ ॥

ಜಾನೀಹಿ ಮಾಂ ನೃಪಶ್ರೇಷ್ಠ ವಾಲಿಪುತ್ರಂ ಹರೀಶ್ವರಂ ।
ಶತ್ರುಘ್ನೇನ ಚ ದೂತತ್ವೇ ಪ್ರೇಷಿತೋ ಭವತೋಽಂತಿಕೇ ॥ ೨೫ ॥

ಸೇವಕೈಃ ಕೈಶ್ಚಿದಾಗತ್ಯ ಧೃತೋಽಶ್ವೋ ಮಮ ಸಾಂಪ್ರತಂ ।
ಅಜ್ಞಾನತೋ ಮಹಾನ್ಯಾಯಂ ಕುರ್ವದ್ಭಿಸ್ಸಹಸಾ ನೃಪ ॥ ೨೬ ॥

---

೨೨. ರಾಜನು ಸುಂದರನಾದ ಕಪಿಯಾದ ಈ ಅಂಗದನನ್ನು ನೋಡಿ ಶತ್ರುಘ್ನನ ದೂತನೆಂದು ತಿಳಿದರೂ ಕೂಡ ಅವನನ್ನು ಕುರಿತು ಇಂತೆಂದನು.

೨೩. ಸುರಥನು ಹೇಳಿದನು :—ಎಲೈ ಕಪಿಶ್ರೇಷ್ಠನೇ, ನೀನು ಯಾರು ? ಏಕೆ ಬಂದೆ ? ಹೇಳು ಅದನ್ನು ಕೇಳಿ ಅದಕ್ಕೆ ತಕ್ಕಂತೆ ಮಾಡುತ್ತೇನೆ.

೨೪. ಶೇಷನು ಹೇಳಿದನು ;—ಅಂಗದನು ಈ ಮಾತನ್ನು ಕೇಳಿ ಆಶ್ಚರ್ಯಗೊಂಡು ರಾಮಸೇವಕನಾದ ಆ ರಾಜನನ್ನು ಕುರಿತು ಇಂತೆಂದನು.

೨೫. ಎಲೈ ರಾಜನೇ ! ನಾನು ವಾಲಿಪುತ್ರನೆಂದು ತಿಳಿ. ಶತ್ರುಘ್ನನು ನಿನ್ನ ಬಳಿಗೆ ದೂತತ್ವಕ್ಕೆ ಕಳುಹಿಸಿದ್ದಾನೆ.

೨೬. ಯಾರೋ ಕೆಲವರು ಸೇವಕರು ಬಂದು ನಮ್ಮ ಕುದುರೆಯನ್ನು ಹಿಡಿದಿದ್ದಾರೆ. ಅಜ್ಞಾನದಿಂದ ಅವರು ಹಾಗೆ ಹಿಡಿದುದು ಬಹು ಅನ್ಯಾಯವು.

**ತಮಶ್ವಂ ಸಹ ರಾಜ್ಯೇನ ಸಹ ಪುತ್ರೈರ್ಮುದಾನ್ವಿತಃ ।**
**ಶತ್ರುಘ್ನಂ ಯಾಹಿ ಚರಣೇ ಪತಿತ್ವಾಶು ಪ್ರದೇಹಿ ಚ ॥ ೨೭ ॥**

**ನೋ ಚೇಚ್ಛತ್ರುಘ್ನನಿರ್ಮುಕ್ತೈರ್ನಾರಾಚೈಃ ಕ್ಷತವಿಗ್ರಹಃ ।**
**ಪೃಥ್ವೀತಲಮಲಂಕುರ್ವಂಚ್ಛಯಿಷ್ಯಸಿ ವಿಶೀರ್ಷಕಃ ॥ ೨೮ ॥**

**ಯೇನ ಲಂಕಾಪತಿರ್ನಾಶಂ ಪ್ರಾಪಿತೋ ಲೀಲಯಾ ಕ್ಷಣಾತ್ ।**
**ತಸ್ಯಾಶ್ವಂ ಯಾಗಯೋಗ್ಯಂ ತು ಹೃತ್ವಾ ಕುತ್ರ ಗಮಿಷ್ಯಸಿ ॥ ೨೯ ॥**

**॥ ಶೇಷ ಉವಾಚ ॥**

**ಇತ್ಯಾದಿ ಭೂಷಮಾಣಂ ತಂ ಪ್ರತ್ಯುವಾಚ ಮಹೀಶ್ವರಃ ।**
**ಸರ್ವಂ ತಥ್ಯಂ ಬ್ರವೀಷಿ ತ್ವಂ ನಾನೃತಂ ತವ ಭಾಷಿತಂ ॥ ೩೦ ॥**

**ಪರಂ ಶೃಣುಷ್ವ ಮದ್ವಾಕ್ಯಂ ಶತ್ರುಘ್ನಪದಸೇವಕ ।**
**ಮಯಾ ಧೃತೋ ಮಹಾನಶ್ವೋ ರಾಮಭದ್ರಸ್ಯ ಧೀಮತಃ ॥ ೩೧ ॥**

---

೨೭. ಆ ಕುದುರೆಯನ್ನು ರಾಜ್ಯ, ಮಕ್ಕಳುಗಳೊಡನೆ ಒಪ್ಪಿಸಿ ಶತ್ರುಘ್ನನಿಗೆ ಶರಣಾಗತನಾಗು.

೨೮. ಇಲ್ಲದಿದ್ದರೆ ಶತ್ರುಘ್ನನು ಬಿಟ್ಟ ಬಾಣಗಳಿಂದ ಗಾಯಹೊಂದಿ ರುಂಡ ಮುಂಡಗಳು ಬೇರೆಯಾಗಿ ಭೂಮಿಯಲ್ಲಿ ಮಲಗುತ್ತೀಯೆ.

೨೯. ಯಾವ ರಾವಣನನ್ನು ಒಂದೇಕ್ಷಣದಲ್ಲಿ ನಾಶಮಾಡಿದನೋ ಅಂತಹ ರಾಮನ ಕುದುರೆಯನ್ನು ಹಿಡಿದು ಎಲ್ಲಿತಾನೆ ಹೋಗುತ್ತೀಯೆ ?

೩೦. ಶೇಷನು ಹೇಳಿದನು:—ಇಂತು ಹೇಳುತ್ತಿರುವ ಆತನನ್ನು ಕುರಿತು ಸುರಥನು ಹೇಳಿದನು. ನೀನು ಹೇಳುವುದು ನಿಜ. ಸ್ವಲ್ಪವೂ ಸುಳ್ಳಿಲ್ಲ. ಶತ್ರುಘ್ನ ಸೇವಕನೇ ಆದರೆ ನನ್ನ ಮಾತನ್ನು ಕೇಳು.

೩೧-೩೩. ನಾನು ರಾಮಭದ್ರನ ಕುದುರೆಯನ್ನು ಹಿಡಿದಿದ್ದೇನೆ. ನಿಜ. ಶತ್ರುಘ್ನ ಮುಂತಾದವರ ಭಯದಿಂದ ನಾನು ಆ ಕುದುರೆಯನ್ನು ಖಂಡಿತವಾಗಿಯೂ

ನ ಮೋಕ್ಷ್ಯೇ ಸರ್ವಥಾ ವಾಪಂ ಶತ್ರುಘ್ನಾದಿಭಯಾದಹಂ ।
ಚೇದ್ರಾಮಃ ಸ್ವಯಮಾಗತ್ಯ ದರ್ಶನಂ ದಾಸ್ಯತೇ ಮಮ ॥ ೩೨ ॥

ತದಾಹಂ ಚರಣೌ ನತ್ವಾ ದಾಸ್ಯಾಮಿ ಸುತಸಂಯುತಃ ।
ಸರ್ವಂ ರಾಜ್ಯಂ ಕುಟುಂಬಂ ಚ ಧನಂ ಧಾನ್ಯಂ ಬಲಂ ಬಹು ॥ ೩೩ ॥

ಕ್ಷತ್ರಿಯಾಣಾಮಯಂ ಧರ್ಮಃ ಸ್ವಾಮಿನಾಪಿ ವಿರುಧ್ಯತೇ ।
ಧರ್ಮೇಣ ಯುದ್ಧಂ ತತ್ರಾಪಿ ರಾಮದರ್ಶನಮಿಚ್ಛತಾ ॥ ೩೪ ॥

ಶತ್ರುಘ್ನಾದಿಪ್ರವೀರಾಂಸ್ತಾನಧುನಾಹಂ ಕ್ಷಣಾದಪಿ ।
ಜಿತ್ವಾ ಬಧ್ನಾಮಿ ಮದ್ಗೇಹೇ ನೋಚೇದ್ರಾಮಃ ಸಮಾವ್ರಜೇತ್ ॥ ೩೫ ॥

॥ ಶೇಷ ಉವಾಚ ॥

ಇತಿ ಶ್ರುತ್ವಾಂಗದೋ ಧೀಮಾನ್ಜಹಾಸ ನೃಪತಿಂ ತದಾ ।
ಉವಾಚ ಚ ಮಹಾವಾಕ್ಯಂ ಮಹಾಧೈರ್ಯಸಮನ್ವಿತಂ ॥ ೩೬ ॥

---

ಬಿಡುವುದಿಲ್ಲ. ಶ್ರೀರಾಮನೇ ಬಂದು ದರ್ಶನವನ್ನು ಕೊಟ್ಟರೆ ಆಗ ಆತನ ಪಾದಗಳಿಗೆ ನಮಸ್ಕರಿಸಿ ನನ್ನ ರಾಜ್ಯ, ಕುಟುಂಬ, ಧನ, ಧಾನ್ಯ, ಬಲ, ಪುತ್ರರೆಲ್ಲರನ್ನೂ ಕೊಟ್ಟು ಬಿಡುತ್ತೇನೆ.

೩೪. ಕ್ಷತ್ರಿಯರಿಗೆ ಇದು ಧರ್ಮವು. ಸ್ವಾಮಿಯಾದರೂ ಸರಿ. ಧರ್ಮ ಯುದ್ಧವು. ಅಯೋಗ್ಯವಲ್ಲ. ಅದರಲ್ಲೂ ರಾಮನನ್ನು ನೋಡುವ ಇಚ್ಛೆಯಿಂದ ಅಧರ್ಮವಲ್ಲವೇ ಅಲ್ಲ.

೩೫. ರಾಮನು ಬರದಿದ್ದರೆ ಶತ್ರುಘ್ನನೇ ಮುಂತಾದ ವೀರರನ್ನು ಕ್ಷಣಕಾಲ ದಲ್ಲಿ ಜಯಿಸಿ ಅವರನ್ನು ಸೆರೆಹಾಕುತ್ತೇನೆ. ಕುದುರೆಯನ್ನೂ ನನ್ನ ಲಾಯದಲ್ಲಿ ಕಟ್ಟಿಸುತ್ತೇನೆ.

೩೬. ಶೇಷನು ಹೇಳಿದನು :—ಇದನ್ನು ಕೇಳಿ ಅಂಗದನು ನಕ್ಕು ಧೈರ್ಯದಿಂದ ಕಠಿಣವಾದ ಮಾತನ್ನು ರಾಜನಿಗೆ ಹೇಳಿದನು.

॥ ಅಂಗದ ಉವಾಚ ॥

ಬುದ್ಧಿಹೀನಃ ಪ್ರವದಸಿ ವೃದ್ಧತ್ವಾತ್ಸಾಗತಾ ತವ ।
ಯತ್ತ್ವಂ ಶತ್ರುಘ್ನನೃಪತಿಂ ಧಿಕ್ಕರೋಷಿ ಧಿಯಾ ಬಲೀ ॥ ೩೭ ॥

ಯೋ ಮಾಂಧಾತೃರಿಪುಂ ದೈತ್ಯಂ ಲವಣಂ ಲೀಲಯಾವಧೀತ್ ।
ಯೇನಾನೇನ ಜಿತಾಸ್ಸಂಖ್ಯೇ ವೈರಿಣಃ ಪ್ರಬಲೋದ್ಧುರಾಃ ॥ ೩೮ ॥

ವಿದ್ಯುನ್ಮಾಲೀ ಹತೋ ಯೇನ ರಾಕ್ಷಸಃ ಕಾಮುಗೇ ಸ್ಥಿತಃ ।
ತಂ ತ್ವಂ ಬಧ್ನಾಸಿ ವೀರೇಂದ್ರಂ ಮತಿಹೀನಃ ಪ್ರಭಾಸಿ ಮೇ । ೩೯ ॥

ಭ್ರಾತೃಜೋ ಯಸ್ಯ ಸುಬಲೀ ಪುಷ್ಕಲಃ ಪರಮಾಸ್ತ್ರವಿತ್ ।
ಯೇನ ರುದ್ರಗಣಸ್ಸಂಖ್ಯೇ ವೀರಭದ್ರಸ್ಸುತೋಷಿತಃ ॥ ೪೦ ॥

ವರ್ಣಯಾಮಿ ಕಿಮೇತಸ್ಯ ಪರಾಕ್ರಾಂತಿಂ ಬಲೋರ್ಜಿತಾಂ ।
ಯೇನ ನಾಸ್ತಿ ಸಮಃ ಪೃಥ್ವ್ಯಾಂ ಬಲೇನ ಯಶಸಾ ಶ್ರಿಯಾ ॥ ೪೧ ॥

---

೩೭. ಅಂಗದನು ಹೇಳಿದನು :—ಬುದ್ಧಿಯಿಲ್ಲದೇ ಮಾತನಾಡುತ್ತೀಯೆ. ಮುದುಕನಾದುದರಿಂದ ಆ ಬುದ್ಧಿಯು ಹೊರಟುಹೋಗಿದೆ. ಶತ್ರುಘ್ನನನ್ನು ಬುದ್ಧಿಯಿಲ್ಲದೇ ಬಲಿಷ್ಠನಂತೆ ಧಿಕ್ಕರಿಸುತ್ತಿರುವೆಯಲ್ಲ.

೩೮. ಅವನು ಮಾಂಧಾತೃವಿಗೆ ಶತ್ರುವಾದ ಲವಣಾಸುರನನ್ನು ಕೊಂದಿದ್ದಾನೆ. ಇನ್ನೂ ಅನೇಕರನ್ನು ಯುದ್ಧದಲ್ಲಿ ಜಯಿಸಿದ್ದಾನೆ.

೩೯. ಕಾಮುಗವಾದ ಪುಷ್ಪಕದಲ್ಲಿ ಸಂಚರಿಸುವ ವಿದ್ಯುನ್ಮಾಲಿಯನ್ನು ಕೊಂದಿದ್ದಾನೆ. ಅವನ ಕುದುರೆಯನ್ನು ಕಟ್ಟುವುದಕ್ಕೆ ಹೋಗುತ್ತೀಯಲ್ಲ. ನೀನು ಬುದ್ಧಿಹೀನನಂತೆ ಕಾಣುತ್ತೀಯೆ.

೪೦. ಅವನ ಅಣ್ಣನ ಮಗನಾದ ಬಲಿಷ್ಠನಾದ ಪುಷ್ಕಳನಿದ್ದಾನೆ. ಅವನು ರುದ್ರಗಣನಾದ ವೀರಭದ್ರನೊಡನೆ ಯುದ್ಧಮಾಡಿದಾಗ ಆ ವೀರಭದ್ರನು ಅವನ ಯುದ್ಧಕ್ಕೆ ಸಂತೋಷಪಟ್ಟಿರುವನು.

೪೧-೪೨. ಅವನ ಪರಾಕ್ರಮವನ್ನೂ ಬಲವನ್ನೂ ಏನೆಂದು ವರ್ಣಿಸಲಿ? ಯಾವನ ಬಲವೂ ಸಂಪತ್ತೂ ಭೂಮಿಯಲ್ಲಿಯೇ ಅಸಾಧಾರಣವಾದುದೋ ಅಂತಹ

ಹನೂಮಾನಸ್ಯ ನಿಕಟೇ ರಘುನಾಥಪದಾಬ್ಜಧೀಃ ।
ಯಸ್ಯಾನೇಕಾನಿ ಕರ್ಮಾಣಿ ಭವಿಷ್ಯಂತಿ ಶ್ರುತಾನಿ ತೇ ॥ ೪೨ ॥

ಸತ್ರಿಕೂಟಾ ರಾಕ್ಷಸಪೂರ್ದಗ್ಧಾ ಯೇನ ಕ್ಷಣಾದ್ಬಲಾತ್ ।
ಅಕ್ಷೋ ಯೇನ ಹತಃ ಪುತ್ರೋ ರಾಕ್ಷಸೇಂದ್ರಸ್ಯ ದುರ್ಮತೇಃ ॥ ೪೩ ॥

ದ್ರೋಣೋ ನಾಮ ಗಿರಿರ್ಯೇನ ಪುಚ್ಛಾಗ್ರೇಣ ಸದ್ಯೈವತಃ ।
ಆನೀತೋ ಜೀವನಾರ್ಥಂ ತು ಸೈನಿಕಾನಾಂ ಮುಹುರ್ಮುಹುಃ ॥ ೪೪ ॥

ಜಾನಾತಿ ರಾಮಶ್ಚಾರಿತ್ರಂ ನಾನ್ಯೋ ಜಾನಾತಿ ಮೂಢಧೀಃ ।
ಯಂ ಕಪೀಂದ್ರಂ ಮನಾಕ್ಸ್ವಾನ್ತಾನ್ನ ವಿಸ್ಮರತಿ ಸೇವಕಂ ॥ ೪೫ ॥

ಸುಗ್ರೀವಾದ್ಯಾಃ ಕಪೀಂದ್ರಾ ಯೇ ಪೃಥ್ವೀಂ ಸರ್ವಾಂ ಗ್ರಸಂತಿ ಯೇ ।
ತೇ ಶತ್ರುಘ್ನಂ ನೃಪಂ ಸರ್ವೇ ಸೇವಂತೇ ಪ್ರೇಕ್ಷಣೋತ್ಸುಕಾಃ ॥ ೪೬ ॥

---

ಶ್ರೀರಾಮನ ಪಾದಸೇವಕನಾದ ಹನುಮಂತನು ಆ ಶತ್ರುಘ್ನನ ಬಳಿ ಇದ್ದಾನೆ. ಅವನ ಕೆಲಸಗಳು ನಿನ್ನ ಕಿವಿಗೆ ಬಿದ್ದಿರಬಹುದು.

೪೩. ತ್ರಿಕೂಟದೊಡನೆ ಕೂಡಿದ ಲಂಕಾಪಟ್ಟಣವನ್ನೇ ಕ್ಷಣಕಾಲದದಲ್ಲಿ ಸುಟ್ಟ ವೀರನವನು. ರಾವಣನ ಮಗನಾದ ಅಕ್ಷನನ್ನು ಕೊಂದಿರುವನು.

೪೪. ಸೈನಿಕರನ್ನು ಬದುಕಿಸಲು ದ್ರೋಣವೆಂಬ ಪರ್ವತವನ್ನು ದೇವತೆಗಳೊಡನೆ ಬಾಲದಲ್ಲಿ ಕಟ್ಟಿ ತೆಗೆದುಕೊಂಡು ಬಂದನು.

೪೫. ರಾಮನೊಬ್ಬನೇ ಅವನ ಚರಿತ್ರೆಯನ್ನು ಬಲ್ಲನು. ಮತ್ತೊಬ್ಬನು ತಿಳಿಯನು. ಅದರಿಂದಲೇ ಆ ಸೇವಕನಾದ ಹನುಮಂತನನ್ನು ಮನಸ್ಸಿನಿಂದಲೇ ಹೊರಗೆ ಬಿಡಲಾರನು.

೪೬. ಸುಗ್ರೀವನೇ ಮುಂತಾದ ಕಪಿಗಳು ಭೂಮಿಯನ್ನೇ ನುಂಗುತ್ತಾರೆ. ಅಂತಹವರು ಶತ್ರುಘ್ನನನ್ನು ಸೇವಿಸುತ್ತ ಅವನ ಹುಬ್ಬುಸಂಜ್ಞೆಯನ್ನು ಎದಿರುನೋಡುತ್ತಾರೆ.

ಕುಶಧ್ವಜೋ ನೀಲರತ್ನೋ ರಿಪುತಾಪೋ ಮಹಾಸ್ತ್ರವಿತ್ ।
ಪ್ರತಾಪಾಗ್ರ್ಯಸ್ಸುಬಾಹುಶ್ಚ ವಿಮಲಸ್ಸುಮದಸ್ತಥಾ ॥ ೪೭ ॥

ರಾಜಾ ವೀರಮಣಿಸ್ಸತ್ಯಯುಕ್ತೋ ರಾಮಸ್ಯ ಸೇವಕಃ ।
ಏತೇಽನ್ಯೇಽಪಿ ನೃಪಾ ಭೂಮ್ನಃ ಪತಯಃ ಪರ್ಯುಪಾಸತೇ ॥ ೪೮ ॥

ತತ್ರ ತ್ವಂ ವೀರಜಲಧೌ ಮಶಕಃ ಕೋ ಭವಾನಿತಿ ।
ತಜ್ಞಾತ್ವಾಽಗಚ್ಛ ಶತ್ರುಘ್ನಂ ಕೃಪಾಲುಂ ಪುತ್ರಕೈರ್ಯುತಃ ॥ ೪೯ ॥

ವಾಹಂ ಸಮರ್ಪ್ಯ ಗಂತಾಸಿ ರಾಮಂ ರಾಜೀವಲೋಚನಂ ।
ದೃಷ್ಟ್ವಾ ಕೃತಾರ್ಥೀಕುರುಷೇ ಸ್ವಾಂಗಾನಿ ಜನುಷಾ ಸಹ ॥ ೫೦ ॥

॥ ಶೇಷ ಉವಾಚ ॥

ರಾಜಾ ಪ್ರೋವಾಚ ತಂ ದೂತಂ ಪ್ರಬ್ರುವಂತಮನೇಕಧಾ ।
ಏತಾನ್ದರ್ಶಯಸಿ ಕ್ಷಿಪ್ರಂ ಸರ್ವೇ ನ ಮಮ ಗೋಚರಾಃ ॥ ೫೧ ॥

ಯಾದೃಶಂ ಮದ್ಬಲಂ ದೂತ ತಾದೃಶಂ ನ ಹನೂಮತಃ ।
ಯೋ ರಾಮಂ ಪೃಷ್ಠತಃ ಕೃತ್ವಾ ಪ್ರಾಗಾದ್ಯಾಗಸ್ಯ ಪಾಲನೇ ॥ ೫೨ ॥

---

೪೭–೪೮. ಕುಶಧ್ವಜ, ನೀಲರತ್ನ, ರಿಪುತಾಪ, ಪ್ರತಾಪಾಗ್ರ್ಯ, ಸುಬಾಹು, ವಿಮಲ, ಸುಮದ, ವೀರಮಣಿ, ಸತ್ಯವಾನ್ ಇವರೂ ಈ ಹಯದ ಸೇವಕರೂ ಮತ್ತು ರಾಮಸೇವಕರೂ ಅಲ್ಲದೆ ಇನ್ನೂ ಅನೇಕಜನ ರಾಜರು ಆ ಶತ್ರುಘ್ನನನ್ನು ಸೇವಿಸುತ್ತಾರೆ.

೪೯. ಆ ವೀರರ ಸಮುದ್ರದಲ್ಲಿ ನೀನೊಬ್ಬ ಸೊಳ್ಳೆ. ನೀನು ಮಹಾ ಯಾರು ? ಅದನ್ನು ತಿಳಿದು ಕೃಪಾಳುವಾದ ಶತ್ರುಘ್ನನನ್ನು ಕುಟುಂಬದೊಡನೆ ಶರಣು ಹೊಂದು.

೫೦. ಕುದುರೆಯನ್ನು ಸಮರ್ಪಿಸಿ ಹೊರಡು. ಅನಂತರ ರಾಮನನ್ನು ನೋಡಿ ನಿನ್ನ ಅಂಗಗಳನ್ನೂ ಜನ್ಮವನ್ನೂ ಸಾರ್ಥಕಮಾಡಿಕೋ.

೫೧. ಶೇಷನು ಹೇಳಿದನು:—ಇದನ್ನು ಕೇಳಿ ರಾಜನು ಅಂಗದನಿಗೆ ಹೇಳಿದನು. ಇವರೆಲ್ಲರನ್ನೂ ಬೇಗ ತೋರಿಸುತ್ತೀಯಂತೆ. ಇವರೊಬ್ಬನನ್ನೂ ನಾನು ಕಾಣೆನು.

೫೨. ಎಲೈ ದೂತನೇ, ನನಗಿರುವ ಬಲವು ಹನುಮಂತನಿಗಿಲ್ಲ. ರಾಮನನ್ನು ಹಿಂದೆ ಬಿಟ್ಟು ತಾನು ಕುದುರೆ ಕಾಯುವುದಕ್ಕೆ ಬಂದಿರುವನಲ್ಲ.

ಯದ್ಯಹಂ ಮನಸಾ ವಾಚಾ ಕರ್ಮಣಾ ಕುತುಕಾನ್ವಿತಃ ।
ಭಜಾಮಿ ರಾಮಂ ತರ್ಹ್ಯಾಶು ದರ್ಶಯಿಷ್ಯತಿ ಸ್ವಾಂ ತನುಂ ॥ ೫೩ ॥
ಅನ್ಯಥಾ ಹನುಮನ್ಮುಖ್ಯಾ ವೀರಾ ಬಧ್ನಂತು ಮಾಂ ಬಲಾತ್ ।
ಗೃಹ್ಣಂತು ವಾಹಂ ತರಸಾ ರಾಮಭಕ್ತಿಸಮನ್ವಿತಾಃ ॥ ೫೪ ॥
ಗಚ್ಛ ತ್ವಂ ನೃಪಶತ್ರುಘ್ನಂ ಕಥಯಸ್ವ ಮನೋದಿತಂ ।
ಸಜ್ಜೀಭವಂತು ಸುಭಟಾ ಏಷ ಯಾಮಿ ರಣೇ ಬಲೀ ॥ ೫೫ ॥
ಸ ವಿಚಾರ್ಯ ಯಥಾಯುಕ್ತಂ ಕರಿಷ್ಯತಿ ರಣಾಂಗಣೇ ।
ಮೋಚಯಂತು ಮಹಾವಾಹಂ ನ ವಾ ಮಾಮಾದದಂತು ತೇ ॥ ೫೬ ॥

॥ ಶೇಷ ಉವಾಚ ॥

ಇತಿ ಶ್ರುತ್ವಾ ಸ್ಮಿತಂ ಕೃತ್ವಾ ಯಯೌ ವೀರೋ ಯಶೋ ನೃಪಃ ।
ಗತ್ವಾ ನಿವೇದಯಾಮಾಸ ಯಥೋಕ್ತಂ ಸುರಥೇನ ವೈ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಲಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಅಂಗದದೂತತ್ವಂ ನಾಮ ಪಂಚಾಶತ್ತಮೋಽಧ್ಯಾಯಃ

---

೫೩. ನಾನು ಮನಸ್ಸು, ಮಾತು, ಶರೀರಗಳಿಂದ ರಾಮನನ್ನು ಭಜಿಸಿದ್ದರೆ ತಾನೇ ಪ್ರತ್ಯಕ್ಷನಾಗುತ್ತಾನೆ.

೫೪. ಹಾಗಿಲ್ಲದಿದ್ದರೆ ವೀರನಾದ ಹನುಮಂತನೇ ಮುಂತಾದ ರಾಮಭಕ್ತರು ನನ್ನನ್ನು ಬಲದಿಂದ ಕಟ್ಟಿ ಕುದುರೆಯನ್ನು ಹಿಡಿದುಕೊಳ್ಳಲಿ.

೫೫. ನೀನು ಹೋಗು. ಶತ್ರುಘ್ನನಿಗೆ ನಾನು ಹೇಳಿದುದನ್ನು ಹೇಳು. ಸುಭಟರೆಲ್ಲರೂ ಸಿದ್ಧವಾಗಲಿ. ಇಗೋ ಯುದ್ಧಕ್ಕೆ ಬರುತ್ತೇನೆ.

೫೬. ಅವನು ಯೋಚಿಸಿ ಹೇಗೆಬೇಕೋ ಹಾಗೆ ಮಾಡಲಿ. ಕುದುರೆಯನ್ನು ಬಿಡಿಸಿಕೊಳ್ಳಲಿ. ಇಲ್ಲದಿದ್ದರೆ ನನ್ನನ್ನು ಹಿಡಿದುಕೊಳ್ಳಲಿ.

೫೭. ಶೇಷನು ಹೇಳಿದನು:—ಇದನ್ನು ಕೇಳಿ ನಗುತ್ತಾ ಅಂಗದನು ಶತ್ರುಘ್ನನಲ್ಲಿಗೆ ಹೋದನು. ಶತ್ರುಘ್ನನಿಗೆ ಸುರಥನು ಹೇಳಿದುದನ್ನೆಲ್ಲಾ ಹೇಳಿದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಅಂಗದನ ದೂತತ್ವವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕಪಂಚಾಶತ್ತಮೋಽಧ್ಯಾಯಃ

---

॥ ಶೇಷ ಉವಾಚ ॥

ತಚ್ಛ್ರುತ್ವಾ ಭಾಷಿತಂ ತಸ್ಯ ಸುರಥಸ್ಯಾಂಗದಾನನಾತ್ ।
ಸಜ್ಜೀಭೂತಾ ರಣೇ ಸರ್ವೇ ರಥಸ್ಥಾ ರಣಕೋವಿದಾಃ ॥ ೧ ॥

ಪಟಹಾನಾಂ ನಿನಾದೋಽಭೂದ್ಭೇರೀನಾದಸ್ತಥೈವ ಚ ।
ವೀರಾಣಾಂ ಗರ್ಜನಾನಾದಾಃ ಪ್ರಾದುರ್ಭೂತಾ ರಣಾಂಗಣೇ ॥ ೨ ॥

ರಥಚೀತ್ಕಾರಶಬ್ದೇನ ಗಜಾನಾಂ ಬೃಂಹಿತೇನ ಚ ।
ವ್ಯಾಪ್ತಂ ತತ್ಸಕಲಂ ವಿಶ್ವಂ ದಿವಂ ಯಾತೋ ಮಹಾರವಃ ॥ ೩ ॥

ರಣೋತ್ಸಾಹೇನ ಸಂಯುಕ್ತಾ ವೀರಾ ರಣವಿಶಾರದಾಃ ।
ಕುರ್ವಂತಿ ವಿವಿಧಾನ್ನಾದಾನ್ಕಾತರಸ್ಯ ಭಯಂಕರಾನ್ ॥ ೪ ॥

---

## ಐವತ್ತೊಂದನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಆ ಸುರಥನು ಹೇಳಿದಂತೆಯೇ ಅಂಗದನು ಹೇಳಲು ಅದನ್ನು ಕೇಳಿ ಎಲ್ಲರೂ ಯುದ್ಧಕ್ಕೆ ಸಿದ್ಧರಾದರು.

೨. ಆ ರಣಭೂಮಿಯಲ್ಲಿ ತಮಟೆಯ ಧ್ವನಿಯೂ, ಭೇರಿಗಳ ಧ್ವನಿಯೂ, ವೀರರ ಗರ್ಜನೆಯೂ ಉಂಟಾದುವು.

೩. ರಥದ ಚೀತ್ಕಾರಶಬ್ದವೂ ಆನೆಗಳ ಬೃಂಹಿತವೂ ಈ ಲೋಕವೆಲ್ಲೆಲ್ಲಾ ತುಂಬಿ ದೇವಲೋಕವನ್ನೂ ಮುಟ್ಟಿತು.

೪. ಯುದ್ಧಾಸಕ್ತರಾದ ವೀರರು ಮಾಡುವ ಗರ್ಜನೆಗಳು ಭೀರುಗಳಿಗೆ ಭಯವನ್ನು ಉಂಟುಮಾಡುತ್ತಿದ್ದವು.

ಏವಂ ಕೋಲಾಹಲೇ ವೃತ್ತೇ ಸುರಥೋ ನಾಮ ಭೂಮಿಪಃ ।
ಸ್ವಸುತೈಸ್ಸೈನಿಕೈಶ್ಚಾಥ ವೃತಃ ಪ್ರಾಯಾದ್ರಣಾಂಗಣಂ ॥ ೫ ॥

ಗಜೈ ರಥೈರ್ಹಯೈಃ ಪತ್ತಿವ್ರಜೈಃ ಪೂರ್ಣಂ ತು ಮೇದಿನೀಂ ।
ಕುರ್ವನ್ಸಮುದ್ರ ಇವ ತಾಂ ಪ್ಲಾವಯನ್ಸ್ವವಶೇ ಭಟೈಃ ॥ ೬ ॥

ಶಂಖನಾದೇನ ಸಂಘುಷ್ಟಂ ಜಯನಾದೈಸ್ತಥೈವ ಚ ।
ವೀಕ್ಷ್ಯ ತಂ ಪ್ರಧನೋದ್ಯುಕ್ತಂ ಸುಮತಿಂ ಪ್ರಾಹ ಭೂಮಿಪಃ ॥ ೭ ॥

॥ ಶತ್ರುಘ್ನ ಉವಾಚ ॥

ಏಷ ರಾಜಾ ಸಮಾಯಾತೋ ಮಹಾಸೈನ್ಯಪರಿವೃತಃ ।
ಅತ್ರ ಯತ್ಕೃತ್ಯಮಸ್ಮಾಕಂ ತದ್ವದಸ್ವ ಮಹಾಮತೇ ॥ ೮ ॥

॥ ಸುಮತಿರುವಾಚ ॥

ಯೋದ್ಧವ್ಯಮತ್ರ ಬಹುಭಿರ್ವೀರೈ ರಣವಿಶಾರದೈಃ ।
ಪುಷ್ಕಲಾದಿಭಿರತ್ಯುಗ್ರೈಃ ಸರ್ವಶಸ್ತ್ರಾಸ್ತ್ರಕೋವಿದೈಃ ॥ ೯ ॥

ರಾಜ್ಞಾ ಸಹ ಸಮೀರಸ್ಯ ಪುತ್ರಃ ಪರಮಶೌರ್ಯವಾನ್ ।
ಯುದ್ಧಂ ಕರೋತು ಸುಬಲಃ ಪರಯುದ್ಧವಿಶಾರದಃ ॥ ೧೦ ॥

---

೫. ಈರೀತಿ ಕೋಲಾಹಲವಾಗುತ್ತಿರಲು ಸುರಥನು ತನ್ನ ಮಕ್ಕಳೊಡನೆಯೂ, ಸೈನಿಕರೊಡನೆಯೂ ಕೂಡಿ ಯುದ್ಧಕ್ಕೆ ಹೊರಟನು.

೬. ಆನೆ ಕುದುರೆ ಕಾಲಾಳುಗಳಿಂದ ಭೂಮಿಯು ತುಂಬುತ್ತಾ ಸಮುದ್ರವು ಭೂಮಿಯನ್ನು ನೆನೆಸುವುದಕ್ಕೆ ಬಂದಿದೆಯೋ ಎಂಬಂತಿದ್ದಿತು.

೭. ಶಂಖಧ್ವನಿಯಿಂದಲೂ, ಜಯಧ್ವನಿಯಿಂದಲೂ ಕೂಡಿದ ಶತ್ರುಸೈನ್ಯವನ್ನು ನೋಡಿ ಶತ್ರುಘ್ನನು ಸುಮತಿಯನ್ನು ಕುರಿತಿಂತೆಂದನು.

೮. ಇಗೋ ಆ ರಾಜನು ಬಂದನು. ಸೈನ್ಯಗಳೂ ಬರುತ್ತಿವೆ. ಈಗೇನು ಮಾಡಬೇಕೆಂಬುದನ್ನು ನನಗೆ ಹೇಳು.

೯. ಸುಮತಿಯು ಹೇಳಿದನು ರಣವಿಶಾರದರಾದ ಪುಷ್ಕಲನೇ ಮುಂತಾದವರು ಈಗ ಯುದ್ಧಮಾಡಬೇಕು.

೧೦. ರಾಜನೊಡನೆ ಯುದ್ಧವಿಶಾರದನೂ ಬಲಿಷ್ಠನೂ ಆದ ಹನುಮಂತನು ಯುದ್ಧಮಾಡಲಿ.

॥ ಶೇಷ ಉವಾಚ ॥

ಇತಿ ಬ್ರುತೇ ಮಹಾಮಾತ್ಯೇ ಯಾವತ್ತಾವನ್ನೃಪಾತ್ಮಜಾಃ ।
ರಣಾಂಗಣೇ ಧನೂಂಷ್ಯಪ್ಯಾ ಸ್ಫಾರಯಾಮಾಸುರುದ್ಧತಾಃ ॥ ೧೧ ॥

ತಾನ್ವೀಕ್ಷ್ಯ ಯೋಧಾಸ್ಸುಬಲಾಃ ಪುಷ್ಕಲಾದ್ಯಾ ಬಲೋತ್ಕಟಾಃ ।
ಅಭಿಜಗ್ಮುಃ ಸ್ಯಂದನೈಃ ಸ್ವೈರ್ಧನೂಂಷಿ ದಧತೋ ಮತಾಃ ॥ ೧೨ ॥

ಚಂಪಕೇನ ಸಮಂ ವೀರಃ ಪುಷ್ಕಲಃ ಪರಮಾಸ್ತ್ರವಿತ್ ।
ದ್ವೈರಥೇನೈವ ಯುಯುಧೇ ಮಹಾವೀರೇಣ ಪಾಲಿತಃ ॥ ೧೩ ॥

ಮೋಹಕಂ ಯೋಧಯಾಮಾಸ ಜಾನಕಿಃ ಸಕುಶಧ್ವಜಃ ।
ರಿಪುಂಜಯೇನ ವಿಮಲೋ ದುರ್ವಾರೇಣ ಸುಬಾಹುಕಃ ॥ ೧೪ ॥

ಪ್ರತಾಪಿನಾ ಪ್ರತಾಪಾಗ್ರ್ಯೋ ಬಲಮೋದೇನ ಚಾಂಗದಃ ।
ಹರ್ಯಕ್ಷೇಣ ನೀಲರತ್ನಃ ಸಹದೇವೇನ ಸತ್ಯವಾನ್ ॥ ೧೫ ॥

---

೧೧. ಶೇಷನು ಹೇಳಿದನು :—ಮಂತ್ರಿಯು ಹೀಗೆಂದು ಹೇಳುವುದರೊಳಗೆ ಆ ರಾಜನಮಕ್ಕಳೆಲ್ಲರೂ, ಧನುಸ್ಸನ್ನು ಠೇಂಕರಿಸುತ್ತಾ ಬಂದರು.

೧೨. ಅವರನ್ನು ನೋಡಿ ಪುಷ್ಕಲನೇ ಮುಂತಾದ ವೀರರು ರಥದಲ್ಲಿ ಕುಳಿತು ಧನುಸ್ಸನ್ನು ಹಿಡಿದುಬಂದರು.

೧೩. ಚಂಪಕನೊಡನೆ ವೀರನಾದ ಪುಷ್ಕಲನು ವೀರರಿಂದ ರಕ್ಷಿಸಲ್ಪಟ್ಟವನಾಗಿ ತಾನೊಬ್ಬನೇ ಯುದ್ಧಮಾಡಿದನು.

೧೪. ಕುಶಧ್ವಜನೊಡನೆ ಕೂಡಿದ ಲಕ್ಷ್ಮೀನಿಧಿಯು ಮೋಹಕನೊಡನೆಯೂ, ವಿಮಲನು ರಿಪುಂಜಯನೊಡನೆಯೂ, ಸುಬಾಹುಕನು ದುರ್ವಾರನೊಡನೆಯೂ ಎದುರಿಸಿದರು.

೧೫. ಪ್ರತಾಪಿಯೊಡನೆ ಪ್ರತಾಪಾಗ್ರ್ಯನೂ, ಬಲಮೋದನೊಡನೆ ಅಂಗದನೂ, ಹರ್ಯಕ್ಷನೊಡನೆ ನೀಲರತ್ನನೂ ಸಹದೇವನೊಡನೆ ಸತ್ಯವಂತನೂ ಯುದ್ಧ ಮಾಡಿದರು.

ರಾಜಾ ವೀರಮಣಿರ್ಭೂರಿದೇವೇನ ಯುಯುಧೇ ಬಲೀ ।
ಅಸುತಾಪೇನ ಚೋಗ್ರಾಶ್ವೋ ಯುಯುಧೇ ಬಲಸಂಯುತಃ ॥ ೧೬ ॥

ದ್ವೈರಥೇನ ಮಹದ್ಯುದ್ಧಮಕುರ್ವನ್ಯುದ್ಧಕೋವಿದಾಃ ।
ಸರ್ವಶಸ್ತ್ರಾಸ್ತ್ರಕುಶಲಾಃ ಸರ್ವೇ ಬುದ್ಧಿವಿಶಾರದಾಃ ॥ ೧೭ ॥

ಏವಂ ಪ್ರವೃತ್ತೇ ಸಂಗ್ರಾಮೇ ಸುರಥಸ್ಯ ಸುತೈಸ್ತದಾ ।
ಅತ್ಯಂತಂ ಕದನಂ ತತ್ರ ಬಭೂವ ಮುನಿಸತ್ತಮ ॥ ೧೮ ॥

ಪುಷ್ಕಲಶ್ಚಂಪಕಂ ಪ್ರಾಹ ಕಿಂನಾಮಾಸಿ ನೃಪಾತ್ಮಜ ।
ಧನ್ಯೋಽಸಿ ಯೋ ಮಯಾ ಸಾರ್ಧಂ ರಣಮುಧ್ಯಮುಪೇಯಿವಾನ್ ॥ ೧೯ ॥

ಇದಾನೀಂ ತಿಷ್ಠ ಕಿಂ ಯಾಸಿ ಕಥಂ ತೇ ಜೀವಿತಂ ಭವೇತ್ ।
ಏಹಿ ಯುದ್ಧಂ ಮಯಾ ಸಾರ್ಧಂ ಸರ್ವಶಸ್ತ್ರಾಸ್ತ್ರಕೋವಿದ ॥ ೨೦ ॥

ಇತ್ಯಭಿವ್ಯಾಹೃತಂ ತಸ್ಯಂ ಶ್ರುತ್ವಾ ರಾಜಾತ್ಮಜೋ ಬಲೀ ।
ಜಗಾದ ಪುಷ್ಕಲಂ ವೀರೋ ಮೇಘಗಂಭೀರಯಾ ಗಿರಾ ॥ ೨೧ ॥

---

೧೬. ವೀರಮಣಿಯು ಭೂರಿದೇವನೊಡನೆಯೂ, ಉಗ್ರಾಶ್ವನು ಅಸುತಾಪನೊಡನೆಯೂ ಯುದ್ಧಮಾಡಿದರು.

೧೭. ಯುದ್ಧಬಲ್ಲವರು ದ್ವೈರಥನಾದ ಪುಷ್ಕಳನೊಡನೆ ಯುದ್ಧಮಾಡಿದರು. ಇವರಲ್ಲಿ ಎಲ್ಲರೂ ಶಸ್ತ್ರಕುಶಲರು, ಬುದ್ಧಿವಂತರು.

೧೮. ಸುರಥನ ಮಕ್ಕಳೊಡನೆ ಈರೀತಿ ಯುದ್ಧವು ನಡೆಯಲು ಅಲ್ಲಿ ಬಹು ಭಯಾನಕವಾಗಿದ್ದಿತು.

೧೯. ಆಗ ಪುಷ್ಕಳನು ಚಂಪಕನನ್ನು ಕುರಿತು ಅಯ್ಯಾ ರಾಜಪುತ್ರನೇ ನಿನ್ನ ಹೆಸರೇನು ? ನನ್ನೊಡನೆ ಯುದ್ಧರಂಗವಲ್ಲಿ ಯುದ್ಧಮಾಡುತ್ತಿರುವೆಯಲ್ಲ, ನೀನೇ ಧನ್ಯನು.

೨೦. ಈಗ ನಿಲ್ಲು ಹೋಗಬೇಡ ನಿನ್ನ ಪ್ರಾಣವು ಹೇಗೆ ನಿಲ್ಲುವುದು ? ಶಸ್ತ್ರಾಸ್ತ್ರಗಳಲ್ಲಿ ಕೋವಿದನಾಗಿದ್ದೀಯೆ. ನನ್ನೊಡನೆ ಸರಿಯಾಗಿ ಯುದ್ಧಕ್ಕೆ ನಿಲ್ಲು.

೨೧. ಹೀಗೆ ಹೇಳಿದುದನ್ನು ಚಂಪಕನು ಕೇಳಿ ಗಂಭೀರವಾಗಿ ಇಂತೆಂದನು.

॥ ಚಂಪಕ ಉವಾಚ ॥

ನ ಚ ನಾಮ್ನಾ ಕುಲೇನೇದಂ ಯುದ್ಧಮತ್ರ ಭವಿಷ್ಯತಿ ।
ತಥಾಪಿ ತವ ವಕ್ಷ್ಯೇಽಹಂ ಸ್ವನಾಮ ಬಲಪೂರ್ವಕಂ ॥ ೨೨ ॥

ಮಮ ಮಾತಾ ರಘೋರ್ನಾಥೋ ಮತ್ಪಿತಾ ರಾಘವಸ್ತ್ವತಃ ।
ಮಮ ಬಂಧೂ ರಾಮಚಂದ್ರಃ ಸ್ವಜನೋ ಮಮ ರಾಘವಃ ॥ ೨೩ ॥

ಮನ್ನಾಮ ರಾಮದಾಸೋಽಸ್ಮಿ ಸದಾ ರಾಮಸ್ಯ ಸೇವಕಃ ।
ತಾರಯಿಷ್ಯತಿ ಮಾಂ ಯುದ್ಧೇ ರಾಮೋ ಭಕ್ತ್ಯೈಕ್ಯಸಾಕರಃ ॥ ೨೪ ॥

ಲೋಕಾನಾಂ ಮತಮಾಸ್ಥಾಯ ಪ್ರಬ್ರವೀಮಿ ತವಾಧುನಾ ।
ಸುತೋ ಸುರಥರಾಜಸ್ಯ ಮಾತಾ ವೀರವತೀ ಮಮ ॥ ೨೫ ॥

ಮನ್ನಾಮಾ ಯೋ ಮಧೌ ಸರ್ವಾನ್ಭೋಗಾನ್ವಿದಧಾತಿ ಯಃ ।
ಮಧುಪಾ ಯಂ ರಸಾವಾಸಂ ತ್ಯಜಂತಿ ಮಧುಮೋಹಿತಾಃ ॥ ೨೬ ॥

ವರ್ಣೇನ ಸ್ವರ್ಣಸದೃಶೋ ಮಧ್ಯೇ ಲಿಂಗವಪುರ್ಧರಃ ।
ತದಾಖ್ಯಯಾಭಿಧಾಂ ವೀರ ಜಾನೀಹಿ ಮಮ ಮೋಹಿನೀಂ ॥ ೨೭ ॥

---

೨೨. ಹೆಸರಿನಿಂದಾಗಲಿ ಕುಲದಿಂದಾಗಲಿ ಇಲ್ಲಿ ಯುದ್ಧ ನಡೆವುದಿಲ್ಲ. ಆದಾಗ್ಯೂ ನನ್ನ ಬಲಪೂರ್ವಕವಾಗಿ ಹೆಸರನ್ನು ಹೇಳುತ್ತೇನೆ.

೨೩-೨೪. ನನ್ನ ತಾಯಿ ರಘುನಾಥನು, ತಂದೆ ರಘುನಾಥನು, ಬಂಧು ರಾಮಚಂದ್ರನು. ಸ್ವಜನವು ರಾಘವನು. ನನ್ನ ಹೆಸರು ರಾಮದಾಸ, ನಾನು ಯಾವಾಗಲೂ ರಾಮನಿಗೆ ಸೇವಕನು ಆ ಭಕ್ತವತ್ಸಲನಾದ ರಾಮನೇ ಯುದ್ಧದಲ್ಲಿ ನನ್ನನ್ನು ಪಾರುಮಾಡುತ್ತಾನೆ.

೨೫-೨೭. ಈಗ ಲೋಕರೀತಿಯನ್ನಾಶ್ರಯಿಸಿ ಹೇಳುತ್ತೇನೆ ಕೇಳು. ನನ್ನ ತಂದೆ ಸುರಥನು. ತಾಯಿಯು ವೀರವತಿಯು. ನನ್ನ ಹೆಸರು ವಸಂತ ಋತುವಿನಲ್ಲಿ ಯಾವುದು ಎಲ್ಲರನ್ನೂ ಶೃಂಗಾರವಂತರನ್ನಾಗಿ ಮಾಡುವುದೋ ಮಧುವನ್ನು ಕುಡಿಯುವ ಜೇನುಹುಳುಗಳು ಯಾವುದರ ಬಳಿಗೆ ಹೋಗುವುದಿಲ್ಲವೋ, ಯಾವುದರ ಬಣ್ಣವು ಚಿನ್ನದ ಬಣ್ಣವೋ ಮಧ್ಯದಲ್ಲಿ ಲಿಂಗವಿದೆಯೋ ಅದರ ಹೆಸರನ್ನು ನನ್ನ ಹೆಸರೆಂದು ತಿಳಿ.

ಯುದ್ಧ್ಯಸ್ವ ಬಾಣೈಃ ಪ್ರಧನೇ ನ ಕೋ ಜೇತುಂ ಹಿ ಮಾಂ ಕ್ಷಮಃ ।
ಇದಾನೀಂ ದರ್ಶಯಿಷ್ಯಾಮಿ ಸ್ವಪರಾಕ್ರಮಮದ್ಭುತಂ ॥ ೨೮ ॥

॥ ಶೇಷ ಉವಾಚ ॥

ಇತಿ ಶ್ರುತ್ವಾ ಮಹದ್ವಾಕ್ಯಂ ಪುಷ್ಕಲೋ ಹೃದಿ ತೋಷಿತಃ ।
ತಂ ದುರ್ಜಯಂ ಮನ್ಯಮಾನಃ ಶರಾನ್ಮುಂಚಸ್ತ್ರಿಶೋಽಭವತ್ ॥ ೨೯ ॥

ಶರಸಂಘಂ ಪ್ರಮುಂಚಂಸ್ತಂ ಕೋಟಿಧಾ ಪುಷ್ಕಲೋ ಬಲೀ ।
ಚಂಪಕಃ ಕೋಪಸಂಯುಕ್ತೋ ಧನುಸ್ಸಜ್ಜಮಥಾಕರೋತ್ ॥ ೩೦ ॥

ಮುಮೋಚ ನಿಶಿತಾನ್ಬಾಣಾನ್ವೈರಿವೃಂದವಿದಾರಣಾನ್ ।
ಸ್ವನಾಮಚಿಹ್ನಿತಾನ್ಸ್ವರ್ಣಪುಂಖಭಾಗಸಮನ್ವಿತಾನ್ ॥ ೩೧ ॥

ತಾಂಶ್ಚಿಚ್ಛೇದ ಮಹಾವೀರಃ ಪುಷ್ಕಲಃ ಪ್ರಧನಾಂಗಣೇ ।
ಶರಾಂಧಕಾರಂ ಸರ್ವತ್ರ ಮುಂಚನ್ಬಾಣಾನ್ಶಿಲಾಶಿತಾನ್ ॥ ೩೨ ॥

ಸ್ವಬಾಣಚ್ಛೇದನಂ ದೃಷ್ಟ್ವಾ ಕೃತಂ ವೀರೇಣ ಚಂಪಕಃ ।
ಆಹ್ವಯಾಮಾಸ ಬಲಿನಂ ಪುಷ್ಕಲಂ ಕೋಪಪೂರಿತಃ ॥ ೩೩ ॥

---

೨೮. ಯುದ್ಧದಲ್ಲಿ ಬಾಣಗಳಿಂದ ಯುದ್ಧಮಾಡು. ನನ್ನನ್ನು ಯಾವನೂ ಜಯಿಸಲಾರನು. ಈಗ ನನ್ನ ಅದ್ಭುತ ಪರಾಕ್ರಮವನ್ನು ತೋರಿಸುತ್ತೇನೆ.

೨೯. ಶೇಷನು ಹೇಳಿದನು :—ಪುಷ್ಕಳನು ಈ ಮಾತನ್ನು ಕೇಳಿ ಮನಸ್ಸಿನಲ್ಲಿ ಸಂತೋಷಪಟ್ಟು ಅವನನ್ನು ಜಯಿಸುವುದಸಾಧ್ಯವೆಂದು ತಿಳಿದು ಬಾಣಗಳನ್ನು ಬಿಡುತ್ತಿದ್ದನು.

೩೦. ಅನಂತರ ಪುಷ್ಕಳನು ಬಾಣಗಳ ಮಳೆಯನ್ನೇ ಸುರಿಸಿದನು. ಚಂಪಕನು ಕೋಪಗೊಂಡು ಧನುಸ್ಸನ್ನು ಹೆದೆಯೇರಿಸಿದನು.

೩೧. ತನ್ನ ಹೆಸರಿನಿಂದ ಗುರ್ತುಮಾಡಿದ ಅನೇಕ ಹರಿತವಾದ ಬಾಣಗಳನ್ನು ಬಿಟ್ಟನು.

೩೨. ವೀರನಾದ ಪುಷ್ಕಲನು ಆ ಕ್ರೂರವಾದ ಮತ್ತು ಕಠಿಣವಾದ ಬಾಣಗಳನ್ನು ಕತ್ತರಿಸಿದನು. ಈ ಬಾಣಗಳಿಂದ ಎಲ್ಲಾ ಕಡೆಯಲ್ಲಿಯೂ ಕತ್ತಲೆಯಾಯಿತು.

೩೩. ಚಂಪಕನು ತನ್ನ ಬಾಣದ ಛೇದವನ್ನು ನೋಡಿ ಕೋಪದಿಂದ ಪುಷ್ಕಳನ್ನು ಕರೆದನು.

ಮಾ ಪ್ರಯಾಹಿ ರಣಂ ತ್ಯಕ್ತ್ವಾ ಕ್ವ ಬ್ರುವನ್ಸ ಪುನಃ ಪುನಃ ।
ಪುಷ್ಕಲಂ ಹೃದಯೇ ಬಾಣೈರ್ನಿರ್ಜಘಾನ ದಶಭಿಸ್ತ್ವರನ್ ॥ ೩೪ ॥

ತೇ ಬಾಣಾಃ ಪುಷ್ಕಳಸ್ಯಾಹೋ ಹೃದಯೇ ತೀವ್ರಗಾಮಿನಃ ।
ಆಗತ್ಯ ಹೃದಯೇ ಲಗ್ನಾಃ ಶೋಣಿತಂ ಪಪುರೂರ್ಜಿತಂ ॥ ೩೫ ॥

ತೈರ್ಬಾಣೈರ್ವ್ಯಥಿತೋ ವೀರಃ ಶರಾನ್ಪಂಚ ಸಮಾದದೇ ।
ಸುತೀಕ್ಷ್ಣಾಗ್ರಾನ್ಮಹಾಕೋಪಾದ್ಧರಯನ್ಪರ್ವತಾನಿವ ॥ ೩೬ ॥

ತೇಬಾಣಾಸ್ತಸ್ಯ ಬಾಣಾಶ್ಚ ಪರಸ್ಪರಮುಥೋರ್ಜಿತಾಃ ।
ಆಕಾಶೇ ರಚಿತಾಶ್ಛಿನ್ನಾಃ ಶತಧಾ ರಾಜಸೂನುನಾ ॥ ೩೭ ॥

ಛಿತ್ವಾ ಬಾಣಾನ್ಸುತೀಕ್ಷ್ಣಾಗ್ರಾನ್ಸುರಥಾಂಗೋದ್ಭವೋ ಬಲೀ ।
ಬಾಣಾನ್ ಶತಂ ಸಮಾಧತ್ತ ಪುಷ್ಕಲಂ ತಾಡಿತುಂ ಹೃದಿ ॥ ೩೮ ॥

ತೇ ಬಾಣಾಶ್ಶತಧಾ ಛಿನ್ನಾಃ ಪುಷ್ಕಳೇನ ಮಹಾತ್ಮನಾ ।
ಅಪತನ್ಸಮರೋಪಾನ್ತೇ ಶರಬಾಧಾಪ್ರಪೀಡಿತಾಃ ॥ ೩೯ ॥

---

೩೪. ಯುದ್ಧರಂಗವನ್ನು ಬಿಟ್ಟು ಓಡಿಹೋಗಬೇಡವೆಂದು ಪದೇ ಪದೇ ಹೇಳುತ್ತಾ ಪುಷ್ಕಳನ ಎದೆಗೆ ಬಾಣಗಳಿಂದ ಹೊಡೆದನು.

೩೫. ಆ ಬಾಣಗಳು ಪುಷ್ಕಳನ ಹೃದಯವನ್ನು ಹೊಕ್ಕು ಒಳ್ಳೆಯ ರಕ್ತವನ್ನು ಬೇಕಾದಷ್ಟು ಕುಡಿದುವು.

೩೬. ಆ ಬಾಣಗಳಿಂದ ಪೆಟ್ಟುತಿಂದು ಪುಷ್ಕಳನು ಒಳ್ಳೆಯ ಮೊನೆಯಾದ ಐದು ಬಾಣಗಳನ್ನು ಹೊಡೆದನು.

೩೭. ಆ ಬಾಣಗಳೂ, ಈತನ ಬಾಣಗಳೂ ಒಂದಕ್ಕೊಂದು ಹೋರಾಡಿದುವು. ಅವು ಆಕಾಶದಲ್ಲಿಯೇ ಚೂರು ಚೂರು ಮಾಡಿದುವು.

೩೮. ಸುರಥನ ಮಗನಾದ ಚಂಪಕನು ಆ ಬಾಣಗಳನ್ನೆಲ್ಲಾ ಕತ್ತರಿಸಿ ಪುಷ್ಕಳನ ಎದೆಗೆ ಗುರಿಕಟ್ಟಿ ನೂರು ಬಾಣಗಳನ್ನು ಹೊಡೆದನು.

೩೯. ಪುಷ್ಕಳನು ಆ ಬಾಣಗಳನ್ನು ಕೆಡವಿದನು. ಅವು ಚೂರು ಚೂರಾಗಿ ರಣರಂಗದಲ್ಲಿ ಬಿದ್ದುವು.

ತದಾ ತತ್ಸುಮಹತ್ಕರ್ಮ ದೃಷ್ಟ್ವಾ ರಾಜ್ಞಸ್ಸುತೋ ಬಲೀ ।
ಸಹಸ್ರೇಣ ಶರಾಣಾಂ ಚ ತಾಡಯನ್ವಕ್ಷಸಿ ಸ್ಫುಟಂ ॥ ೪೦ ॥

ತಾನಪ್ಯಾಶು ಪ್ರಚಿಚ್ಛೇದ ಪುಷ್ಕಲಃ ಪರಮಾಸ್ತ್ರವಿತ್ ।
ಪುನರಪ್ಯಾಶು ಸ್ವೇ ಚಾಪೇ ಸಮಾಧತ್ತಾಯುತಂ ಶರಾನ್ ॥ ೪೧ ॥

ತಾನಪ್ಯಾಶು ಪ್ರಚಿಚ್ಛೇದ ಪುಷ್ಕಲಃ ಪರಮಾಸ್ತ್ರವಿತ್ ।
ತತೋಽತ್ಯಂತಂ ಪ್ರಕುಪಿತೋ ಶರವೃಷ್ಟಿಮಥಾಕರೋತ್ ॥ ೪೨ ॥

ಶರವೃಷ್ಟಿಂ ಸಮಾಯಾಂತೀಂ ಮತ್ವಾ ಚಂಪಕವೀರಹಾ ।
ಸಾಧು ಸಾಧು ಪ್ರಶಂಸಂಸ್ತಂ ಪುಷ್ಕಳಂ ಸಮತಾಡಯತ್ ॥ ೪೩ ॥

ಪುಷ್ಕಲಶ್ಚಂಪಕಂ ದೃಷ್ಟ್ವಾ ಮಹಾವೀರ್ಯಸಮನ್ವಿತಂ ।
ಬ್ರಹ್ಮಣೋಽಸ್ತ್ರಂ ಸಮಾಧತ್ತ ಸ್ವಚಾಪೇ ಸರ್ವಶಸ್ತ್ರವಿತ್ ॥ ೪೪ ॥

ತೇನ ಮುಕ್ತಂ ಮಹಾಸ್ತ್ರಂ ತತ್ಪ್ರಜಜ್ವಾಲ ದಿಶೋ ದಶ ।
ಖಂ ರೋದಸೀ ವ್ಯಾಪ್ಯ ವಿಶ್ವಂ ಪ್ರಳಯಂ ಕರ್ತುಮುದ್ಯತಂ ॥ ೪೫ ॥

---

೪೦. ಚಂಪಕನು ಆ ಮಹಾಕಾರ್ಯವನ್ನು ನೋಡಿ ಸಾವಿರ ಬಾಣಗಳನ್ನು ಅವನ ಎದೆಗೆ ಬಿಟ್ಟನು.

೪೧. ಪುಷ್ಕಳನು ಅವನ್ನು ಕತ್ತರಿಸಿ ಹತ್ತು ಸಾವಿರ ಬಾಣಗಳನ್ನು ತನ್ನ ಧನುಸ್ಸಿನಲ್ಲಿ ತೊಟ್ಟನು.

೪೨. ಪುಷ್ಕಳನು ಅವನ್ನು ಕತ್ತರಿಸಿದನಂತರ ಕೋಪಗೊಂಡು ಬಾಣದ ಮಳೆಯನ್ನು ಸುರಿಸಿದನು.

೪೩. ಬಾಣದ ಮಳೆಯೇ ಬರುತ್ತಿರುವುದನ್ನು ನೋಡಿ ಚಂಪಕನು ಸಾಧು ಸಾಧು ಎಂದು ಹೊಗಳುತ್ತ ಪುಷ್ಕಳನನ್ನು ಹೊಡೆದನು.

೪೪. ಪುಷ್ಕಳನು, ಚಂಪಕನು ಬಹು ಪರಾಕ್ರಮಿಯೆಂದು ತಿಳಿದು ಬ್ರಹ್ಮಾಸ್ತ್ರವನ್ನು ಹೂಡಿದನು.

೪೫-೪೬. ಪುಷ್ಕಳನು ಬ್ರಹ್ಮಾಸ್ತ್ರವನ್ನು ಬಿಡಲು ಅದು ಬಹುವಾಗಿ ಜ್ವಲಿ

ಚಂಪಕೋ ಮುಕ್ತಮಸ್ತ್ರಂ ತದ್ದೃಷ್ಟ್ವಾ ಸರ್ವಾಸ್ತ್ರಕೋವಿದಃ ।
ತತ್ಸಂಹರ್ತುಂ ತದೇವಾಸ್ತ್ರಂ ಮುಮೋಚ ರಿಪುಮುದ್ಧತಂ　　॥ ೪೬ ॥

ದ್ವಯೋರೇಕತಮಂ ತೇಜಃ ಪ್ರಲಯಂ ಮೇನಿರೇ ಜನಾಃ ।
ಸಂಜಹಾರ ತದಾಸ್ತ್ರಾಸ್ತ್ರಮೇಕೀಭೂತಂ ಪರಾಸ್ತ್ರಕಂ　　॥ ೪೭ ॥

ತತ್ಕರ್ಮ ಚಾದ್ಭುತಂ ದೃಷ್ಟ್ವಾ ಪುಷ್ಕಲಸ್ತಿಷ್ಠ ತಿಷ್ಠ ಚ ।
ಬ್ರುವನ್ ಶರಾನನೇಯಾಂಸ್ತು ಚಂಪಕಂ ಸ ಕ್ರುಧಾಽಹನತ್　　॥ ೪೮ ॥

ಚಂಪಕಸ್ತಾನ್ ಶರಾನ್ಮುಕ್ತಾನಗಣಯ್ಯ ಮಹಾಮನಾಃ ।
ರಾಮಾಸ್ತ್ರಂ ಪ್ರಮುಮೋಚಾಥ ಪುಷ್ಕಲಂ ಪ್ರತಿ ದಾರುಣಂ　　॥ ೪೯ ॥

ತನ್ಮುಕ್ತಮಸ್ತ್ರಮಾಲೋಕ್ಯ ಚಂಪಕೇನ ಮಹಾತ್ಮನಾ ।
ಛೇತ್ತುಂ ಯಾವನ್ಮನಶ್ಚಕ್ರೇ ತಾವದ್ಗ್ರಸ್ತಶ್ಶರೇಣ ಸಃ　　॥ ೫೦ ॥

---

ಸುತ್ತಾ ಭೂಮ್ಯಾಕಾಶಗಳನ್ನು ವ್ಯಾಪಿಸಲು, ಚಂಪಕನು ಅದನ್ನು ತಡೆಯಲು ತಾನೂ ಬ್ರಹ್ಮಾಸ್ತ್ರವನ್ನೇ ಬಿಟ್ಟನು.

೪೭. ಆವೆರಡೂ ಒಂದೇ ರೀತಿಯಾದ ತೇಜಸ್ಸುಳ್ಳವುಗಳಾಗಿರುವುವನ್ನು ನೋಡಿ ಜನರು ಪ್ರಳಯವಾಗುತ್ತದೆಂದು ತಿಳಿದರು. ಆಗ ಅವೆರಡೂ ಒಂದರಲ್ಲೊಂದು ಸೇರಿ ಶಾಂತವಾಯಿತು.

೪೮. ಆ ಅದ್ಭುತಕರ್ಮವನ್ನು ನೋಡಿ ಪುಷ್ಕಳನು ನಿಲ್ಲು ನಿಲ್ಲು ಎಂದೆನ್ನುತ್ತಾ ಉತ್ತಮವಾದ ಬಾಣಗಳನ್ನು ಬಿಟ್ಟನು.

೪೯. ಚಂಪಕನು ಪುಷ್ಕಳನ ಬಾಣಗಳನ್ನು ಲೆಕ್ಕಿಸದೆ ರಾಮಾಸ್ತ್ರವನ್ನು ಬಿಟ್ಟನು.

೫೦. ಅವನು ಬಿಟ್ಟ ರಾಮಾಸ್ತ್ರವನ್ನು ಕತ್ತರಿಸಲು ಮನಸ್ಸುಮಾಡುವಷ್ಟರಲ್ಲೇ ಆ ಬಾಣವು ಅವನನ್ನು ತಾಕಿತು.

ಬದ್ಧಶ್ಚಂಪಕವೀರೇಣ ರಥೇ ಸ್ವೇ ಸ್ಥಾಪಿತಃ ಪುನಃ ।
ಪುರಂ ಪ್ರೇಷಯಿತುಂ ತಾವನ್ಮನಶ್ಚಕ್ರೇ ಮಹಾಮನಾಃ ॥ ೫೧ ॥

ಹಾಹಾಕಾರೋ ಮಹಾನಾಸೀದ್ಬದ್ಧೇ ಪುಷ್ಕಲಸಂಜ್ಞಿಕೇ ।
ಶತ್ರುಘ್ನಂ ಪ್ರಯಯುರ್ಯೋಧಾಃ ಪಲಾಯನಪರಾಯಣಾಃ ॥ ೫೨ ॥

ಭಗ್ನಾಂಸ್ತಾನ್ವೀಕ್ಷ್ಯ ಶತ್ರುಘ್ನೋ ಹನುಮಂತಮುವಾಚ ಹ ।
ಕೇನ ವೀರೇಣ ಮೇ ಭಗ್ನಂ ಬಲಂ ವೀರೈರಲಂಕೃತಂ ॥ ೫೩ ॥

ತದೋವಾಚ ಮಹೀನಾಥಂ ಪುಷ್ಕಲಂ ಪರವೀರಹಾ ।
ಬಧ್ವಾ ನಯತಿ ವೀರೋಽಸೌ ಚಂಪಕಸ್ಸ್ವಪದೋದ್ಧುರಃ ॥ ೫೪ ॥

ತಸ್ಯೇದೃಗ್ವಾಕ್ಯಮಾಕರ್ಣ್ಯ ಶತ್ರುಘ್ನಃ ಕೋಪಸಂಯುತಃ ।
ಉವಾಚ ಪವನೋದ್ಭೂತಂ ಮೋಚಯಾಶು ನೃಪಾತ್ಮಜಾತ್ ॥ ೫೫ ॥

ಮಹಾಬಲಸ್ಸುತಶ್ಚಾಸ್ಯ ಬಧ್ವಾ ಯಃ ಪುಷ್ಕಲಂ ಭಟಂ ।
ತಸ್ಮಾನ್ಮೋಚಯ ವೀರಾಗ್ರ್ಯ ಕಥಂ ತಿಷ್ಠಸಿ ಚಾಹವೇ ॥ ೫೬ ॥

---

೫೧. ಪುಷ್ಕಳನು ಹಾಗೆಯೇ ಕಟ್ಟಲ್ಪಟ್ಟು ರಥದಲ್ಲಿಯೇ ಬಿದ್ದನು. ಆಗ ಚಂಪಕನು ಪುಷ್ಕಲನನ್ನು ಊರಿಗೆ ಕಳುಹಿಸಬೇಕೆಂದು ಉದ್ದೇಶಪಟ್ಟನು.

೫೨. ಪುಷ್ಕಳನನ್ನು ರಥದಲ್ಲಿ ಕಟ್ಟಲು ಹಾಹಾಕಾರವು ಹುಟ್ಟಿತು. ಯೋಧರೆಲ್ಲಾ ಶತ್ರುಘ್ನನ ಬಳಗೆ ಓಡಿದರು.

೫೩. ಆ ವೀರರೆಲ್ಲರೂ ಓಡುತ್ತಿರುವುದನ್ನು ನೋಡಿ ಶತ್ರುಘ್ನನು ಹನುಮಂತನನ್ನು ಕರೆದು ನನ್ನ ಬಲಿಷ್ಠವೀರರನ್ನು ಯಾರು ಸೋಲಿಸಿದರು? ಎಂದನು.

೫೪. ಆಗ ಹನುಮಂತನು ಚಂಪಕನು ಎಲ್ಲರನ್ನೂ ಜಯಿಸಿ ಪುಷ್ಕಳನನ್ನು ಕಟ್ಟಿ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗುತ್ತಿದ್ದಾನೆ ಎಂದನು.

೫೫. ಹೀಗೆಂದ ಮಾತನ್ನು ಕೇಳಿ ಶತ್ರುಘ್ನನು ಕೋಪಗೊಂಡು ನೀನು ಹೋಗಿಬಿಡಿಸೆಂದು ಹನುಮಂತನಿಗೆ ಹೇಳಿದನು.

೫೬. ಆ ಚಂಪಕನು ಮಹಾಬಲಿಷ್ಠನು. ಆದ್ದರಿಂದಲೇ ಪುಷ್ಕಳನನ್ನು ಕಟ್ಟಿರುವನು. ಅವನಿಂದ ಜಾಗ್ರತೆ ಬಿಡಿಸು. ನಿಂತುಕೊಂಡಿರಬೇಡ

ಏತದ್ವಾಕ್ಯಂ ಸಮಾಕರ್ಣ್ಯ ಹನೂಮಾನೋಮಿತಿ ಬ್ರುವನ್ ।
ಜಗಾಮ ತಂ ಮೋಚಯಿತುಂ ಪುಷ್ಕಲಂ ಚಂಪಕಾದ್ಭಟಾತ್ ॥ ೫೭ ॥

ಹನೂಮಂತಮಥಾಲೋಕ್ಯ ತಂ ಮೋಚಯಿತುಮಾಗತಂ ।
ಬಾಣೈಶ್ಶತೈಶ್ಚ ಸಾಹಸ್ರೈರ್ಜಘಾನ ಪರಕೋಪನಃ ॥ ೫೮ ॥

ಬಾಣಾಂಸ್ತಾನ್ಸ ಬಭಂಜಾಶು ಮುಕ್ತಾಂಸ್ತೇನ ಮಹಾಬಲಃ ।
ಪುನರಪ್ಯೇವಮೇವಾಶು ಬಾಣಾನ್ಮುಂಚನ್ಮಹಾನಭೂತ್ ॥ ೫೯ ॥

ತಾನ್ಸರ್ವಾಂಶ್ಚೂರ್ಣಯಾಮಾಸ ಸಾರಾಚಾನ್ವೈರಿಮೋಚಿತಾನ್ ।
ಶಾಲಂ ಕರೇ ಸಮಾಧೃತ್ಯ ಜಘಾನ ನೃಪನಂದನಂ ॥ ೬೦ ॥

ಶಾಲಂ ತೇನ ವಿನಿರ್ಮುಕ್ತಂ ತಿಲಶಃ ಕೃತವಾನ್ಬಲೀ ।
ಗಜೋ ಹನೂಮತಾ ಮುಕ್ತೋ ನೃಪನಂದನಮಸ್ತಕೇ ॥ ೬೧ ॥

ಸೋಽಪ್ಯಾಹತಶ್ಚಂಪಕೇನ ಮೃತೋ ಭೂಮೌ ಪಪಾತ ಸಃ ।
ಶಿಲಾಸ್ಸ ಮೋಚಯಾಮಾಸ ಹನೂಮಾನ್ಪರಮಾಸ್ತ್ರವಿತ್ ॥ ೬೨ ॥

---

೫೭. ಈ ಮಾತನ್ನು ಕೇಳಿ ಹನುಮಂತನು ಹಾಗೇ ಆಗಲೆಂದು ಪುಷ್ಕಳನನ್ನು ಬಿಡಿಸಲು ಹೋದನು.

೫೮. ಪುಷ್ಕಳನನ್ನು ಬಿಡಿಸಲು ಬಂದ ಹನುಮಂತನನ್ನು ನೋಡಿ ನೂರು, ಸಾವಿರ ಗಟ್ಟಲೆಯಾಗಿ ಅವನ ಮೇಲೆ ಚಂಪಕನು ಬಾಣಗಳನ್ನು ಬಿಟ್ಟನು.

೫೯, ಹನುಮಂತನು ಅವನು ಬಿಟ್ಟ ಬಾಣಗಳನ್ನೆಲ್ಲಾ ಮುರಿದನು. ಹೀಗೆಯೇ ಬಾಣಗಳನ್ನು ಬಿಡುತ್ತಾ ಬಿಡುತ್ತಾ ಕೋಪಗೊಂಡನು.

೬೦. ಆ ಬಾಣಗಳನ್ನೆಲ್ಲಾ ನಾಶಮಾಡಿ ಒಂದು ಸಾಲದ ಮರವನ್ನು ಕಿತ್ತುಕೊಂಡು ಅವನನ್ನೇ ಹೊಡೆದನು.

೬೧. ಆ ಸಾಲ ಮರವನ್ನು ಕೂಡ ಚಂಪಕನು ಪುಡಿ ಪುಡಿಮಾಡಲು ಹನುಮಂತನು ಒಂದು ಆನೆಯನ್ನು ಹಿಡಿದು ಅವನ ತಲೆಯ ಮೇಲೆಸೆದನು.

೬೨. ಚಂಪಕನು ಅದನ್ನು ಕೊಂದು ಕೆಡವಿದನು. ಅನಂತರ ಕಲ್ಲುಗಳನ್ನು ಬೀರಲು ಮೊದಲು ಮಾಡಿದನು.

ಚಂಪಕಸ್ತಾಃ ಶಿಲಾಸ್ಸರ್ವಾಃ ಕ್ಷಣಾಚ್ಚೂರ್ಣಿತವಾನ್ಭೃಶಂ ।
ಬಾಣಯಂತ್ರಿಕಯಾ ಬ್ರಹ್ಮನ್ಮಹಚ್ಚಿತ್ರಮಭೂದಿದಂ ॥ ೬೩ ॥

ಸ್ವಮುಕ್ತಾಸ್ತಾಶ್ಶಿಲಾಸ್ಸರ್ವಾಶ್ಚೂರ್ಣಿತಾ ವೀಕ್ಷ್ಯ ಮಾರುತಿಃ ।
ಚುಕೋಪ ಹೃದಯೇಽತ್ಯಂತಂ ಬಹುವೀರ್ಯಮಿತಿ ಸ್ಮರನ್ ॥ ೬೪ ॥

ಆಗತ್ಯ ಚ ಕರೇ ಧೃತ್ವಾ ನಭಸ್ಯುತ್ಪತಿತಃ ಕಪಿಃ ।
ತಾವಪ್ಯಯೌ ನೇತ್ರಪಥಾದುಪರಿ ಕ್ಷಿಪ್ರವೇಗವಾನ್ ॥ ೬೫ ॥

ಚಂಪಕಸ್ತಂ ಹನೂಮಂತಂ ಯುಯುಧೇ ನಭಸಿ ಸ್ಥಿತಃ ।
ಬಾಹುಯುದ್ಧೇನ ಮಹತಾ ತಾಡಿತಃ ಕಪಿಪುಂಗವಃ ॥ ೬೬ ॥

ಚುಕೋಪ ಮಾನಸೇ ವೀರೋ ಗರ್ವಪರ್ವತದಾರುಣಃ ।
ಪದಾ ಧೃತ್ವಾ ಚಂಪಕಂ ತಂ ತಾಡಯಾಮಾಸ ಭೂತಲೇ ॥ ೬೭ ॥

ತಾಡಿತೋಽಸೌ ಕಪೀಂದ್ರೇಣ ಕ್ಷಣಾದುತ್ಥಾಯ ವೇಗವಾನ್ ।
ಹನೂಮಂತಂ ತು ಲಾಂಗೂಲೇ ಧೃತ್ವಾ ಬಭ್ರಾಮ ಸರ್ವತಃ ॥ ೬೮ ॥

---

೬೩. ಚಂಪಕನು ಆ ಕಲ್ಲುಗಳನ್ನೆಲ್ಲಾ ಬಾಣಯಂತ್ರದಿಂದ ಚೂರ್ಣಮಾಡಿದನು. ಇದು ಬಹು ವಿಚಿತ್ರವಾಗಿದ್ದಿತು.

೬೪. ತಾನು ಎಸೆದ ಕಲ್ಲುಗಳು ಪುಡಿಪುಡಿಯಾದುದನ್ನು ನೋಡಿ ಬಹು ಬಲಿಷ್ಠನೆಂದು ಹನುಮಂತನು ಕೋಪಗೊಂಡನು.

೬೫. ಚಂಪಕನನ್ನು ಹನುಮಂತನು ಹಿಡಿದುಕೊಂಡು ಅಂತರಿಕ್ಷಕ್ಕೆ ಹಾರಲು ಬಿಡಿಸಿಕೊಂಡು ಅಷ್ಟರೊಳಗೆ ಈತನು ಮೇಲಕ್ಕೆ ಹಾರಿದನು.

೬೬. ಚಂಪಕನು ಅಂತರಿಕ್ಷದಲ್ಲಿಯೇ ಹನುಮಂತನೊಡನೆ ಯುದ್ಧಮಾಡುತ್ತಾ ಬಾಹುಯುದ್ಧವಲ್ಲಿ ಒಂದು ಸಾರಿ ಹೊಡೆದನು.

೬೭. ಹನುಮಂತನು ಮನಸ್ಸಿನಲ್ಲೇ ಕೋಪಗೊಂಡು ಚಂಪಕನ ಕಾಲುಗಳನ್ನು ಹಿಡಿಕೊಂಡು ನೆಲದ ಮೇಲೆ ಬಡಿದನು.

೬೮. ಕಪಿಯು ಹೀಗೆ ಹೊಡೆಯಲು ಚಂಪಕನು ಕ್ಷಣದಲ್ಲಿಯೇ ಎದ್ದು ಹನುಮಂತನ ಬಾಲವನ್ನು ಹಿಡಿದುಕೊಂಡು ಗರ್ರನೆ ತಿರುಗಿಸಿದನು.

**ಕಪೀಂದ್ರಸ್ತದ್ಬಲಂ ವೀಕ್ಷ್ಯ ಹಸನ್ಪಾದೇ ಗ್ರಹೀತ್ಪುನಃ ।**
**ಭ್ರಾಮಯಿತ್ವಾ ಶತಗುಣಂ ಗಜೋಪಸ್ಥೇ ಹ್ಯಪಾತಯತ್ ॥ ೬೯ ॥**

**ಪಪಾತ ಭೂಮೌ ಸುಬಲೋ ರಾಜಸೂನುಸ್ಸ ಚಂಪಕಃ ।**
**ಮೂರ್ಛಿತೋ ವೀರಭೂಷಾಢ್ಯಮಲಂಕುರ್ವನ್ರಣಾಂಗಣಂ ॥ ೭೦ ॥**

**ತದಾ ಹಾಹೇತಿ ವೈ ಲೋಕಾಶ್ಚುಕ್ರುಶುಶ್ಚಂಪಕಾನುಗಾಃ ।**
**ಪುಷ್ಕಲಂ ಮೋಚಯಾಮಾಸ ಬದ್ಧಂ ಚಂಪಕಪಾಶತಃ ॥ ೭೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷ**
**ವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ ಪುಷ್ಕಲ**
**ಮೋಚನಂ ನಾಮ ಏಕಪಂಚಾಶತ್ತಮೋಽಧ್ಯಾಯಃ**

---

೬೯. ಕಪಿಯು ಅವನ ಬಲವನ್ನು ತಿಳಿದು ಪುನಃ ಪಾದಗಳನ್ನು ಹಿಡಿದು ಗರ್ರನೆ ತಿರುಗಿಸಿ ಆನೆಗಳ ಮೇಲೆ ಅಪ್ಪಳಿಸಿದನು.

೭೦. ಆಗ ರಾಜಪುತ್ರನಾದ ಚಂಪಕನು ಮೂರ್ಛಿತನಾಗಿ ಯುದ್ಧರಂಗದಲ್ಲಿ ಬಿದ್ದನು.

೭೧. ಆಗ ಚಂಪಕನ ಕಡೆಯುವರೆಲ್ಲರೂ ಹಾಹಾ ಎಂದು ಗೋಳಿಟ್ಟರು. ಹನುಮಂತನು ಚಂಪಕನು ಕಟ್ಟಿರುವ ಪುಷ್ಕಳನನ್ನು ಬಿಡಿಸಿದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಪುಷ್ಕಲಮೋಚನವೆಂಬ
ಐವತ್ತೊಂದನೆಯ ಅಧ್ಯಾಯವು
ಮುಗಿದುದು.

ಶ್ರೀಃ

# ಅಥ ಮಹಾಪುರಾಣೇ ಪಾದ್ಮೆ ಪಾತಾಳಖಂಡೇ ದ್ವಿಪಂಚಾಶತ್ತಮೋऽಧ್ಯಾಯಃ

॥ ಶೇಷ ಉವಾಚ ॥

ಚಂಪಕಂ ಪತಿತಂ ದೃಷ್ಟ್ವಾ ಸುರಥಃ ಕ್ಷತ್ರಿಯೋ ಬಲೀ ।
ಪುತ್ರದುಃಖಪರೀತಾಂಗೋ ಜಗಾಮ ಸ್ಯಂದನಸ್ಥಿತಃ ॥ ೧ ॥

ಕಪೀಂದ್ರಮಾಜುಹಾವಾಥ ಸುರಥಃ ಕೋಪಸಂಯುತಃ ।
ನಿಶ್ವಾಸಾಂಶ್ಚ ಬಹೂನ್ಮುಂಚನ್ಮಹಾಬಲಸಮನ್ವಿತಃ ॥ ೨ ॥

ಆಹ್ವಯಾನಂ ನೃಪಂ ದೃಷ್ಟ್ವಾ ನಿಜಂ ವೀರಃ ಕಪೀಶ್ವರಃ ।
ಜಗಾಮ ತಂ ಮಹಾವೀರೋ ಮಹಾವೇಗಸಮನ್ವಿತಃ ॥ ೩ ॥

ತಮಾಗತಂ ಹನೂಮಂತಂ ತೃಣೀಕುರ್ವನ್ತಮುದ್ಭಟಾನ್ ।
ಉವಾಚ ಸುರಥೋ ರಾಜಾ ಮೇಘಗಂಭೀರಸುಸ್ವರಃ ॥ ೪ ॥

---

## ಐವತ್ತೆರಡನೆಯ ಅಧ್ಯಾಯ

೧. ಶೇಷನು ಹೇಳಿದನು:—ಚಂಪಕನು ಬಿದ್ದುದನ್ನು ನೋಡಿ ಬಲಿಷ್ಠನಾದ ಸುರಥನು ಪುತ್ರಶೋಕದಿಂದ ಕೂಡಿ ರಥದಲ್ಲಿ ಅಲ್ಲಿಗೆ ಹೋದನು.

೨. ಸುರಥನು ಕೋಪಗೊಂಡು ಬಲದಿಂದ ಕೂಡಿ ನಿಟ್ಟುಸಿರುಬಿಡುತ್ತಾ ಕಪೀಂದ್ರನನ್ನು ಕರೆದನು.

೩. ಕಪಿಯು ರಾಜನು ಕರೆದುದನ್ನು ನೋಡಿ ಮಹಾವೇಗದಿಂದ ಬಂದನು.

೪. ಮಹಾವೀರರನ್ನು ಹುಲ್ಲಿಗಿಂತ ಕಡೆಯಾಗಿ ಕಾಣುವ ಹನುಮಂತನನ್ನು ನೋಡಿ ಸುರಥನು ಧೀರತನದಿಂದ ಇಂತೆಂದನು.

॥ ಸುರಥ ಉವಾಚ ॥

ಧನ್ಯೋಽಸಿ ಕಪಿವರ್ಯ ತ್ವಂ ಮಹಾಬಲಪರಾಕ್ರಮ ।
ಯೇನ ರಾಮಮಹತ್ಕೃತ್ಯಂ ಕೃತಂ ರಾಕ್ಷಸಕೇ ಪುರೇ ॥ ೫ ॥

ತ್ವಂ ರಾಮಚರಣಸ್ಯಾಪಿ ಸೇವಕೋ ಭಕ್ತಿಸಂಯುತಃ ।
ತ್ವಯಾ ವೀರೇಣ ಮತ್ಪುತ್ರಃ ಪಾತಿತಶ್ಚಂಪಕೋ ಬಲೀ ॥ ೬ ॥

ಇದಾನೀಂ ತ್ವಾಂ ತು ಸಂಬದ್ಧ ಗನ್ತಾಸ್ಮಿ ನಗರೇ ಮಮ ।
ಯತ್ನಾತ್ತಿಷ್ಠ ಕಪೀಶ ತ್ವಂ ಸತ್ಯಮುಕ್ತಂ ಮಯಾ ಸ್ಮೃತಂ ॥ ೭ ॥

ಇತಿ ಭಾಷಿತಮಾಕರ್ಣ್ಯ ಸುರಥಸ್ಯ ಕಪೀಶ್ವರಃ ।
ಉವಾಚ ಧೀರಯಾ ವಾಣ್ಯಾ ರಣೇ ವೀರೈಕಭೂಷಿತೇ ॥ ೮ ॥

॥ ಹನೂಮಾನುವಾಚ ॥

ತ್ವಂ ರಾಮಚರಣಸ್ಮಾರೀ ವಯಂ ರಾಮಸ್ಯ ಸೇವಕಾಃ ।
ಬಧ್ನಾಸಿ ಚೇನ್ಮಾಂ ಪ್ರಸಭಂ ಮೋಚಯಿಷ್ಯತಿ ಮತ್ಪ್ರಭುಃ ॥ ೯ ॥

---

೫. ಸುರಥನು ಹೇಳಿದನು:—ಎಲೈ ಕಪಿವರ್ಯನೇ! ನೀನು ಧನ್ಯನು. ಬಹು ಪರಾಕ್ರಮಿಯು. ರಾಕ್ಷಸನ ಪಟ್ಟಣದಲ್ಲಿ ರಾಮನ ಮಹಾಕಾರ್ಯವನ್ನು ಸಾಧಿಸಿಕೊಟ್ಟೆ.

೬. ನೀನು ಭಕ್ತಿಯಿಂದ ಕೂಡಿದ ರಾಮನ ಪಾದಸೇವಕನು. ನೀನು ವೀರನಾದ ನನ್ನ ಮಗನನ್ನು ಕೆಡವಿರುತ್ತೀ.

೭. ಈಗ ನಿನ್ನನ್ನು ಕಟ್ಟಿ ನನ್ನ ಊರಿಗೆ ಒಯ್ಯುತ್ತೇನೆ. ದೃಢವಾಗಿರು. ಇದು ಸತ್ಯ.

೮. ಸುರಥನ ಈ ಮಾತನ್ನು ಕೇಳಿ ಕಪಿಯು ಧೀರತನದಿಂದ ಇಂತೆಂದನು.

೯. ಹನುಮಂತನು ಹೇಳಿದನು:—ನೀನು ರಾಮಚರಣಗಳನ್ನೇ ಸ್ಮರಿಸುವವನು. ನಾವು ರಾಮಸೇವಕರು. ನೀನು ನನ್ನನ್ನು ಕಟ್ಟಿದರೆ ನನ್ನ ಸ್ವಾಮಿಯು ಬಿಡಿಸುತ್ತಾನೆ.

ಕುರು ವೀರ ಭವತ್ವಾಸ್ವನ್ತಸ್ಥಿತಂ ಸತ್ಯಂ ಪ್ರತಿಶ್ರುತಂ ।
ರಾಮಂ ಸ್ಮರನ್ನವೈ ದುಃಖಂ ಯಾತಿ ವೇದಾ ವದಂತ್ಯದಃ ॥ ೧೦ ॥

॥ ಶೇಷ ಉವಾಚ ॥

ಇತಿ ಬ್ರುವನ್ತಂ ಸುರಥಃ ಪ್ರಶಸ್ಯ ಪವನಾತ್ಮಜಂ ।
ವಿವ್ಯಾಧ ಬಾಣೈರ್ಬಹುಭಿಃ ಶಿತೈಶ್ಯಾಣೇನ ದಾರುಣೈಃ ॥ ೧೧ ॥

ತಾನ್ಮುಕ್ತಾನಗಣಯ್ಯಾಥ ಬಾಣಾನ್ ಶೋಣಿತಪಾತಿನಃ ।
ಕರೇ ಜಗ್ರಾಹ ಕೋದಂಡಂ ಸಜ್ಜಂ ಶರಸಮನ್ವಿತಂ ॥ ೧೨ ॥

ಗೃಹೀತ್ವಾ ಕರಯೋಶ್ಚಾಪಂ ಬಭಂಜ ಕುಪಿತಃ ಕಪಿಃ ।
ಚೀತ್ಕುರ್ವನ್‌ಸ್ತ್ರಾಸಯನ್ವೀರಾನ್ನಖೈರ್ದೀರ್ಣಾನ್ಸೃಜನ್ಭಟಾನ್ ॥ ೧೩ ॥

ತೇನ ಭಗ್ನಂ ಧನುರ್ದೃಷ್ಟ್ವಾ ಸ್ವಕೀಯಂ ಗುಣಸಂಯುತಂ ।
ಅಪರಂ ಧನುರಾದತ್ತ ಮಹದ್ಗುಣವಿಭೂಷಿತಂ ॥ ೧೪ ॥

---

೧೦. ಎಲೈ ವೀರನೇ, ನೀನು ಪ್ರತಿಜ್ಞೆಮಾಡಿದಂತೆ ನಿನ್ನ ಮನಸ್ಸಿನಲ್ಲಿರುವುದನ್ನು ಮಾಡಿಬಿಡು. ರಾಮನನ್ನು ಸ್ಮರಿಸುತ್ತಿದ್ದರೆ ದುಃಖವೇ ಆಗುವುದಿಲ್ಲ. ವೇದಗಳೂ ಇದನ್ನೇ ಹೇಳುತ್ತವೆ.

೧೧. ಶೇಷನು ಹೇಳಿದನು:—ಹೀಗೆ ಹೇಳುತ್ತಲಿರುವ ಹನುಮಂತನನ್ನು ಸುರಥನು ಹೊಗಳುತ್ತಾ ಅನೇಕ ಕ್ರೂರವಾದ ಬಾಣಗಳಿಂದ ಹೊಡೆದನು.

೧೨. ಆ ಸುರಥನು ಬಿಟ್ಟ ಬಾಣಗಳನ್ನು ಲಕ್ಷಿಸದೆ ಆ ಸುರಥನ ಧನುಸ್ಸನ್ನೇ ಹನುಮನು ಹಿಡಿದುಕೊಂಡನು.

೧೩. ಹನುಮಂತನು ಕೈಯಲ್ಲಿ ಆ ಧನುಸ್ಸನ್ನು ಕಿತ್ತುಕೊಂಡು ಪುಡಿಪುಡಿ ಮಾಡಿದನು. ಅನಂತರ ಚೀತ್ಕಾರಮಾಡುತ್ತಾ ಕೂಗುತ್ತಾ ಉಗುರುಗಳಿಂದ ಭಟರುಗಳನ್ನು ಪರಚಿದನು.

೧೪. ತನ್ನ ಧನುಸ್ಸನ್ನು ಕಿತ್ತುಕೊಳ್ಳಲು ಮತ್ತೊಂದು ಧನುಸ್ಸನ್ನು ತೆಗೆದುಕೊಂಡನು.

ತಚ್ಚಾಪಿ ಜಗೃಹೇ ರೋಷಾತ್ಕಪಿಶ್ಚಾಪಂ ಬಭಂಜ ತತ್ ।
ಅನ್ಯಚ್ಚಾಪಂ ಸಮಾಧತ್ತ ತಚ್ಚ ಸಂಜ ಮಹಾಬಲಃ　　॥ ೧೫ ॥

ತಸ್ಮಿಂಶ್ಚಾಪೇ ಪ್ರಭಗ್ನೇಽಪಿ ಸೋಽನ್ಯದ್ಧನುರಪಾದದತ್ ।
ಸೋಽಪಿ ಚಾಪಂ ಬಭಂಜಾಶು ಮಹಾವೇಗಸಮನ್ವಿತಃ　　॥ ೧೬ ॥

ಏವಂ ರಾಜ್ಞಸ್ತು ಚಾಪಾನಾಮಶೀತಿರ್ದ್ವಿದಳೀಕೃತಾ ।
ಕ್ಷಣೇ ಕ್ಷಣೇ ಮಹಾರೋಷಾತ್ಕುರ್ವನ್ನಾದಾನನೇಕಶಃ　　॥ ೧೭ ॥

ತದಾತ್ಯಂತಂ ಪ್ರಕುಪಿತಃ ಶಕ್ತಿಮುಗ್ರಾಮಥಾದದೇ ।
ಶಕ್ತ್ಯಾ ಸ ತಾಡಿತೋ ವೀರಃ ಪಪಾತ ಕ್ಷಣಮುತ್ಸುಕಃ　　॥ ೧೮ ॥

ಉತ್ಥಾಯ ಸ್ಯಂದನಂ ರಾಜ್ಞೋ ಜಗ್ರಾಹ ಕುಪಿತೋ ಭೃಶಂ ।
ಉಡ್ಡೀನಸ್ತಂ ಗೃಹೀತ್ವಾ ತು ಸಮುದ್ರಮತಿವೇಗತಃ　　॥ ೧೯ ॥

ತಮುಡ್ಡೀನಂ ಸಮಾಲಕ್ಷ್ಯ ಸುರಥಃ ಪರವೀರಹಾ ।
ತಾಡಯಾಮಾಸ ಪರಿಘೈರ್ಹೃದಿ ಮಾರುತಮುದ್ಯತಂ　　॥ ೨೦ ॥

---

೧೫-೧೭. ಆ ಧನುಸ್ಸನ್ನೂ ಕಿತ್ತು ಮುರಿದನು. ಮತ್ತೊಂದು ಧನುಸ್ಸನ್ನು ತೆಗೆದುಕೊಳ್ಳಲು ಅದನ್ನೂ ಕಿತ್ತುಕೊಂಡು ಮುರಿದನು. ಮತ್ತೊ ಒಂದು ಚಾಪವನ್ನು ತೆಗೆದುಕೊಳ್ಳಲು ಅದನ್ನೂ ಮುರಿದನು. ಈರೀತಿಯಾಗಿ ಎಂಭತ್ತು ಧನುಸ್ಸುಗಳನ್ನು ಮುರಿದನು. ಮತ್ತು ಗಳಿಗೆಗಳಿಗೂ ಸಿಂಹನಾದಮಾಡುತ್ತಿದ್ದನು.

೧೮. ಆಗ ಸುರಥನು ಬಹು ಕೋಪಗೊಂಡು ಶಕ್ತಿಯನ್ನು ಹಿಡಿದು ಹೊಡೆಯಲು ಅದರಿಂದ ಏಟುತಿಂದು ಒಂದು ಗಳಿಗೆ ಕೆಳಕ್ಕೆ ಬಿದ್ದನು.

೧೯. ಪುನಃ ಮೇಲೆದ್ದು ಕೋಪದಿಂದ ರಾಜನ ರಥವನ್ನೇ ಹಿಡಿದುಕೊಂಡು ಸಮುದ್ರಕ್ಕೆ ವೇಗದಿಂದ ಹಾರಿದನು.

೨೦. ವೀರನಾದ ಸುರಥನು ಹನುಮನು ಹಿಡಿದು ಹಾರುತ್ತಿದ್ದವನನ್ನು ನೋಡಿ ಪರಿಘದಿಂದ ಎದೆಗೆ ಹೊಡೆದನು.

ಮುಕ್ತಸ್ತೇನ ರಥೋ ದೂರಾಚ್ಚೂರ್ಣೀಭೂತೋಽಭವತ್ಕ್ಷಣಾತ್ ।
ಸೋಽನ್ಯಂ ರಥಂ ಸಮಾರುಹ್ಯ ಯಯೌ ವೇಗಾತ್ಸಮೀರಜಂ ॥ ೨೧ ॥

ಹನೂಮಾಂಸ್ತದ್ರಥಂ ಪುಚ್ಛೇ ಸಂವೇಷ್ಟ್ಯ ಪ್ರಧನಾಂಗಣೇ ।
ಹಯಸಾರಥಿಸಂಯುಕ್ತಂ ಬಭಂಜ ಸ ಪತಾಕಿನಂ ॥ ೨೨ ॥

ಅನ್ಯಂ ರಥಂ ಸಮಾಸ್ಥಾಯ ಯಯೌ ರಾಜಾ ಮಹಾಬಲಃ ।
ಬಭಂಜ ತಂ ರಥಂ ವೇಗಾನ್ಮಾರುತಿಃ ಕುಪಿತಾಂಗಕಃ ॥ ೨೩ ॥

ಭಗ್ನಂ ತಂ ಸ್ಯಂದನಂ ವೀಕ್ಷ್ಯ ಸುರಥೋಽನ್ಯಂ ಸಮಾಶ್ರಿತಃ ।
ಭಗ್ನಸ್ಸ ತೇನ ಸಹಸಾ ಹಯಸಾರಥಿಸಂಯುತಃ ॥ ೨೪ ॥

ಏವಮೇಕೋನಪಂಚಾಶದ್ರಥಾ ಭಗ್ನಾ ಹನೂಮತಾ ।
ತತ್ಕರ್ಮ ವೀಕ್ಷ್ಯ ರಾಜಾಪಿ ವಿಸಿಷ್ಮಿಯೇ ಸಸೈನಿಕಃ ॥ ೨೫ ॥

ಕುಪಿತಃ ಪ್ರಾಹ ಕೀಶೇಂದ್ರಂ ಧನ್ಯೋಽಸಿ ಪವನಾತ್ಮಜ ।
ಪರಾಕ್ರಮನ್ನಿದಂ ಕರ್ಮ ನ ಕರ್ತಾ ನ ಕರಿಷ್ಯತಿ ॥ ೨೬ ॥

---

೨೧. ಹನುಮನು ರಥವನ್ನು ಬಿಟ್ಟುಬಿಡಲು ರಥವು ಕೆಳಗೆಬಿದ್ದು ಚೂರಾಯಿತು. ರಾಜನು ಮತ್ತೊಂದು ರಥವನ್ನು ಹತ್ತಿ ಆಂಜನೇಯನನ್ನು ಹೊಡೆಯಲು ಬಂದನು.

೨೨. ಹನುಮಂತನು ಆ ರಥವನ್ನು ಬಾಲದಲ್ಲಿ ಹಿಡಿದುಕೊಂಡು ಕುದರೆ ಸಾರಥಿಗಳೊಡನೆ ನಾಶಮಾಡಿದನು.

೨೩. ರಾಜನು ಮತ್ತೊಂದು ರಥವನ್ನು ಹತ್ತಿಬರಲು ಪುನಃ ಕೋಪಗೊಂಡು ಅವನ್ನೂ ಮುರಿದನು.

೨೪. ಆ ರಥವೂ ಹೋಗಲು ಮತ್ತೊಂದು ರಥವನ್ನು ತಂದನು. ಅದನ್ನೂ ಸಾರಥಿ ಕುದುರೆಗಳೊಡನೆ ಪುಡಿಮಾಡಿದನು.

೨೫. ಈರೀತಿ ನಲಪತ್ತೊಂಭತ್ತು ರಥಗಳನ್ನು ಮುರಿದನು. ಇವನ್ನು ನೋಡಿ ರಾಜನು ಬಹು ಆಶ್ಚರ್ಯಪಟ್ಟನು.

೨೬-೨೭. **ಕೋಪಗೊಂಡು** ಕಪಿಯನ್ನು ಕುರಿತು ಎಲೈ ರಾಮಸೇವಕನೇ, ಈ ಪರಾಕ್ರಮವನ್ನು ಯಾವನು ಮಾಡಿಯೂ ಇಲ್ಲ. ಮಾಡುವುದೂ ಇಲ್ಲ. ಮುಂದೆ

ಕ್ಷಣಮೇಕಂ ಪ್ರತೀಕ್ಷಸ್ವ ಯಾವತ್ಸಜ್ಜಂ ಧನುಸ್ತ್ವಹಂ ।
ಕರೋಮಿ ಪವನೋದ್ಭೂತ ರಾಮಪಾದಾಬ್ಜಷಟ್ಪದ ॥ ೨೭ ॥

ಇತ್ಯುಕ್ತ್ವಾ ಚಾಪಮಾಸಜ್ಜಂ ಕೃತ್ವಾ ರೋಷಪರಿಪ್ಲುತಃ ।
ಅಸ್ತ್ರಂ ಪಾಶುಪತಂ ನಾಮ ಸಂದಧೇ ಶರ ಉಲ್ಬಣೇ ॥ ೨೮ ॥

ತತೋ ಭೂತಾಶ್ಚ ವೇತಾಳಾಃ ಪಿಶಾಚಾ ಯೋಗಿನೀಮುಖಾಃ ।
ಪ್ರಾದುರ್ಬಭೂವುಸ್ಸಹಸಾ ಭೀಷಯನ್ತಃ ಸಮೀರಜಂ ॥ ೨೯ ॥

ಕಪಿಃ ಪಾಶುಪತೈರಸ್ತ್ರೈರ್ಬದ್ಧೋ ಲೋಕೈರಭೀಕ್ಷಿತಃ ।
ಹಾಹೇತಿ ಚ ವದಂತ್ಯೇತೇ ಯಾವತ್ತಾವತ್ಸಮೀರಜಃ ॥ ೩೦ ॥

ಸ್ಮೃತ್ವಾ ರಾಮಂ ಸ ಮನಸಾ ತ್ರೋಟಯಾಮಾಸ ತತ್ಕ್ಷಣಾತ್ ।
ಸ ಮುಕ್ತಗಾತ್ರಸ್ಸಹಸಾ ಯುಯುಧೇ ಸುರಥಂ ನೃಪಂ ॥ ೩೧ ॥

ಸ ಮುಕ್ತಗಾತ್ರಂ ತಂ ವೀಕ್ಷ್ಯ ಸುರಥಃ ಪರಮಾಸ್ತ್ರವಿತ್ ।
ಮಹಾಬಲಂ ಮನ್ಯಮಾನೋ ಬ್ರಾಹ್ಮಮಸ್ತ್ರಂ ಸಮಾದದೇ ॥ ೩೨ ॥

---

ಮಾಡಲಾರರು. ಧನುಸ್ಸನ್ನು ಸಿದ್ಧಮಾಡಿಕೊಂಡು ಬರುತ್ತೇನೆ. ಒಂದುಕ್ಷಣ ನಿಧಾನಿಸು.

೨೮. ಹೀಗೆಂದು ಹೇಳಿ ಸಿದ್ಧಮಾಡಿಕೊಂಡು ಆ ಧನುಸ್ಸಿನಲ್ಲಿ ಪಾಶುಪತಾಸ್ತ್ರವನ್ನು ಹೂಡಿದನು.

೨೯. ಆಮೇಲೆ ಭೂತವೇತಾಳ ಪಿಶಾಚಗಳು ಹೊರಹೊಮ್ಮಿ ಹನುಮಂತನನ್ನು ಹೆದರಿಸಿದುವು.

೩೦-೩೧. ಕಪಿಯು ಪಾಶುಪತಾಸ್ತ್ರದಿಂದ ಕಟ್ಟಲ್ಪಟ್ಟಿತು. ಜನಗಳು ಹಾಹಾ ಎಂದರು. ಆಗ ಹನುಮನು ರಾಮನನ್ನು ಸ್ಮರಿಸುತ್ತಾ ಅದನ್ನು ಕ್ಷಣಕಾಲದಲ್ಲಿ ಕಿತ್ತೊಗೆದನು. ಅದರಿಂದ ಮುಕ್ತನಾಗಿ ಯುದ್ಧಮಾಡಿದನು.

೩೨. ಅದರಿಂದ ಮುಕ್ತನಾದುದನ್ನು ಕಂಡು ಇವನು ಮಹಾವೀರನೆಂದು ಯೋಚಿಸಿ ಬ್ರಹ್ಮಾಸ್ತ್ರವನ್ನು ಹೊಡೆದನು.

ಮಾರುತಿರ್ಬ್ರಾಹ್ಮಮಸ್ತ್ರಂ ತು ನಿಜಗಾಲ ಹಸನ್ಬಲೀ ।
ತನ್ನಿಗೀರ್ಣಂ ನೃಪೋ ದೃಷ್ಟ್ವಾ ರಾಮಂ ಸಸ್ಮಾರ ಭೂಮಿಪಃ ॥ ೩೩ ॥

ಸ್ಮೃತ್ವಾ ದಾಶರಥಿಂ ರಾಮಂ ರಾಮಾಸ್ತ್ರಂ ಸ್ವಶರಾಸನೇ ।
ಸಂಧಾಯ ತಂ ಜಗಾದೇದಂ ಬದ್ಧೋಽಸಿ ಕಪಿಪುಂಗವ ॥ ೩೪ ॥

ಶ್ರುತ್ವಾ ತತ್ಪ್ರಕ್ರಮೋಽದ್ಯಾವತ್ತಾವದ್ಬದ್ಧೋ ರಣಾಂಗಣೇ ।
ರಾಜ್ಞಾ ರಾಮಾಸ್ತ್ರತೋ ವೀರೋ ಹನೂಮಾನ್ರಾಮಸೇವಕಃ ॥ ೩೫ ॥

ಉವಾಚ ಭೂಪಂ ಹನುಮಾನ್ಕಿಂ ಕರೋಮಿ ಮಹೀಭುಜ ।
ಮತ್ಸ್ವಾಮ್ಯಸ್ತ್ರೇಣ ಸಂಬದ್ಧೋ ನಾನ್ಯೇನ ಪ್ರಾಕೃತೇನ ವೈ ॥ ೩೬ ॥

ತನ್ಮಾನಯಾಮಿ ಭೂಪಾಲ ನಯಸ್ವ ಸ್ವಪುರಂ ಪ್ರತಿ ।
ಮೋಚಯಿಷ್ಯತಿ ಮತ್ಸ್ವಾಮೀ ಹ್ಯಾಗತ್ಯ ಸ ದಯಾನಿಧಿಃ ॥ ೩೭ ॥

ಬದ್ಧೇ ಸಮೀರಜೇ ಕ್ರುದ್ಧಃ ಪುಷ್ಕಲೋ ಭೂಮಿಪಂ ಯಯೌ
ತಂ ಪುಷ್ಕಲಂ ಸಮಾಯಾಂತಂ ವಿವ್ಯಾಧ ವಸುಭಿಶ್ಶರೈಃ ॥ ೩೮ ॥

---

೩೩. ಮಾರುತಿಯು ಆ ಬ್ರಹ್ಮಾಸ್ತ್ರವನ್ನೂ ನುಂಗಿದನು. ಅದನ್ನು ನುಂಗಿದುದನ್ನು ನೋಡಿ ರಾಜನು ರಾಮನನ್ನು ಸ್ಮರಿಸಿದನು.

೩೪. ರಾಮನನ್ನು ಸ್ಮರಿಸಿ ರಾಮಾಸ್ತ್ರವನ್ನು ಸಂಧಾನಮಾಡಿ ಎಲೈ ಕಪಿಯೆ, ಕಟ್ಟಲ್ಪಟ್ಟೆ ಎಂದನು.

೩೫-೩೬. ಅದನ್ನು ಕೇಳಿ ಮುಂದಿನ ಯೋಜನೆಮಾಡುವಷ್ಟರಲ್ಲಿ ರಾಜನು ರಾಮಾಸ್ತ್ರವನ್ನು ಬಿಟ್ಟನು ಮತ್ತು ಇವನನ್ನು ಕಟ್ಟಿದನು. ಆಗ ರಾಜನನ್ನು ಕುರಿತು ಹನುಮನು ಎಲೈ ರಾಜನೇ, ಏನುಮಾಡಲಿ ? ನನ್ನ ಸ್ವಾಮಿಯ ಅಸ್ತ್ರದಿಂದ ಕಟ್ಟಲ್ಪಟ್ಟಿದ್ದೇನೆಯೋ ಹೊರತು ಬೇರೆ ಸಾಮಾನ್ಯ ಮನುಷ್ಯರಿಂದಲ್ಲ.

೩೭. ಆ ಅಸ್ತ್ರವನ್ನು ಗೌರವಿಸುತ್ತೇನೆ. ನನ್ನನ್ನು ಊರಿಗೆ ಕರೆದುಕೊಂಡು ಹೋಗು. ನನ್ನನ್ನು ನನ್ನ ಸ್ವಾಮಿಯಾದ ಶ್ರೀರಾಮಚಂದ್ರನೇ ಬಂದು ಆದರದಿಂದ ಬಿಡಿಸುತ್ತಾನೆ.

೩೮. ಹನುಮಂತನು ಕಟ್ಟುಬೀಳಲು ಪುಷ್ಕಳನು ರಾಜನಮೇಲೆ ಯುದ್ಧಕ್ಕೆ ಹೋದನು. ಆ ಪುಷ್ಕಳನು ಬರುತ್ತಿರುವುದನ್ನು ನೋಡಿ ಹದಿನೆಂಟು ಬಾಣಗಳನ್ನು ಬಿಟ್ಟನು.

**ಅನೇಕಬಾಣಸಾಹಸ್ರೈರ್ನಿಜಘಾನ ನೃಪಂ ಬಲೀ ।**
**ರಾಜ್ಞಾಽನೇಕೇ ಶರಾಸ್ತಸ್ಯ ಛಿನ್ನಾಃ ಪ್ರಧನಮಂಡಲೇ ॥ ೩೯ ॥**

**ಏವಂ ಸಮರಸಂಕ್ರುದ್ಧೇ ಸುರಥೇ ಪುಷ್ಕಲೇ ತಥಾ ।**
**ಬಾಣೈರ್ವ್ಯಾಪ್ತಂ ಜಗತ್ಸರ್ವಂ ಸ್ಥಾಸ್ನು ಭೂಯಿಷ್ಠರಿಷ್ಣು ಚ ॥ ೪೦ ॥**

**ತೇಷಾಂ ರಣೋದ್ಯಮಂ ವೀಕ್ಷ್ಯ ಮುಮುಹುಃ ಸುರಸೈನಿಕಾಃ ।**
**ಮಾನವಾನಾಂ ತು ಕಾ ವಾರ್ತಾ ಕ್ಷಣಾತ್ತ್ರಾಸಂ ಸಮೀಯುಷಾಂ ॥ ೪೧ ॥**

**ಅಸ್ತ್ರಪ್ರತ್ಯಸ್ತ್ರನಿಗಮೈರ್ಮಹಾಮಂತ್ರಪರಿಚ್ಯುತೈಃ ।**
**ಬಭೂವ ತುಮುಲಂ ಯುದ್ಧಂ ವೀರಾಣಾಂ ರೋಮಹರ್ಷಣಂ ॥ ೪೨ ॥**

**ತದಾ ಪ್ರಕುಪಿತೋ ರಾಜಾ ನಾರಾಚಂ ತು ಸಮಾದದೇ ।**
**ಛಿನ್ನಸ್ಸ ತು ಕ್ರುಧಾ ಮುಕ್ತೈರ್ವತ್ಸದಂತೈಸ್ಸ ಭಾರತೇಃ ॥ ೪೩ ॥**

**ಛಿನ್ನೇ ತಸ್ಮಿನ್ ಶರೇ ರಾಜಾ ಕೋಪಾದನ್ಯಂ ಸಮಾದದೇ ।**
**ಛಿನತ್ತಿ ಯಾವತ್ಸ ಶರಂ ತಾವಲ್ಲಗ್ನೋ ಹೃದಿ ಕ್ಷತಃ ॥ ೪೪ ॥**

---

೩೯. ಅನೇಕ ಸಾವಿರ ಬಾಣಗಳಿಂದ ಸುರಥನನ್ನು ಪುಷ್ಕಳನು ಹೊಡೆದನು. ಅವನ್ನು ರಾಜನು ಕತ್ತರಿಸಿದನು.

೪೦. ಈರೀತಿ ಸುರಥನು ಕೋಪಗೊಳ್ಳಲು ಜಗತ್ತಿನ ಚರಾಚರ ವಸ್ತುಗಳೆಲ್ಲಾ ಬಾಣದಿಂದ ಮುಚ್ಚಲ್ಪಟ್ಟುವು.

೪೧. ಅವರ ಯುದ್ಧವನ್ನು ನೋಡಿ ಸುರಸೈನಿಕರು ಭ್ರಾಂತಿಪಟ್ಟರು. ಕ್ಷಣ ಕಾಲದಲ್ಲಿ ಹೆದರುವ ಮಾನವರ ಪಾಡೇನು ?

೪೨. ಮಹಾಮಂತ್ರಗಳನ್ನು ಹೇಳುತ್ತ ಅಸ್ತ್ರಪ್ರತ್ಯಸ್ತ್ರಗಳ ಹೋಗುವಿಕೆ ಬರುವಿಕೆಗಳಲ್ಲಿ ಅದ್ಭುತವಾದ ತುಮುಲಯುದ್ಧವು ನಡೆಯಿತು.

೪೩. ಆಗ ಸುರಥನು ಕೋಪಗೊಂಡು ನಾರಾಚವನ್ನು ಎಸೆಯಲು ಅದನ್ನು ಪುಷ್ಕಲನು ಎರಡುತುಂಡಾಗಿ ಮಾಡಿದನು.

೪೪. ಆ ಶರವನ್ನು ಕತ್ತರಿಸಲು ಸುರಥನು ಮತ್ತೊಂದು ಶರವನ್ನು ಬಿಡಲು ಅದನ್ನೂ ಕತ್ತರಿಸುವಷ್ಟರಲ್ಲಿ ಅದು ಎದೆಯಲ್ಲಿ ಚುಚ್ಚಿಕೊಂಡಿತು.

ಮೂರ್ಛಾಂ ಪ್ರಾಪ ಮಹಾತೇಜಾಃ ಪುಷ್ಕಲೋ ಮಹದದ್ಭುತಂ ।
ಯುದ್ಧಂ ವಿಧಾಯ ಸುಮಹಾನ್ರಾಜ್ಞಾ ಸಹ ಮಹಾಮತಿಃ ॥ ೪೫ ॥

ಪುಷ್ಕಲೇ ಪತಿತೇ ರಾಜಾ ಶತ್ರುಘ್ನಶ್ಶತ್ರುತಾಪನಃ ।
ಸುರಥಂ ಪ್ರತಿ ಸಂಕ್ರುದ್ಧೋ ಜಗಾಮ ಸ್ಯಂದನಸ್ಥಿತಃ ॥ ೪೬ ॥

ಉವಾಚ ಸುರಥಂ ಭೂಪಂ ರಾಮಭ್ರಾತಾ ಮಹಾಬಲಃ ।
ತ್ವಯಾ ಮಹತ್ಕೃತಂ ಕರ್ಮ ಯದ್ಬದ್ಧಃ ಪವನಾತ್ಮಜಃ ॥ ೪೭ ॥

ಪುಷ್ಕಲೋಽಪಿ ಮಹಾವೀರಸ್ತಥಾನ್ಯೇ ಮಮ ಸೈನಿಕಾಃ ।
ಪಾತಿತಾಃ ಪ್ರಧನೇ ಘೋರೇ ಮಹಾಬಲಪರಾಕ್ರಮಾಃ ॥ ೪೮ ॥

ಇದಾನೀಂ ತಿಷ್ಠ ಮದ್ವೀರಾನ್ಪಾತಯಿತ್ವಾ ರಣಾಂಗಣೇ ।
ಕುತ್ರ ಯಾಸ್ಯಸಿ ಭೂಮೀಶ ಸಹಸ್ವ ಮಮ ಸಾಯಕಾನ್ ॥ ೪೯ ॥

ಇತ್ಥಮಾಶ್ರುತ್ಯ ವೀರಸ್ಯ ಭಾಷಿತಂ ಸುರಥೋ ಬಲೀ ।
ಜಗಾದ ರಾಮಪಾದಾಬ್ಜಂ ದಧಚ್ಚೇತಸಿ ಶೋಭನಂ ॥ ೫೦ ॥

---

೪೫. ಹೀಗೆ ರಾಜನೊಡನೆ ಯುದ್ಧಮಾಡಿ ಆ ಪುಷ್ಕಲನು ಮೂರ್ಛೆ ಹೊಂದಿದನು.

೪೬. ಪುಷ್ಕಲನು ಮೂರ್ಛೆಗೊಳ್ಳಲು ಶತ್ರುಘ್ನನು ಕೋಪಗೊಂಡು ರಾಜನನ್ನು ಎದುರಿಸಿದನು.

೪೭. ಶತ್ರುಘ್ನನು ಸುರಥನನ್ನು ಕುರಿತು ಎಲೈ ರಾಜನೇ, ಹನುಮಂತನನ್ನು ಕಟ್ಟುವುದೆಂದರೆ ಸಾಮಾನ್ಯವಲ್ಲ. ಅವನನ್ನು ಕಟ್ಟಿದುದರಿಂದ ಮಹಾಕಾರ್ಯವನ್ನು ಮಾಡಿದಂತಾಯಿತು.

೪೮. ಇದಲ್ಲದೆ ಪುಷ್ಕಲನೇ ಮುಂತಾದ ವೀರರೆಲ್ಲರೂ ಕೆಡವಲ್ಪಟ್ಟಿದ್ದಾರೆ.

೪೯. ಈಗ ನಿಲ್ಲು. ನನ್ನ ವೀರರನ್ನು ಕೆಡವಿ ಎಲ್ಲಿ ಹೋಗುತ್ತೀಯೆ ? ನನ್ನ ಬಾಣಗಳನ್ನು ಸಹಿಸು.

೫೦. ಈ ವೀರರ ಮಾತನ್ನು ಕೇಳಿ ಸುರಥನು ರಾಮಪಾದಗಳನ್ನು ಸ್ಮರಿಸುತ್ತ ಇಂತೆಂದನು.

ಮಯಾ ತೇ ಪಾತಿತಾಸ್ಸಂಖ್ಯೇ ವೀರಾ ಮಾರುತಜೋನ್ಮುಖಾಃ ।
ಇದಾನೀಂ ಪಾತಯಿಷ್ಯಾಮಿ ತ್ವಾಮಪಿ ಪ್ರಧನಾಂಗಣೇ ॥ ೫೧ ॥

ಸ್ಮರಸ್ವ ರಾಮಂ ಯೋ ವೀರಸ್ತ್ವಾಮಾಗತ್ಯ ಪ್ರರಕ್ಷತಿ ।
ಅನ್ಯಥಾ ಜೀವಿತಂ ತಾಸ್ತಿ ಮತ್ಪುರಶ್ಯತ್ರುತಾಪನ ॥ ೫೨ ॥

ಇತ್ಯುಕ್ತ್ವಾ ಬಾಣಸಾಹಸ್ರೈಸ್ತಂ ಜಘಾನ ಮಹೀಪತಿಃ ।
ಶತ್ರುಘ್ನಂ ಶರಸಂಘಾತಪಂಜರೇ ನ್ಯದಧಾತ್ಪರಂ ॥ ೫೩ ॥

ಶತ್ರುಘ್ನಶ್ಯರಸಂಘಾತಂ ಮುಂಚಂತಂ ವಹ್ನಿದೈವತಂ ।
ಅಸ್ತ್ರಂ ಮುಮೋಚ ದಾಹಾರ್ಥಂ ಶರಣಾಂ ನತಪರ್ವಣಾಂ ॥ ೫೪ ॥

ತದಸ್ತ್ರಂ ಮುಕ್ತಮಾಲೋಕ್ಯ ರಾಜಾ ನೃ ಸುರಥೋ ಮಹಾನ್ ।
ವಾರುಣಾಸ್ತ್ರೇಣ ಶಮಯನ್ ವಿವ್ಯಾಧ ಶರಕೋಟಿಭಿಃ ॥ ೫೫ ॥

ತದಾ ತದ್ಯೋಗಿನೀದತ್ತಮಸ್ತ್ರಂ ಧನುಷಿ ಸಂದಧೇ ।
ಮೋಹನಂ ಸರ್ವವೀರಾಣಾಂ ನಿದ್ರಾಪ್ರಾಪಕಮದ್ಭುತಂ ॥ ೫೬ ॥

---

೫೧. ಸುರಥನು, ಹನುಮಂತನೇ ಮುಂತಾದವರನ್ನು ಕೆಡವಿಸ್ಟೇನೆ. ಈಗ ಯುದ್ಧದಲ್ಲಿ ನಿನ್ನನ್ನೂ ಕೆಡವುತ್ತೇನೆ.

೫೨. ರಾಮನನ್ನು ಸ್ಮರಿಸು. ಅವನು ಬಂದು ರಕ್ಷಿಸಲಿ. ಹಾಗಿಲ್ಲದಿದ್ದರೆ ನನ್ನೆದುರಿಗೆ ನಿನ್ನ ಜೀವವು ಉಳಿವುದಿಲ್ಲ.

೫೩. ಹೀಗೆಂದು ಹೇಳಿ ಸಹಸ್ರಬಾಣಗಳಿಂದ ಹೊಡೆದನು. ಶತ್ರುಘ್ನನು ಬಾಣ ಪಂಜರದ ಮಧ್ಯೆ ಸಿಕ್ಕಿದನು.

೫೪. ಶತ್ರುಘ್ನನು ಚೂಪಾದ ಬಾಣಗಳನ್ನು ಹೂಡಿ ಅದಕ್ಕೆ ಅಗ್ನಿಯನ್ನಭಿ ಮಂತ್ರಿಸಿಬಿಟ್ಟನು. ಆಗ್ನೇಯಾಸ್ತ್ರವು ಶತ್ರುಗಳನ್ನು ಸುಡಲು ಮೊದಲುಮಾಡಿತು.

೫೫. ಶತ್ರುಘ್ನನು ವರುಣಾಸ್ತ್ರವನ್ನು ಬಿಟ್ಟುದುದನ್ನು ನೋಡಿ ವರುಣಾಸ್ತ್ರ ದಿಂದ ಅದನ್ನೇ ಶಮನಮಾಡಿದನು.

೫೬. ಆಗ ಯೋಗಿನಿಯು ಕೊಟ್ಟ ಎಲ್ಲರಿಗೂ ನಿದ್ರೆಯನ್ನು ತರುವ ಮೋಹನಾ ಸ್ತ್ರವನ್ನು ಬಿಟ್ಟನು.

ತನ್ಮೋಹನಂ ಮಹಾಸ್ತ್ರಂ ಸ ವೀಕ್ಷ್ಯ ರಾಜಾ ಹರಿಂ ಸ್ಮರನ್ ।
ಜಗಾದ ಶತ್ರುಮಭಯಂ ಸರ್ವಶಸ್ತ್ರಾಸ್ತ್ರಕೋವಿದಃ ॥ ೫೭ ॥

ಮೋಹಿತಸ್ಯ ಮಮ ಶ್ರೀಮದ್ರಾಮಸ್ಯ ಸ್ಮರಣೇನ ಹ ।
ನಾನ್ಯನ್ಮೋಹನಮಾಭಾತಿ ಮಾಯಯಾಽಪಿ ಭಯಮಾಪ ಮೇ ॥ ೫೮ ॥

ಇತ್ಯುಕ್ತವತಿ ವೀರೇಽಪಿ ಮುಮೋಚ ಸುಮಹಾಸ್ತ್ರಕಂ ।
ತೇನ ಬಾಣೇನ ಸಂಛಿನ್ನಂ ಪಪಾತ ರಣಮಂಡಲೇ ॥ ೫೯ ॥

ತನ್ಮೋಹನಂ ಮಹಾಸ್ತ್ರಂ ತು ನಿಷ್ಫಲಂ ವೀಕ್ಷ್ಯ ಭೂಮಿಪೇ ।
ಅತ್ಯಂತಂ ವಿಸ್ಮಯಂ ಪ್ರಾಪ ಬಾಣಂ ಧನುಷಿ ಸಂಧಧೇ ॥ ೬೦ ॥

ಲವಣೋ ಯೇನ ನಿಹತೋ ಮಹಾಸುರವಿಮರ್ದನಃ ।
ತಂ ಬಾಣಂ ಚಾಪ ಆಧತ್ತ ಘೋರಕಾಲಾನಲಪ್ರಭಂ ॥ ೬೧ ॥

ತಂ ವೀಕ್ಷ್ಯ ರಾಜಾ ಪ್ರೋವಾಚ ಬಾಣೋಽಯಮಸತಾಂ ಹೃದಿ ।
ಲಗತೇ ರಾಮಭಕ್ತಸ್ಯ ಸಂಮುಖೋಽಪಿ ನ ಭಾತ್ಯಸೌ ॥ ೬೨ ॥

---

೫೭. ಆ ರಾಜನು ಮೋಹನಾಸ್ತ್ರವನ್ನು ನೋಡಿ ಹರಿಯನ್ನು ಸ್ಮರಿಸುತ್ತಾ ಶತ್ರುವಿನ ದೆಸೆಯಿಂದ ಅಭಯವನ್ನು ಕೊಡೆಂದನು.

೫೮. ಆ ಮೋಹನಾಸ್ತ್ರವು ಬಂದು ಆವರಿಸಲು ರಾಮನನ್ನೇ ಸ್ಮರಿಸುತ್ತಿದ್ದುದರಿಂದ ರಾಮಮೋಹನವೇ ಹೊರತು ಬೇರೆ ಮೋಹನವಿಲ್ಲದೆ ಮೋಹನಾಸ್ತ್ರವೂ ತೊಂದರೆ ಮಾಡುವುದಿಲ್ಲ.

೫೯. ಹೀಗೆಂದು ಸುರಥನು ಹೇಳಲು ಶತ್ರುಘ್ನನು ಮತ್ತೊಂದು ಬಾಣವನ್ನು ಬಿಟ್ಟನು ಆ ಬಾಣವನ್ನೂ ಸುರಥನು ಕತ್ತರಿಸಿದನು. ಅದು ನೆಲದಲ್ಲಿ ಬಿತ್ತು.

೬೦. ಆ ಮೋಹನಾಸ್ತ್ರವೂ ನಿಷ್ಫಲವಾದುದನ್ನು ನೋಡಿ ಶತ್ರುಘ್ನನು ಆಶ್ಚರ್ಯ ಹೊಂದಿ ಬೇರೆ ಬಾಣವನ್ನು ಹೂಡಿದನು.

೬೧. ಮಹಾಸುರನಾದ ಲವಣನನ್ನು ಕೊಂದ, ಕಾಲಾಗ್ನಿ ಸದೃಶವಾದ ಬಾಣವನ್ನು ಹೂಡಿದನು.

೬೨. ಅದನ್ನು ನೋಡಿ ರಾಜನು ಎಲೈ ಶತ್ರುಘ್ನನೇ, ಈ ಬಾಣವು ಅಯೋಗ್ಯರಮೇಲೆ ಬೀಳುತ್ತದೆಯೇ ಹೊರತು ರಾಮಭಕ್ತನ ಎದುರಿಗೆಕೂಡ ಬರುವುದಿಲ್ಲ.

ಇತ್ಯೇವಂ ಭಾಷಮಾಣಂ ತು ಬಾಣೇನಾನೇದ ಶತ್ರುಹಾ ।
ವಿವ್ಯಾಧ ಹೃದಯೇ ಕ್ಷಿಪ್ರಂ ವಹ್ನಿಜ್ವಾಲಾಸಮಪ್ರಭಂ ॥ ೬೩ ॥

ತೇನ ಬಾಣೇನ ದುಃಖಾರ್ತೋ ಮಹಾಪೀಡಾಸಮನ್ವಿತಃ ।
ರಥೋಪಸ್ಥೇ ಕ್ಷಣಂ ಮೂರ್ಛಾಮವಾಪ ಪರತಾಪನಃ ॥ ೬೪ ॥

ಸ ಕ್ಷಣಾತ್ತಾಂ ವ್ಯಥಾಂ ನೀತ್ವಾ ಜಗಾದ ರಿಪುಮಗ್ರತಃ ।
ಸಹಸ್ವೈಕಂ ಪ್ರಹಾರಂ ಮೇ ಕುತ್ರ ಯಾಸಿ ಮಮಾಗ್ರತಃ ॥ ೬೫ ॥

ಏವಮುಕ್ತ್ವಾ ಮಹಾಸಂಖ್ಯೇ ಬಾಣಮಾಧತ್ತ ಸಾಯಕೇ ।
ಜ್ವಾಲಾಮಾಲಾಪರೀತಾಂಗಂ ಸ್ವರ್ಣಪುಂಖಸಮನ್ವಿತಂ ॥ ೬೬ ॥

ಸ ಬಾಣೋ ಧನುಷೋ ಮುಕ್ತಃ ಶತ್ರುಘ್ನೇನ ಪಥಿ ಸ್ಥಿತಃ ।
ಛಿನ್ನೋಽಪ್ಯಗ್ರಫಲೇನಾಶು ಹೃದಯೇ ಸಮಪದ್ಯತ ॥ ೬೭ ॥

ತೇನ ಬಾಣೇನ ಸಂಮೂರ್ಛ್ಯ ಪಪಾತ ಸ್ಯಂದನೋಪರಿ ।
ತತೋ ಹಾಹಾಕೃತಂ ಸರ್ವಂ ಸೈನ್ಯಂ ಭಗ್ನಂ ಪರಾದ್ರವತ್ ॥ ೬೮ ॥

---

೬೩. ಈರೀತಿ ಹೇಳುತ್ತಿರುವಾಗಲೇ ಶತ್ರುಘ್ನನು ಬಾಣಬಿಡಲು ಅದು ಹೃದಯದಲ್ಲಿ ಬಡಿದು ನೋವನ್ನುಂಟುಮಾಡಿತು.

೬೪. ಆ ಬಾಣದಿಂದ ನೋವುಹೊಂದಿ ಆ ರಾಜನು ರಥದ ಮಧ್ಯದಲ್ಲಿಯೇ ಕ್ಷಣಕಾಲ ಮೂರ್ಛೆಹೊಂದಿದನು.

೬೫. ಅವನು ಒಂದೇಕ್ಷಣದಲ್ಲಿ ಆ ದುಃಖವನ್ನು ನೀಗಿಕೊಂಡು ಎಲ್ಲಿಹೋಗುತ್ತೀಯೆ ? ನಿಲ್ಲು. ನನ್ನ ಒಂದೇಟನ್ನು ಸಹಿಸು ಎಂದನು.

೬೬. ಹೀಗೆಂದು ಯುದ್ಧದಲ್ಲಿ ಹೇಳುತ್ತಾ ಜ್ವಾಲಾಮಾಲಿಯಾದ ಚಿನ್ನದಬಾಲವುಳ್ಳ ಬಾಣವನ್ನು ಹೂಡಿದನು.

೬೭. ಆ ಬಾಣವನ್ನು ಬಿಡುತ್ತಲೂ ಶತ್ರುಘ್ನನು ಅದನ್ನು ಕತ್ತರಿಸಿದನು. ಕತ್ತರಿಸಿದರೂ ಅದರ ತುದಿಯು ಹೃದಯದಲ್ಲಿ ಚುಚ್ಚಿಕೊಂಡಿತು.

೬೮. ಆ ಬಾಣದಿಂದ ಮೂರ್ಛೆಹೋಗಿ ರಥದ ಮಧ್ಯದಲ್ಲಿಯೇ ಬಿದ್ದನು. ಆಗ ಸೈನವೆಲ್ಲವೂ ಹಾಹಾಕಾರಮಾಡುತ್ತಾ ಓಡಿತು.

**ಸುರಥೋ ಜಯಮಾಪೇದೇ ಸಂಗ್ರಾಮೇ ರಾಮಸೇವಕಃ ।**
**ದಶ ವೀರಾ ದಶಸುತೈರ್ಮೂರ್ಛಿತಾಃ ಪತಿತಾಃ ಕ್ವಚಿತ್ ॥ ೬೯॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಸುರಥವಿಜಯೋನಾಮ ದ್ವಿಪಂಚಾಶತ್ತಮೋಽಧ್ಯಾಯಃ**

---

೬೯. ರಾಮಸೇವಕನಾದ ಸುರಥನು ಯುದ್ಧದಲ್ಲಿ ಜಯಹೊಂದಿದನು. ವೀರರಾದ ಹತ್ತುಜನ ಮಕ್ಕಳೂ ಮೂರ್ಛಿತರಾಗಿ ಅಲ್ಲಿಯೇ ಬಿದ್ದಿದ್ದರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ ಸಂವಾದದ ರಾಮಾಶ್ವಮೇಧದಲ್ಲಿ ಸುರಥವಿಜಯವೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಿಪಂಚಾಶತ್ತಮೋಽಧ್ಯಾಯಃ

---

॥ ಶೇಷ ಉವಾಚ ॥

ಸುಗ್ರೀವಸ್ತ್ವಚ್ಛ ಕಟಕಂ ನಷ್ಟಂ ವೀಕ್ಷ್ಯ ರಣಾಂಗಣೇ ।
ಸ್ವಾಮಿನಂ ಮೂರ್ಛಿತಂ ಚಾಪಿ ಯಯೌ ಯೋದ್ಧುಂ ನೃಪಂ ಪ್ರತಿ ॥ ೧ ॥

ಆಗಚ್ಛ ಭೂಪ ಸರ್ವಾನ್ಮೋ ಮೂರ್ಛಯಿತ್ವಾ ಕುತೋ ಭವಾನ್ ।
ಕ್ಷಿಪ್ರಂ ಗಚ್ಛತಿ ಮಾಂ ದೇಹಿ ಯುದ್ಧಂ ರಣವಿಶಾರದ ॥ ೨ ॥

ಏವಮುಕ್ತ್ವಾ ನಗಂ ಕಂಚಿದ್ವಿಶಾಲಂ ಶಾಖಯಾ ಯುತಂ ।
ಉತ್ಪಾಟ್ಯ ಪ್ರಾಹರತ್ತಸ್ಯ ಮಸ್ತಕೇ ಬಲಸಂಯುತಃ ॥ ೩ ॥

---

## ಐವತ್ತಮೂರನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಸುಗ್ರೀವನು, ತಮ್ಮ ಶಿಬಿರವೆಲ್ಲವೂ ಯುದ್ಧ ರಂಗದಿಂದ ಓಡಿಹೋದುದನ್ನೂ ತನ್ನ ಪ್ರಭುವಾದ ಶತ್ರುಘ್ನನು ಮೂರ್ಛೆಬಿದ್ದು ದನ್ನೂ ನೋಡಿ ರಾಜನೊಡನೆ ಯುದ್ಧಮಾಡಲು ಹೊರಟನು.

೨. ಎಲ್ಲರನ್ನೂ ಮೂರ್ಛೆಕೆಡವಿ ಎಲ್ಲಿ ಹೋಗುತ್ತೀಯೋ? ಬೇಗ ಬಾ ನನಗೆ ಯುದ್ಧವನ್ನು ಕೊಡು.

೩. ಹೀಗೆಂದು ಹೇಳಿ ಅನೇಕ ಕೊಂಬೆಗಳುಳ್ಳ ಒಂದು ದೊಡ್ಡಮರವನ್ನು ಕಿತ್ತು ತಂದು ಹೊಡೆದನು.

ತೇನ ಪ್ರಹಾರೇಣ ಮಹಾಬಲೋ ನೃಪಃ
ಸಂವೀಕ್ಷ್ಯ ಸುಗ್ರೀವಮಥೋ ಸ್ವಚಾಪೇ ।
ಬಾಣಾನ್ಸಮಾಧಾಯ ಶಿತಾನ್ಸ ರೊಷಾ-
ಜ್ಜಘಾನ ವಕ್ಷಸ್ಯತಿಪೌರುಷೋ ಬಲೀ ॥ ೪ ॥

ತಾನ್ಬಾಣಾನ್ವ್ಯರ್ಥಮುತ್ಸರ್ಗಾನ್ಸುಗ್ರೀವಃ ಸಹಸಾ ಹರ್ಸ ।
ತಾಡಯಾಮಾಸ ಹೃದಯೇ ಸುರಥಂ ಸುಮಹಾಬಲಃ ॥ ೫ ॥

ಪರ್ವತೈಶ್ಶಿಖರೈಶ್ಚೈವ ನಗೈರ್ದ್ವಿರದವರ್ಷಿಭಿಃ ।
ವೇಗಾತ್ಸ ತಾಡಯಾಮಾಸ ದಾರಯನ್ಸುರಥಂ ನಖೈಃ ॥ ೬ ॥

ತಮುಸ್ಯಾಶು ಬಬಂಧಾಸ್ತ್ರಾದ್ರಾಮಸಂಜ್ಞಾತ್ಸುದಾರುಣಾತ್ ।
ಬದ್ಧಃ ಕಪಿವರೋ ಮೇನೇ ಸುರಥಂ ರಾಮಸೇವಕಂ ॥ ೭ ॥

ಗಜೋ ಯಥಾಯಸಮಯೀಂ ಶೃಂಖಲಾಂ ಪಾದಲಂಬಿತಾಂ ।
ಪ್ರಾಪ್ಯ ಕಿಚಿನ್ನ ವೈ ಕರ್ತುಂ ಶಕ್ನೋತಿ ಸ ತಥಾ ಹ್ಯಭೂತ್ ॥ ೮ ॥

---

೪. ಆ ಏಟನ್ನು ತಿಂದ ರಾಜನು ಸುಗ್ರೀವನನ್ನು ಗುರಿಯಿಟ್ಟು ಕೋಪದಿಂದ ಬಾಣವನ್ನು ಹೂಡಿ ಹೊಡೆದನು.

೫. ಸುಗ್ರೀವನು ಲೀಲೆಯಿಂದಲೇ ಅವೆಲ್ಲವನ್ನೂ ಒದರಿ ಬಿಸಾಡಿದನು. ಮತ್ತು ಸುರಥನ ಎದೆಗೆ ಹೊಡೆದನು.

೬. ಪರ್ವತಗಳಿಂದಲೂ, ಶಿಖರಗಳಿಂದಲೂ, ಆನೆಗಳೊಡನೆ ಇರುವ ಪರ್ವತಗಳಿಂದಲೂ ರಾಜನನ್ನು ಹೊಡೆದು ಉಗುರುಗಳಿಂದ ಗೀಳುತ್ತಿದ್ದನು.

೭. ರಾಮಾಸ್ತ್ರದಿಂದ ಅವನನ್ನೂ ಕಟ್ಟಿದನು. ಆಗ ಸುಗ್ರೀವನು ಕಟ್ಟು ಬಿದ್ದು, ಸುರಥನು ರಾಮಸೇವಕನೂ, ವೀರನೂ ಆಗಿರುವುದಾಗಿ ತಿಳಿದನು.

೮. ಆನೆಯು, ಕಬ್ಬಿಣದ ಬೇಡಿಗಳು ಕಾಲಲ್ಲಿದ್ದರೆ ಏನೂ ಮಾಡಲೂ ಹೇಗೆ ಸಾಧ್ಯವಿಲ್ಲವೋ ಹಾಗಾದನು.

ಜಿತಂ ತೇನ ಮಹಾರಾಜ್ಞಾ ಸುರಥೇನ ಸುಪತ್ರಿಣಾ ।
ಸರ್ವಾನ್ವೀರಾನ್ರಥೇ ಸ್ಥಾಪ್ಯ ಯಯೌ ಸ್ವನಗರಂ ಪ್ರತಿ ॥ ೯ ॥

ಗತ್ವಾ ಸಭಾಯಾಂ ಸುಮಹಾನ್ಬದ್ಧಂ ಮಾರುತಿಮಬ್ರವೀತ್ ।
ಸ್ಮರ ಶ್ರೀರಘುನಾಥಂ ತ್ವಂ ದಯಾಳುಂ ಭಕ್ತಪಾಲಕಂ ॥ ೧೦ ॥

ಯಥಾ ತ್ವಾಂ ಬಂಧನಾತ್ಸದ್ಯೋ ಮೋಚಯಿಷ್ಯತಿ ತುಷ್ಟಧೀಃ ।
ಅನ್ಯಥಾಽಯುತವರ್ಷೇಣ ಮೋಚಯಿಷ್ಯಾಮಿ ಬಂಧನಾತ್ ॥ ೧೧ ॥

ಇತ್ಯುಕ್ತಮಾಕರ್ಣ್ಯ ಸಮೀರಜಸ್ತದಾ
ಸುಬುದ್ಧಿಮಾತ್ಮಾನಮವೇಕ್ಷ್ಯ ವೀರಾನ್ ।
ಸಂಮೂರ್ಛಿತಾನ್ಶತ್ರುಶರಾಭಿಘಾತ-
ಪೀಡಾಯುತಾನ್ಬಂಧನಮುಕ್ತಯೇಽಸ್ಮರತ್ ॥ ೧೨ ॥

ಶ್ರೀರಾಮಚಂದ್ರಂ ರಘುವಂಶಜಾತಂ
ಸೀತಾಪತಿಂ ಪಂಕಜಪತ್ರನೇತ್ರಂ ।
ಸ್ವಮುಕ್ತಯೇ ಬನ್ಧನತಃ ಕೃಪಾಳುಂ
ಸಸ್ಮಾರ ಸರ್ವೈಃ ಕರಣೈರ್ವಿಶೋಕೈಃ ॥ ೧೩ ॥

---

೯. ಹೀಗೆ ಸುರಥನು ಎಲ್ಲರನ್ನೂ ಜಯಿಸಿ ಎಲ್ಲಾ ವೀರರನ್ನೂ ರಥದಲ್ಲಿ ಹಾಕಿಕೊಂಡು ರಾಜಧಾನಿಗೆ ಹೋದನು.

೧೦-೧೧. ಊರಿಗೆಹೋಗಿ ಸಭೆಯನ್ನು ಸೇರಿಸಿ ಅಲ್ಲಿ ಮಾರುತಿಯನ್ನು ಕುರಿತು ನೀನು ರಘುರಾಮನನ್ನು ಸ್ಮರಿಸು. ಆ ದಯಾಳುವು ಬಂದು ನಿನ್ನನ್ನು ಬಿಡಿಸಿಯೇ ಬಿಡಿಸುತ್ತಾನೆ. ಹಾಗಿಲ್ಲದಿದ್ದರೆ ನಿನಗೆ ಹತ್ತು ಸಾವಿರ ವರ್ಷವಾದರೂ ಈ ಬಂಧನ ದಿಂದ ಮುಕ್ತಿಯಿರುವುದಿಲ್ಲ.

೧೨. ಸುರಥನು ಹೀಗೆ ಹೇಳಿದುದನ್ನು ಕೇಳಿ ತಾನೂ ತನ್ನ ಕಡೆಯ ವೀರರೂ ಕಟ್ಟುಬಿದ್ದಿರುವುದನ್ನು ನೋಡಿ, ಶತ್ರುವಿನ ಬಾಣದಿಂದ ಮೂರ್ಛೆಗೊಂಡಿರು ವುದನ್ನು ತಿಳಿದು, ಎಲ್ಲರ ಮುಕ್ತಿಗೋಸ್ಕರ ಶ್ರೀರಾಮನನ್ನು ಸ್ಮರಿಸಿದನು.

೧೩. ರಘುವಂಶದಲ್ಲಿ ಹುಟ್ಟಿದ ಸೀತಾಪತಿಯಾದ ಕಮಲನೇತ್ರನಾದ ಶ್ರೀರಾಮನನ್ನು ತಮ್ಮಗಳ ಮುಕ್ತಿಗೋಸ್ಕರ ಸರ್ವ ಪ್ರಕಾರದಿಂದಲೂ ಸ್ಮರಿಸಿದನು.

॥ ಹನೂಮಾನುವಾಚ ॥

ಹಾ ನಾಥ ಹಾ ನರವರೋತ್ತಮ ಹಾ ದಯಾಳೋ
ಸೀತಾಪತೇ ರುಚಿರಕುಂಡಲಶೋಭಿವಕ್ತ್ರ ।
ಭಕ್ತಾರ್ತಿದಾಹಕ ಮನೋಹರ ರೂಪಧಾರಿನ್
ಮಾಂ ಬಂಧನಾತ್ಸಪದಿ ಮೋಚಯ ಮಾವಿಲಂಬಂ ॥ ೧೪ ॥

ಸಂಮೋಚಿತಾಸ್ತು ಭವತಾ ಗಜಪುಂಗವಾದ್ಯಾ
ದೇವಾಶ್ಚ ದಾನವಕುಲಾಗ್ನಿಸುದಹ್ಯಮಾನಾಃ ।
ತತ್ಸುಂದರೀಶಿರಸಿ ಸಂಸ್ಥಿತಕೇಶಬಂಧ-
ಸಂಮೋಚಿತಾಸಿ ಕರುಣಾಲಯ ಮಾಂ ಸ್ಮರಸ್ವ ॥ ೧೫ ॥

ತ್ವಂ ಯಾಗಕರ್ಮನಿರತೋಽಸಿ ಮುನೀಶ್ವರೇಂದ್ರೈ-
ರ್ಧರ್ಮಂ ವಿಚಾರಯಸಿ ಭೂಮಿಪತೀಡ್ಯಪಾದ ।
ಅತ್ರಾಹಮದ್ಯ ಸುರಥೇನ ವಿಗೂಢಪಾಶ-
ಬದ್ಧೋಽಸ್ಮಿ ಮೋಚಯ ಮಹಾಪುರುಷಾಶು ದೇವ ॥ ೧೬ ॥

ನೋ ಮೋಚಯಸ್ಯಥ ಯದಿ ಸ್ಮರಣಾತಿರೇಕಾ-
ತ್ತ್ವಂ ಸರ್ವದೇವವರಪೂಜಿತಪಾದಪದ್ಮ ।

---

೧೪. ಹನುಮಂತನು ಹೇಳಿದನು :—ನಾಥನೇ, ಮನುಷ್ಯಶ್ರೇಷ್ಠನೇ, ದಯಾಳುವೇ, ಸೀತಾಪತಿಯೇ, ಚೆನ್ನಾಗಿರುವ ಕುಂಡಲಗಳಿಂದ ಶೋಭಿಸಲ್ಪಡುವ ಮುಖವುಳ್ಳವನೇ, ಭಕ್ತರ ಕಷ್ಟವನ್ನು ನಾಶಮಾಡುವವನೇ, ಮನೋಹರರೂಪವುಳ್ಳವನೇ, ಜಾಗ್ರತೆಯಾಗಿ ಬಂಧನದಿಂದ ಬಿಡಿಸು.

೧೫. ಎಲೈ ಸ್ವಾಮಿಯೇ, ನಿನ್ನಿಂದ ಗಜೇಂದ್ರ, ದೇವತೆಗಳು, ದಾನವರುಗಳು ಬಂಧನದಿಂದ ಬಿಡಿಸಲ್ಪಟ್ಟರು. ಅಹಲ್ಯೆಯನ್ನು ಶಾಪದಿಂದ ಪಾರುಮಾಡಿದ್ದೀಯೆ. ಕೃಪಾಶಾಲಿಯೇ, ನನ್ನನ್ನು ಜ್ಞಾಪಿಸಿಕೋ.

೧೬. ನೀನು ಯಾಗಕರ್ಮದಲ್ಲಿ ಆಸಕ್ತನಾಗಿದ್ದೀಯೆ. ಮುನಿಗಳೊಡನೆ ಧರ್ಮವನ್ನು ಚರ್ಚಿಸುತ್ತಿದ್ದೀಯೆ. ರಾಜರು ಹೊಗಳುತ್ತಿದ್ದಾರೆ. ನಾನಿಲ್ಲಿ ಸುರಥನ ಬಾಣದಿಂದ ಕಟ್ಟಲ್ಪಟ್ಟಿದ್ದೇನೆ. ನನ್ನನ್ನು ಬೇಗ ಬಿಡಿಸು.

೧೭. ಎಲೈ ದೇವಪೂಜ್ಯನೇ, ಸ್ಮರಣೆಯ ವ್ಯತ್ಯಾಸದಿಂದ ನೀನು ಬಿಡಿಸ

ಲೋಕೋ ಭವನ್ತಮಿದಮುಲ್ಲಸಿತೋಽಹಸಿಷ್ಯ-
ತ್ತಸ್ಮಾದ್ವಿಲಂಬಮಿಹ ಮಾಚರ ಮೋಚಯಾಶು ॥ ೧೭ ॥

ಇತಿ ಶ್ರುತ್ವಾ ಜಗನ್ನಾಥೋ ರಘುವೀರಃ ಕೃಪಾನಿಧಿಃ ।
ಭಕ್ತಂ ಮೋಚಯಿತುಂ ಪ್ರಾಗಾತ್ಪುಷ್ಪಕೇಣಾಶು ವೇಗಿನಾ ॥ ೧೮ ॥

ಲಕ್ಷ್ಮಣೇನಾನುಗೇನಾಥ ಭರತೇನ ಸುಶೋಭಿತಂ
ಮುನಿವೃಂದೈರ್ವ್ಯಾಸಮುಖ್ಯೈಃ ಸಮೇತಂ ದದೃಶೇ ಕಪಿಃ ॥ ೧೯ ॥

ತಮಾಗತಂ ನಿಜಂ ನಾಥಂ ವೀಕ್ಷ್ಯ ಭೂಪಂ ಸಮಬ್ರವೀತ್ ।
ಪಶ್ಯ ರಾಜನ್ನಿಜಂ ಮೋಕ್ತುಮಾಯಾತಂ ಕೃಪಯಾ ಹರಿಂ ॥ ೨೦ ॥

ಅನೇಕೇ ಮೋಚಿತಾಃ ಪೂರ್ವಂ ಸ್ಮರಣಾತ್ಸೇವಕಾ ನಿಜಾಃ ।
ತಥಾ ಮಾಂ ಪಾಶತೋ ಬದ್ಧಂ ಸಮ್ಮೋಚಯಿತುಮಾಗತಃ ॥ ೨೧ ॥

ಶ್ರೀರಾಮಚಂದ್ರಮಾಯಾತಂ ವೀಕ್ಷ್ಯಾಸೌ ಸುರಥಃ ಕ್ಷಣಾತ್ ।
ನತಯಶ್ಶತಶಶ್ಚಕ್ರೇ ಭಕ್ತಿಪೂರಪರಿಪ್ಲುತಃ ॥ ೨೨ ॥

---

ದಿದ್ದರೆ ಜನವು ನಗುತ್ತಾ ಹಾಸ್ಯಮಾಡುತ್ತದೆ. ಆದ್ದರಿಂದ ತಾವಕಾಶಮಾಡದೆ ಬಿಡಿಸು.

೧೮. ಇದನ್ನು ಜಗನ್ನಾಥನು ಕೇಳಿ ಭಕ್ತರನ್ನು ಬಿಡಿಸಲು ಪುಷ್ಪಕದಲ್ಲಿ ಹೊರಟನು.

೧೯. ಲಕ್ಷ್ಮಣನಿಂದಲೂ ಭರತನಿಂದಲೂ ಕೂಡಿಕೊಂಡು ಮುನಿಸಮೂಹ ದೊಡನೆ ಕೂಡಿ ಬರುತ್ತಿರುವ ಶ್ರೀರಾಮಚಂದ್ರನನ್ನು ಕಪಿಯು ನೋಡಿದನು.

೨೦. ಆ ರಾಮಚಂದ್ರನು ಬರಲು ಆ ರಾಮನನ್ನು ನೋಡಿದೊಡನೆಯೇ ರಾಜನನ್ನು ಕುರಿತು ಎಲೈ ರಾಜನೇ ಭಕ್ತನನ್ನು ಬಿಡಿಸಲು ಕೃಪೆಯಿಂದ ಬಂದ ಸ್ವಾಮಿ ಯನ್ನು ನೋಡು.

೨೧. ಸ್ಮರಣದಿಂದಲೇ ಅನೇಕ ಜನ ಸೇವಕರು ಪೂರ್ವದಲ್ಲಿ ಬಿಡಿಸಲ್ಪಟ್ಟರು. ಅದರಂತೆಯೇ ನನ್ನನ್ನು ಪಾಶದಿಂದ ಬಿಡಿಸಲು ಸ್ವಾಮಿಯು ಬಂದಿದ್ದಾನೆ.

೨೨. ರಾಮಚಂದ್ರನು ಬಂದುದನ್ನು ನೋಡಿ ಸುರಥನು ಭಕ್ತಿಯಿಂದ ಅನೇಕ ಬಾರಿ ನಮಸ್ಕರಿಸಿದನು.

ಶ್ರೀರಾಮಸ್ತಂ ನಿಜೈರ್ದೋರ್ಭಿಃ ಪರಿರೇಭೇ ಚತುರ್ಭುಜಃ ।
ಮೂರ್ಧ್ನಿ ಸಿಂಚನ್ನಶ್ರುಜಲೈರ್ಹರ್ಷಾದ್ಭೃತ್ಯಂ ಸ್ವಕಂ ಪುನಃ ॥ ೨೩ ॥

ಉವಾಚ ಧನ್ಯದೇಹೋಽಸಿ ಮಹತ್ಕರ್ಮ ಕೃತಂ ತ್ವಯಾ ।
ಕಪೀಶ್ವರಸ್ತ್ವಯಾ ಬದ್ಧೋ ಹನೂಮಾನ್ಸರ್ವತೋಬಲಃ ॥ ೨೪ ॥

ಶ್ರೀರಾಮಃ ಕಪಿವರ್ಯಂ ತಂ ಮೋಚಯಾಮಾಸ ಬಂಧನಾತ್ ।
ಮೂರ್ಛಿತಾಂಸ್ತಾನ್ಪ್ಲುಟಾನ್ಸರ್ವಾನ್ವೀಕ್ಷ್ಯ ದೃಷ್ಟ್ಯಾ ಸ್ವಜೀವಯತ್ ॥ ೨೫ ॥

ತೇ ಮೂರ್ಛಾಂ ತತ್ಯಜುರ್ದೃಷ್ಟ್ವಾ ರಾಮೇಣಾಸುರಘಾತಿನಾ ।
ಉತ್ಥಿತಾ ದದೃಶುಃ ಶ್ರೀಮದ್ರಾಮಚಂದ್ರಂ ಮನೋಹರಂ ॥ ೨೬ ॥

ತೇ ಪ್ರಣಮ್ಯ ರಘುಪತಿಂ ತೇನ ಪೃಷ್ಟಾ ಅನಾಮಯಂ ।
ಸುಖೀಭೂತಾ ನೃಪಂ ಪ್ರೋಚುಃ ಸರ್ವಂ ಸ್ವಕುಶಲಂ ನೃಪಾಃ ॥ ೨೭ ॥

ಸುರಥೋ ವೀಕ್ಷ್ಯ ಶ್ರೀರಾಮಂ ಕೃತಾರ್ಥಂ ಸೇವಕಾತ್ಮನಃ ।
ಆಗತಂ ಸಕಲಂ ರಾಜ್ಯಂ ಸಹಯಂ ಸಮುದಾರ್ಪಯತ್ ॥ ೨೮ ॥

---

೨೩. ಶ್ರೀರಾಮನು ತನ್ನ ತೋಳುಗಳಿಂದ ಆತನನ್ನು ಅಪ್ಪಿಕೊಂಡು ತಲೆಯ ಮೇಲೆ ಹರ್ಷದ ಕಣ್ಣೀರನ್ನು ಸುರಿಸಿದನು.

೨೪. ನೀನು ಧನ್ಯವಾದ ದೇಹವುಳ್ಳವನಾಗಿದ್ದೀಯೆ, ಮಹಾಕಾರ್ಯವನ್ನು ಮಾಡಿದೆ· ಸರ್ವರಿಗಿಂತಲೂ ಬಲಿಷ್ಠನಾದ ಹನುಮಂತನನ್ನು ಕಟ್ಟಿರುವೆಯಲ್ಲ.

೨೫. ಶ್ರೀರಾಮನು ಹನುಮಂತನನ್ನು ಬಂಧನದಿಂದ ಬಿಡಿಸಿದನು. ಮೂರ್ಛಿತರಾದ ಮಿಕ್ಕವರನ್ನು ದೃಷ್ಟಿಮಾತ್ರದಿಂದಲೇ ಬದುಕಿಸಿದನು.

೨೬. ಅಸುರಘಾತಕನಾದ ರಾಮಚಂದ್ರನ ದೃಷ್ಟಿಪಾತದಿಂದಲೇ ಮೂರ್ಛೆ ತಿಳಿದೆದ್ದು ಆ ರಾಮಚಂದ್ರನನ್ನು ನೋಡಿದರು.

೨೭. ಅವರೆಲ್ಲರೂ ರಾಮನಿಗೆ ನಮಸ್ಕರಿಸಿದರು. ರಾಮನು ಕುಶಲವನ್ನು ಕೇಳಿದನು. ಆಗ ಅವರೆಲ್ಲರೂ ಸುಖಹೊಂದಿದವರಾಗಿ ತಮ್ಮ ತಮ್ಮ ಯೋಗಕ್ಷೇಮವನ್ನು ತಿಳಿಸಿದರು.

೨೮. ಸುರಥನು ಬಂದು ಶ್ರೀರಾಮಚಂದ್ರನನ್ನು ನೋಡಿ ತನ್ನ ರಾಜ್ಯವನ್ನೂ ಕುದುರೆಯನ್ನೂ ಅರ್ಪಿಸಿದನು.

**ಅನೇಕವರಿವಸ್ಯಾಭಿಃ ಶ್ರೀರಾಮಂ ಸಮತೋಷಯತ್ ।**
**ಕಥಯಾಮಾಸ ಮೇಽನ್ಯಾಯ್ಯಂ ಕೃತಂ ತೇ ಕ್ಷಮ ರಾಘವ ॥ ೨೯ ॥**

**॥ ಶ್ರೀರಾಮ ಉವಾಚ ॥**

**ಕ್ಷತ್ರಿಯಾಣಾಮಯಂ ಧರ್ಮಃ ಸ್ವಾಮಿನಾ ಸಹ ಯುಧ್ಯತೇ ।**
**ತ್ವಯಾ ಸಾಧು ಕೃತಂ ಕರ್ಮ ರಣೇ ವೀರಾಃ ಪ್ರತೋಷಿತಾಃ ॥ ೩೦ ॥**

**ಇತ್ಯುಕ್ತವನ್ತಂ ನೃಹರಿಂ ಪೂಜಯನ್ನಸುತೋಽಭವತ್ ।**
**ಶ್ರೀರಾಮಸ್ತ್ರಿದಿನಂ ಸ್ಥಿತ್ವಾ ಯಯೌ ತಮನುಮಂತ್ರ್ಯ ಚ ॥ ೩೧ ॥**

**ಕಾಮಗೇನ ವಿಮಾನೇನ ಮುನಿಭಿಸ್ಸಹಿತೋ ಮಹಾನ್ ।**
**ತಂ ದೃಷ್ಟ್ವಾ ವಿಸ್ಮಿತಾಸ್ತಸ್ಯ ಕಥಾಶ್ಚಕ್ರುರ್ಮನೋಹರಾಃ ॥ ೩೨ ॥**

**ಚಂಪಕಂ ಸ್ವಪುರೇ ಸ್ಥಾಪ್ಯ ಸುರಥಃ ಕ್ಷತ್ರಿಯೋ ಬಲೀ ।**
**ಶತ್ರುಘ್ನೇನ ಸಮಂ ಯಾತುಂ ಮನಶ್ಚಕ್ರೇ ಮಹಾಬಲಃ ॥ ೩೩ ॥**

---

೨೯. ಅನೇಕವಾದ ಪೂಜೆ ಉಪಚಾರಗಳಿಂದ ಶ್ರೀರಾಮನನ್ನು ಸಂತೋಷ ಪಡಿಸಿದನು. ತಾನು ಮಾಡಿದ ಅನ್ಯಾಯವನ್ನು ಕ್ಷಮಿಸಬೇಕೆಂದು ಕೇಳಿದನು.

೩೦. ಶ್ರೀರಾಮನು ಹೇಳಿದನು:—ಕ್ಷತ್ರಿಯರಿಗೆ ಸ್ವಾಮಿಯೊಡನೆ ಯುದ್ಧ ಮಾಡುವುದೂ ಧರ್ಮವೇ. ನೀನು ಮಾಡಿದುದು ಒಳ್ಳೆಯ ಕೆಲಸವೇ. ಯುದ್ಧದಲ್ಲಿ ವೀರರನ್ನು ತೃಪ್ತಿಪಡಿಸಿದೆ.

೩೧. ಹೀಗೆ ಹೇಳುತ್ತಾ ಮಕ್ಕಳೊಡನೆ ಸ್ವಾಮಿಯನ್ನು ಪೂಜಿಸಿದನು. ಆ ಶ್ರೀರಾಮನೂ ಮೂರು ದಿನಗಳಿದ್ದು ಹೇಳಿ ಹೊರಟು ಹೋದನು.

೩೨. ಆ ರಾಮನು ಇಷ್ಟಬಂದಂತೆ ನಡೆಸಬಹುದಾದ ಆ ವಿಮಾನದಿಂದ ಹೊರಟುಹೋದನು. ಅವನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟು ಆತನ ಕಥೆಗಳನ್ನು ಹೇಳುತ್ತಿದ್ದರು.

೩೩. ಸುರಥನು ಮಗನಾದ ಚಂಪಕನನ್ನು ರಾಜ್ಯದಲ್ಲಿ ಪಟ್ಟಕಟ್ಟಿ ಶತ್ರುಘ್ನನೊಡನೆ ಹೋಗಲು ಮನಸ್ಸುಮಾಡಿದನು.

ಶತ್ರುಘ್ನಸ್ಸ್ವಹಯಂ ಪ್ರಾಪ್ಯ ಭೇರೀನಾದಾನಕಾರಯತ್ ।
ಶಂಖನಾದಾನ್ಬಹುವಿಧಾನ್ಸರ್ವತ್ರ ಸಮನಾದಯತ್ ॥ ೩೪ ॥

ಸುರಥೇನ ಸಮಂ ವೀರೋ ಯಜ್ಞವಾಹಮಮೂಮುಚತ್ ।
ಸ ಬಭ್ರಾಮ ಪರಾನ್ದೇಶಾನ್ನ ಕೈಶ್ಚಿಜ್ಜಗೃಹೇ ಬಲೀ ॥ ೩೫ ॥

ಯತ್ರ ಯತ್ರ ಗತೋ ವಾಹಃ ಪುರದೇಶಾನ್ಪರಿಭ್ರಮನ್ ।
ತತ್ರ ಶತ್ರುಘ್ನ ಆಯಾತಃ ಸುರಥೇನ ಮಹಾಬಲಃ ॥ ೩೬ ॥

ಕದಾಚಿಜ್ಜಾಹ್ನವೀತೀರೇ ವಾಲ್ಮೀಕೇರಾಶ್ರಮಂ ವರಂ ।
ಗತೋ ಮುನಿವರೈರ್ಜುಷ್ಟಂ ಪ್ರಾತರ್ಧೂಮೇನ ಚಿಹ್ನಿತಂ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಲಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ರಘುನಾಥಸಮಾಗಮೋನಾಮ ತ್ರಿಪಂಚಾ
ಶತ್ತಮೋಽಧ್ಯಾಯಃ

---

೩೪. ಶತ್ರುಘ್ನನು ಕುದುರೆ ಸಿಕ್ಕುತ್ತಲೂ ಭೇರಿಗಳನ್ನು ಬಾರಿಸಿದನು. ಶಂಖಗಳನ್ನು ಎಲ್ಲಾ ಕಡೆಯಲ್ಲಿಯೂ ಊದಿಸಿದನು.

೩೫. ಸುರಥನೊಡನೆ ಕೂಡಿಕೊಂಡು ಯಜ್ಞದ ಕುದುರೆಯನ್ನು ಬಿಟ್ಟನು. ಅದು ಅನೇಕ ದೇಶಗಳನ್ನು ಸುತ್ತಿತು. ಯಾರೂ ಹಿಡಿಯಲಿಲ್ಲ.

೩೬. ಕುದುರೆಯು ಊರು ದೇಶಗಳನ್ನು ಸುತ್ತುತ್ತಾ ಎಲ್ಲೆಲ್ಲಿ ಹೋಗುತ್ತಿದ್ದಿತೋ ಅಲ್ಲೆಲ್ಲ ಶತ್ರುಘ್ನನು ಸುರಥನೊಡನೆ ಸುತ್ತಿದನು.

೩೭. ಒಂದು ಸಾರಿ ಗಂಗೆಯ ದಡದಲ್ಲಿದ್ದ, ಮುನಿವರರು ಸೇವಿಸುತ್ತಿರುವ, ಪ್ರಾತಃಕಾಲದ ಧೂಮದಿಂದ ಪವಿತ್ರವಾದ ವಾಲ್ಮೀಕಿಯ ಆಶ್ರಮವನ್ನು ಹೊಂದಿತು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ರಘುನಾಥ ಸಮಾಗಮವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು.

ಶ್ರೀಃ

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುಃಪಂಚಾಶತ್ತಮೋಽಧ್ಯಾಯಃ

---

॥ ಶೇಷ ಉವಾಚ ॥

**ಗತಃ ಪ್ರಾತಃಕ್ರಿಯಾಂ ಕರ್ತುಂ ಸಮಿಧಸ್ತ್ವತ್ಕ್ರಿಯಾರ್ಹಕಾಃ ।**
**ಆನೇತುಂ ಜಾನಕೀಸೂನುರ್ವೃತೋ ಮುನಿಸುತೈರ್ಲವಃ ॥ ೧ ॥**

**ದದರ್ಶ ತತ್ರ ಯಜ್ಞಾಶ್ವಂ ಸ್ವರ್ಣಪಾತ್ರೇಣ ಚಿಹ್ನಿತಂ ।**
**ಕುಂಕುಮಾಗರುಕಸ್ತೂರೀ ದಿವ್ಯಗಂಧೇನ ವಾಸಿತಂ ॥ ೨ ॥**

**ವಿಲೋಕ್ಯ ಜಾತುಕುತುಕೋಃ ಮುನಿಪುತ್ರಾನುವಾಚ ಸಃ ।**
**ಅರ್ವಾ ಕಸ್ಯ ಮನೋವೇಗಃ ಪ್ರಾಪ್ತೋ ದೈವಾನ್ಮದಾಶ್ರಮಂ ॥ ೩ ॥**

---

## ಐವತ್ತನಾಲ್ಕನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಮುನಿಗಳಿಗೆ ಹೋಮಕ್ಕೆ ಬೇಕಾಗುವ ಸಮಿತ್ತು ದರ್ಭೆಗಳನ್ನು ತರಲು ಸೀತೆಯ ಮಗನು ಮುನಿಪುತ್ರರೊಂದಿಗೆ ಅರಣ್ಯಕ್ಕೆ ಹೋಗಿದ್ದನು.

೨. ಅಲ್ಲಿ ಚಿನ್ನದ ತಗಡನ್ನು ಕಟ್ಟಿಕೊಂಡು, ಕುಂಕುಮಕೇಸರಿ, ಅಗರು, ಕಸ್ತೂರಿ, ಮುಂತಾದುವುಗಳನ್ನು ಬಳಿಸಿಕೊಂಡು ದಿವ್ಯವಾಸನೆಯನ್ನು ಹೊಂದಿರುವ ಯಜ್ಞಾಶ್ವವನ್ನು ನೋಡಿದನು.

೩. ಜಾನಕೀಪುತ್ರನಾದ ಲವನು ಆ ಕುದುರೆಯನ್ನು ನೋಡಿ ಕಟ್ಟಬೇಕೆಂಬ ಮನಸ್ಸು ಹುಟ್ಟಿ ಜೊತೆಯವರನ್ನು ಕುರಿತು ಈ ವೇಗವುಳ್ಳ ಕುದುರೆಯು ಯಾರದು ? ದೈವೇಚ್ಛೆಯಿಂದ ನಮ್ಮ ಆಶ್ರಮಕ್ಕೆ ಬಂದಿರುವುದಿಲ್ಲ.

**ಆಗಚ್ಛಂತು ಮಯಾ ಸಾರ್ಧಂ ಪ್ರೇಕ್ಷಂತಾಂ ಮಾ ಭಯಂ ಕೃಥಾಃ ।**
**ಇತ್ಯುಕ್ತ್ವಾ ಸ ಲವಸ್ತೂರ್ಣಂ ವಾಹಸ್ಯ ನಿಕಟೇ ಗತಃ ॥ ೪ ॥**

**ಸ ರರಾಜ ಸಮೀಪಸ್ಥೋ ವಾಹಸ್ಯ ರಘುವಂಶಜಃ ।**
**ಧನುರ್ಬಾಣಧರಃ ಸ್ಕನ್ಧೇ ಜಯನ್ತ ಇವ ದುರ್ಜಯಃ ॥ ೫ ॥**

**ಗತ್ವಾ ಮುನಿಸುತೈಸ್ಸಾರ್ಧಂ ವಾಚಯಾಮಾಸ ಪತ್ರಕಂ ।**
**ಫಾಲಸ್ಥಿತಂ ಸ್ಪಷ್ಟವರ್ಣರಾಜಿರಾಜಿತಮುತ್ತಮಂ ॥ ೬ ॥**

**ವಿವಸ್ವತೋ ಮಹಾನ್ವಂಶಃ ಸರ್ವಲೋಕೇಷು ವಿಶ್ರುತಃ ।**
**ಯತ್ರ ಕೋಽಪಿ ಪರಾಬಾಧೀ ನ ಪರದ್ರವ್ಯಲಂಪಟಃ ॥ ೭ ॥**

**ಸೂರ್ಯವಂಶಧ್ವಜೋ ಧನ್ವೀ ಧನುರ್ದೀಕ್ಷಾಗುರುರ್ಗುರುಃ ।**
**ಯಂ ದೇವಾಸ್ಸಾಸುರಾಸ್ಸರ್ವೇ ನಮನ್ತಿ ಮಣಿಮೌಲಿಭಿಃ ॥ ೮ ॥**

**ತಸ್ಯಾತ್ಮಜೋ ವೀರಬಲದರ್ಪಹಾರೀ ರಘೂದ್ವಹಃ ।**
**ರಾಮಚಂದ್ರೋ ಮಹಾಭಾಗಃ ಸರ್ವಶೂರಶಿರೋಮಣಿಃ ॥ ೯ ॥**

---

೪. ನನ್ನ ಜೊತೆಯಲ್ಲಿ ಬನ್ನಿರಿ, ನೋಡಿರಿ. ಭಯಪಡಬೇಡಿರಿ. ಎಂದು ಹೇಳಿ ಕುದುರೆಯ ಬಳಿಗೆ ಹೋದನು.

೫. ಆ ಲವನು ಕುದುರೆ ಬಳಿ ಧನುರ್ಬಾಣಗಳನ್ನು ಧರಿಸಿ ನಿಂತಿದ್ದರೆ ಇಂದ್ರನ ಮಗನಾದ ಜಯಂತನಂತೆ ಕಾಣುತ್ತಿದ್ದನು.

೬. ಮುನಿಪುತ್ರರೊಡನೆ ಅಲ್ಲಿಗೆ ಹೋಗಿ ಅದರ ಹಣೆಯಲ್ಲಿದ್ದ ಸ್ಪಷ್ಟವಾದ ಅಕ್ಷರಗಳನ್ನು ಓದಿದನು.

೭-೮. ಸೂರ್ಯವಂಶವೆಂಬುದು ದೊಡ್ಡವಂಶ. ಲೋಕದಲ್ಲೆಲ್ಲಾ ಪ್ರಖ್ಯಾತವಾಗಿದೆ. ಅದರಲ್ಲಿ ಒಬ್ಬ ರಾಜನಿರುವನು. ಅವನು ಪರರನ್ನು ಬಾಧಿಸುವುದಿಲ್ಲ. ಪರದ್ರವ್ಯವನ್ನು ಅಪಹರಿಸುವುದಿಲ್ಲ. ಸೂರ್ಯವಂಶಕ್ಕೆ ಬಾವುಟದಂತಿದ್ದಾನೆ. ಬಿಲ್ಲಾಳು ಧನುಸ್ಸನ್ನು ಹಿಡಿದಿರುವವರಿಗೆಲ್ಲಾ ಉತ್ತಮನು. ಅವನನ್ನು ದೇವಾದಿಗಳೂ ರಾಕ್ಷಸರೂ ತಲೆಯಿಂದ ಬಾಗಿ ನಮಸ್ಕರಿಸುತ್ತಾರೆ. ಅವನೇ ದಶರಥನು

೯. ಅವನ ಮಗನು ರಾಮಚಂದ್ರನೆಂಬುವನು. ವೀರರ ದರ್ಪವನ್ನು ನಾಶ ಮಾಡುವವನು. ಶೂರರಿಗೆಲ್ಲಾ ಅಲಂಕಾರಪ್ರಾಯನು.

ತನ್ಮಾತಾ ಕೋಸಲನೃಪಪುತ್ರೀರತ್ನಸಮುದ್ಭವಾ ।
ತಸ್ಯಾಃ ಕುಕ್ಷಿಭವಂ ರತ್ನಂ ರಾಮಃ ಶತ್ರುಭಯಂಕರಃ ॥ ೧೦ ॥

ಕರೋತಿ ಹಯಮೇಧಂ ಸ ಬ್ರಾಹ್ಮಣೈಶ್ಚ ಸುಶಿಕ್ಷಿತಃ ।
ರಾವಣಾಭಿದವಿಪ್ರೇಂದ್ರವಧಪಾಪಾಪನುತ್ತಯೇ ॥ ೧೧ ॥

ಮೋಚಿತಸ್ತೇನ ವಾಹಾನಾಂ ಮುಖ್ಯೋऽಸೌ ಯಜ್ಞಮೂರ್ತಿಮಾನ್ ।
ಮಹಾಬಲಪರೀವಾರಪರಿಖಾಭಿಃ ಸುರಕ್ಷಿತಃ ॥ ೧೨ ॥

ತದ್ರಕ್ಷಕೋऽಸ್ತಿ ಮದ್ಭ್ರಾತಾ ಶತ್ರುಘ್ನೋ ಲವಣಾಂತಕಃ ।
ಹಸ್ತ್ಯಶ್ವರಥಪಾದಾತಸಂಘಸೇನಾಸಮನ್ವಿತಃ ॥ ೧೩ ॥

ಯಸ್ಯ ರಾಜ್ಞ ಇತಿ ಶ್ರೇಷ್ಠೋ ಮಾನೋ ಜಾಯೇತ ಸ್ವಾಸ್ಮಬಾತ್ ।
ಶೂರಾ ವಯಂ ಧನುರ್ಧಾರಿಶ್ರೇಷ್ಠಾ ವಯಮಿಹೋತ್ಕಟಾಃ ॥ ೧೪ ॥

ತೇ ಗೃಹ್ಣಂತು ಬಲಾದ್ವಾಹಂ ರತ್ನಮಾಲಾವಿಭೂಷಿತಂ ।
ಮನೋವೇಗಂ ಕಾಮಜವಂ ಸರ್ವಗತ್ವಾಧಿಭಾಸ್ಕರಂ ॥ ೧೫ ॥

---

೧೦. ಅವನ ತಾಯಿಯು ಕೋಸಲದೇಶದ ರಾಜಪುತ್ರಿಯಾದ ಕೌಸಲ್ಯೆಯು. ಅವಳ ಹೊಟ್ಟೆಯಲ್ಲಿ ಹುಟ್ಟಿದ ರಾಮನೆಂಬುವನು ಶತ್ರುಗಳಿಗೆ ಭಯಂಕರನು.

೧೧. ಅವನು ಬ್ರಾಹ್ಮಣರಿಂದ ಹೇಳಲ್ಪಟ್ಟವನಾಗಿ, ರಾವಣನೆಂಬ ಬ್ರಾಹ್ಮಣನನ್ನು ಕೊಂದು ಬಂದ ಬ್ರಹ್ಮಹತ್ಯಾಪಾಪದ ನಾಶಕ್ಕೋಸ್ಕರವಾಗಿ ಅಶ್ವಮೇಧವನ್ನು ಮಾಡುವನು.

೧೨. ಆ ರಾಮನಿಂದ ಈ ಉತ್ತಮವಾದ ಯಜ್ಞಾಶ್ವವು ಮಹಾಸೇನೆಯಿಂದ ರಕ್ಷಿತವಾಗಿ ಬಿಡಲ್ಪಟ್ಟಿದೆ.

೧೩. ಅದಕ್ಕೆ ರಕ್ಷಕನಾಗಿ ಲವಣಾಸುರಹಂತಕನಾದ ನನ್ನ ತಮ್ಮ ಶತ್ರುಘ್ನನು ಆನೆ, ಕುದುರೆ, ರಥ, ಪದಾತಿಗಳೊಂದಿಗೆ ಕೂಡಿ ಹೊರಟಿದ್ದಾನೆ.

೧೪-೧೫. ಯಾವ ರಾಜನಿಗಾದರೂ ನಾನೇ ಶ್ರೇಷ್ಠ ಎಂಬ ಕೊಬ್ಬು ತಲೆಗಿದ್ದರೆ, ನಾನೇ ಶೂರ, ಧನುರ್ಧಾರಿಗಳಲ್ಲಿ ಶ್ರೇಷ್ಠನು ಉತ್ಕಟನು ಎಂದು ತಿಳಿದಿದ್ದರೆ ಅವನು ಈ ರತ್ನಮಾಲಾವಿಭೂಷಿತವಾದ, ಮನೋವೇಗವುಳ್ಳ, ಎಲ್ಲಾ ಕಡೆಯಲ್ಲಿ ಗಮನವಿರುವ, ಸೂರ್ಯನಂತೆ ಕಾಂತಿಯುಳ್ಳ ಈ ಕುದುರೆಯನ್ನು ಹಿಡಿಯಬಹುದು.

ತತೋ ಮೋಚಯಿತಾ ಭ್ರಾತಾ ಶತ್ರುಘ್ನೋ ಲೀಲಯಾ ಹಠಾತ್ ।
ಶರಾಸನವಿನಿರ್ಮುಕ್ತಪತ್ರವಂತಗತವ್ಯಥಾತ್ ॥ ೧೬ ॥

ಯೇ ಕ್ಷತ್ರಿಯಾಃ ಕ್ಷತ್ರಿಯಕನ್ಯಕಾಸು
ಜಾತಾಶ್ಚ ಸತ್ಯೇsತ್ರ ಕುಲೇಷು ಸತ್ಸು ।
ಗೃಹ್ಣಂತು ತೇ ತದ್ವಿಪರೀತದೇಹಾ
ನಮಸ್ತು ರಾಜ್ಯಂ ರಘುವೇ ನಿವೇದ್ಯ ॥ ೧೭ ॥

ಇತಿ ಸಂವಾಚ್ಯ ಕುಪಿತೋ ಲವೋ ಶಸ್ತ್ರಧನುರ್ಧರಃ ।
ಉವಾಚ ಮುನಿಪುತ್ರಾಂಸ್ತಾನ್ರೋಷಗದ್ಗದಭಾಷಿತಃ ॥ ೧೮ ॥

ಪಶ್ಯತ ಕ್ಷಿಪ್ರಮೇತಸ್ಯ ಧೃಷ್ಟತ್ವಂ ಕ್ಷತ್ರಿಯಸ್ಯ ವೈ ।
ಲಿಲೇಖ ಯೋ ಫಾಲಪತ್ರೇ ಸ್ವಪ್ರತಾಪಬಲಂ ನೃಪಃ ॥ ೧೯ ॥

ಕೋsಸೌ ರಾಮಃ ಕಃ ಶತ್ರುಘ್ನಃ ಕೀಟಾಸ್ತ್ವಲ್ಪಬಲಾಶ್ರಿತಾಃ ।
ಕ್ಷತ್ರಿಯಾಣಾಂ ಕುಲೇ ಜಾತಾ ಏತೇ ನ ವಯಮುತ್ತಮಾಃ ॥ ೨೦ ॥

---

೧೬. ಅವನ ದೆಸೆಯಿಂದ ಈ ಶತ್ರುಘ್ನನು ಬಲಾತ್ಕಾರದಿಂದ ಬಾಣಗಳನ್ನು ಬಿಟ್ಟು ಕೊಲ್ಲುವುದರಿಂದ ಬಿಡಿಸಿಕೊಳ್ಳುತ್ತಾನೆ.

೧೭. ಯಾರು ಕ್ಷತ್ರಿಯರಾಗಿ ಕ್ಷತ್ರಿಯ ಹೆಂಗಸಲ್ಲೇ ಹುಟ್ಟಿ ಶಕ್ತರೆಂಬ ಗರ್ವವನ್ನು ಹೊಂದಿರುವರೋ ಅವರು ಈ ಕುದುರೆಯನ್ನು ಹಿಡಿಯಿರಿ. ಹಾಗಿಲ್ಲದವರು ರಾಘವನಿಗೆ ರಾಜ್ಯವನ್ನು ಕೊಟ್ಟು ನಮಸ್ಕರಿಸಿರಿ.

೧೮. ಇದನ್ನು ಓದಿ ಲವನು ಬಹು ಕೋಪಗೊಂಡನು. ಶಸ್ತ್ರವಿದ್ದ ಮುನಿಪುತ್ರರನ್ನು ಕುರಿತು ಕೋಪದಿಂದ ಇಂತೆಂದನು.

೧೯. ಯಾವನು ತನ್ನ ಪ್ರತಾಪಬಲಗಳನ್ನು ಈ ಕುದುರೆಯ ಹಣೆಯಲ್ಲಿ ಬರೆದು ಕಟ್ಟಿರುವನೋ ಅಂತಹ ಕ್ಷತ್ರಿಯನ ಹೆಮ್ಮೆಯನ್ನು ನೋಡಿದಿರಾ ? ಇವನಿಗೆ ಆಗುವುದನ್ನು ಕ್ಷಣಕಾಲದಲ್ಲಿ ನೋಡಿರಿ.

೨೦. ಈ ರಾಮನಾರು ? ಶತ್ರುಘ್ನನು ಯಾರು ? ಈ ಅಲ್ಪ ಬಲಿಷ್ಠರು ಹುಳುಗಳು. ಇವರೇ ಕ್ಷತ್ರಿಯರ ಕುಲದಲ್ಲಿ ಹುಟ್ಟಿದವರಂತೆ ! ನಾವು ಉತ್ತಮರಲ್ಲವಂತೆ.

ಏತಸ್ಯ ವೀರಸೂರ್ಮಾತಾ ಜಾನಕೀ ನ ಕುಶಪ್ರಸೂಃ ।
ಯಾ ರತ್ನಂ ಕುಶಸಂಜ್ಞಂ ತು ದಧಾರಾಗ್ನಿಮಿವಾರಣಿಃ ॥ ೨೧ ॥

ಇದಾನೀಂ ಕ್ಷತ್ರಿಯತ್ವಾದಿ ದರ್ಶಯಿಷ್ಯಾಮಿ ಸರ್ವತಃ ।
ಯದಿ ಕ್ಷತ್ರಿಯಭೂರೇಷ ಭವಿಷ್ಯತಿ ಚ ಶತ್ರುಹಾ ॥ ೨೨ ॥

ಗ್ರಹೀಷ್ಯತಿ ಮಯಾ ಬದ್ಧಂ ವಾಹಂ ಯಜ್ಞಕ್ರಿಯೋಚಿತಂ ।
ನೋ ಚೇದುತ್ಸೇಕಮುನ್ಮುಚ್ಯ ಕುಶಸ್ಯ ಚರಣಾರ್ಚಕಃ ॥ ೨೩ ॥

ಅಧುನಾ ಮೇ ಧನುರ್ಮುಕ್ತೈಶರೈಃ ಸುಪ್ತೋ ಭವಿಷ್ಯತಿ ।
ಅನ್ಯೇಽಪಿ ಯೇ ಮಹಾವೀರಾ ರಣಮಂಡಲಭೂಷಣಾಃ ॥ ೨೪ ॥

ಇತ್ಯಾದಿ ವಾಕ್ಯಮುಚ್ಚಾರ್ಯ ಲವೋ ಜಗ್ರಾಹ ತಂ ಹಯಂ ।
ತೃಣೀಕೃತ್ಯ ನೃಪಾನ್ಸರ್ವಾಂಶ್ಚಾಪಬಾಣಧರೋ ವರಃ ॥ ೨೫ ॥

---

೨೧. ಈ ನನ್ನನ್ನು ಹೆತ್ತಿರುವವಳು ವೀರಪ್ರಸವಿಣಿಯಾದ ಜಾನಕಿಯು. ಅರಣಿಯಲ್ಲಿ ಅಗ್ನಿಯು ಹುಟ್ಟಿದಂತೆ ಪುತ್ರರತ್ನವಾದ ಕುಶನನ್ನು ಹೆತ್ತಿರುವ ಆ ಜಾನಕಿಯು ವೀರಮಗನ ತಾಯಲ್ಲವೇ?

೨೨-೨೩. ಈಗ ಎಲ್ಲಾ ಕಡೆಯಲ್ಲೂ ರಾಜರೆಂಬ ಹೆಮ್ಮೆಯನ್ನು ತೋರಿಸುತ್ತೇನೆ. ಈ ಶತ್ರುಘ್ನನು ಕ್ಷತ್ರಿಯನ ಹೊಟ್ಟೆಯಲ್ಲಿ ಹುಟ್ಟಿದ್ದರೆ ನಾನು ಹಿಡಿದಿರುವ ಈ ಕುದುರೆಯನ್ನು ಬಿಡಿಸಿಕೊಳ್ಳಲಿ. ಇಲ್ಲದಿದ್ದರೆ ಹೆಮ್ಮೆಯನ್ನು ಬಿಟ್ಟು ಕುಶನ ಪಾದಗಳನ್ನು ಪೂಜಿಸಲಿ.

೨೪-೨೫. ಈಗ ಈ ಶತ್ರುಘ್ನನೂ ಯುದ್ಧಭೂಮಿಗೆ ಭೂಷಣರಾದ ಮಿಕ್ಕ ವೀರರೂ ನನ್ನ ಧನುಸ್ಸಿನಿಂದ ಹೊರಟ ಬಾಣಗಳ ಪೆಟ್ಟಿನಿಂದ ಮಲಗುತ್ತಾರೆ. ಹೀಗೆ ಹೇಳಿ, ವೀರರನ್ನು ಹುಲ್ಲಿಗಿಂತ ಕಡೆಯಾಗಿ ಕಾಣುತ್ತಾ, ವೀರನಾದ ಲವನು ಕುದುರೆಯನ್ನು ಹಿಡಿದನು.

ತದಾ ಮುನಿಸುತಾಃ ಪ್ರೋಚುರ್ಲವಂ ಹಯಜಿಘೃಕ್ಷುಕಂ ।
ಅಯೋಧ್ಯಾನೃಪತೇ ರಾಮೋ ಮಹಾಬಲಪರಾಕ್ರಮಃ ॥ ೨೬ ॥

ತಸ್ಯ ವಾಹಂ ನ ಗೃಹ್ಣಾತಿ ಶಕ್ರೋಽಪಿ ಸ್ವಬಲೋದ್ಧುರಃ ।
ಮಾ ಗೃಹಾಣ ಶೃಣುಷ್ವೇದಂ ಮದ್ವಾಕ್ಯಂ ಹಿತಸಂಯುತಂ ॥ ೨೭ ॥

ಇತ್ಯುಕ್ತಂ ಸ ಶ್ರುತೌ ಧೃತ್ವಾ ಜಗಾದ ಸ ದ್ವಿಜಾತ್ಮಜಾನ್ ।
ಯೂಯಂ ಬಲಂ ನ ಜಾನೀಥ ಕ್ಷತ್ರಿಯಾಣಾಂ ದ್ವಿಜಾತ್ಮಜಾಃ ॥ ೨೮ ॥

ಕ್ಷತ್ರಿಯಾ ವೀರ್ಯಶೌಂಡೀರ್ಯಾ ದ್ವಿಜಾ ಭೋಜನಶಾಲಿನಃ ।
ತಸ್ಮಾದ್ಯೂಯಂ ಗೃಹೇ ಗತ್ವಾ ಭುಂಜಂತು ಜನನೀಹೃತಂ ॥ ೨೯ ॥

ಇತ್ಯುಕ್ತಾಸ್ತೇಽಭವಂಸ್ತೂಷ್ಣೀಂ ಪ್ರೇಕ್ಷಿಷ್ಯಂತಃ ಪರಾಕ್ರಮಂ ।
ಲವಸ್ಯ ಮುನಿಪುತ್ರಾಸ್ತೇ ಸಂತಸ್ಥುರ್ದೂರತೋ ಬಹಿಃ ॥ ೩೦ ॥

---

೨೬-೨೭. ಆಗ ಅಲ್ಲಿದ್ದ ಋಷಿಪುತ್ರರು ಎಲೈ ಲವನೇ, ಅಯೋಧ್ಯಾಪತಿಯಾದ ರಾಮನು ಬಹು ಬಲಿಷ್ಠನು. ಅವನ ಕುದುರೆಯನ್ನು ಪರಾಕ್ರಮದಲ್ಲಿ ಪ್ರಸಿದ್ಧನಾದ ಇಂದ್ರನೂ ಹಿಡಿಯಲಾರನು. ಆದ್ದರಿಂದ ನೀನು ಹಿಡಿಯಬೇಡ. ಹಿತವಾದ ನಮ್ಮ ಮಾತನ್ನು ಕೇಳು. ಎಂದು ಕುದುರೆ ಕಟ್ಟಲಪೇಕ್ಷಿಸುವ ಆತನಿಗೆ ಹೇಳಿದರು.

೨೮. ಇದನ್ನು ಕೇಳಿ ಆ ಬ್ರಾಹ್ಮಣ ಬಾಲಕರನ್ನು ಕುರಿತು ನೀವು ಬ್ರಾಹ್ಮಣರ ಮಕ್ಕಳು ಕ್ಷತ್ರಿಯರ ಬಲವನ್ನು ತಿಳಿಯಿರಿ ಎಂದನು.

೨೯. ಕ್ಷತ್ರಿಯರು ಪರಾಕ್ರಮದಿಂದ ಕೊಬ್ಬಿದವರು. ಬ್ರಾಹ್ಮಣರು ಭೋಜನದಲ್ಲಿ ಗಟ್ಟಿಗರು. ಆದ್ದರಿಂದ ನೀವು ಮನೆಗೆ ಹೋಗಿ ತಾಯಿಯು ಮಾಡಿರುವ ಅಡಿಗೆಯನ್ನು ಚೆನ್ನಾಗಿ ಊಟಮಾಡಿರಿ.

೩೦. ಹೀಗೆ ಹೇಳಲು ಅವರೆಲ್ಲರೂ ಸುಮ್ಮನಾಗಿ ಲವನ ಪರಾಕ್ರಮವನ್ನು ನೋಡಲಪೇಕ್ಷೆಯಿಂದ ಹೊರಗಡೆಯಲ್ಲಿ ದೂರದಲ್ಲಿ ಕುಳಿತರು.

ಏವಂ ವ್ಯತಿಕರೇ ವೃತ್ತೇ ಸೇವಕಾಸ್ತಸ್ಯ ಭೂಪತೇಃ ।
ಆಯಾತಾಸ್ತಂ ಹಯಂ ಬದ್ಧಂ ದೃಷ್ಟ್ವಾ ಪ್ರೋಚುಸ್ತದಾ ಲವಂ ॥ ೩೧ ॥

ಬಬಂಧ ಕೋ ಹಯಮಹೋ ರುಷ್ಟಃ ಕಸ್ಯ ಚ ಧರ್ಮರಾಟ್ ।
ಕೋ ಬಾಣವ್ರಜಮಧ್ಯಸ್ಥಃ ಪ್ರಾಪ್ಸ್ಯತೇ ಪರಮಾಂ ವ್ಯಥಾಂ ॥ ೩೨ ॥

ತದಾ ಲವೋ ಜಗಾದಾಶು ಮಯಾ ಬದ್ಧೋಽಶ್ವ ಉತ್ತಮಃ ।
ಯೋ ಮೋಚಯತಿ ತಸ್ಯಾಶು ರುಷ್ಟೋ ಭ್ರಾತಾ ಕುಶೋ ಮಹಾನ್ ॥ ೩೩ ॥

ಯಮಃ ಕರಿಷ್ಯತಿ ಕಥಮಾಗತೋಽಪಿ ಸ್ವಯಂ ಪ್ರಭುಃ ।
ನತ್ವಾ ಗಮಿಷ್ಯತಿ ಕ್ಷಿಪ್ರಂ ಶರವೃಷ್ಟ್ಯಾ ಸುತೋಷಿತಃ ॥ ೩೪ ॥

॥ ಶೇಷ ಉವಾಚ ॥

ಏತದ್ವಾಕ್ಯಂ ಸಮಾಕರ್ಣ್ಯ ಬಾಲೋಽಯಮಿತಿ ತೇಽಬ್ರುವನ್ ।
ಸಮಾಗತಾ ಮೋಚಯಿತುಂ ಹಯಂ ಬದ್ಧಂ ತು ಯೋ ಹರೇಃ ॥ ೩೫ ॥

---

೩೧. ಈರೀತಿ ನಡೆಯಲು ಆ ರಾಜನ ಸೇವಕರು ಬಂದು ಕುದುರೆಯನ್ನು ಕಟ್ಟಿರುವುದನ್ನು ನೋಡಿ ಲವನಿಗೆ ಇಂತೆಂದರು.

೩೨. ಕುದುರೆಯನ್ನು ಯಾರು ಕಟ್ಟಿದರು? ಯಮನು ಯಾರ ವಿಷಯದಲ್ಲಿ ಕೋಪಗೊಂಡಿದ್ದಾನೆ? ಯಾವನು ಬಾಣಗಳ ಏಟಿನಿಂದ ದುಃಖಹೊಂದಬೇಕೆಂದಿದ್ದಾನೆ?

೩೩. ಆಗ ಲವನು, ನಾನು ಕುದುರೆಯನ್ನು ಕಟ್ಟಿದ್ದೇನೆ. ಯಾವನು ಬಿಚ್ಚುತ್ತಾನೋ ಅವನ ಮೇಲೆ ಕುಶನು ಕೋಪಿಸಿಕೊಳ್ಳುತ್ತಾನೆ.

೩೪. ಯಮನು ಬಂದರೆ ತಾನೇ ಏನು ಮಾಡಿಯಾನು? ಬಾಣದ ಮಳೆಯಿಂದ ಸಂತೋಷಪಟ್ಟು ಜಾಗ್ರತೆಯಾಗಿ ನಮಸ್ಕರಿಸಿ ಹೋಗುತ್ತಾನೆ.

೩೫. ಶೇಷನು ಹೇಳಿದನು.—ಈ ಮಾತನ್ನು ಕೇಳಿ ಇವನು ಹುಡುಗನೆಂದೆನ್ನುತ್ತಾ ರಾಮನ ಕುದುರೆಯನ್ನು ಬಿಚ್ಚಲು ಆಳುಗಳು ಬಂದರು.

ತಾನ್ದೃಷ್ಟ್ವಾ ಮೋಚಯಿತುಂ ಯಾತಾನ್ಶತ್ರುಘ್ನಸ್ಯ ಚ ಸೇವಕಾನ್ ।
ಕೋದಂಡಂ ಕರಯೋರ್ಧೃತ್ವಾ ಕ್ಷುರಪ್ರಾನ್ಸಮವಾಮುಚತ್ ॥ ೩೬ ॥

ತೇ ಛಿನ್ನಬಾಹವಸ್ತ್ವೇಕಾಚ್ಛತ್ರುಘ್ನಂ ಪ್ರತಿ ಸಂಗತಾಃ ।
ಪೃಷ್ಟಾಸ್ತೇ ಜಗದುಃ ಸರ್ವೇ ಲವಾತ್ಸ್ವಭುಜಕೃಂತನಂ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಲವೇನ ಹಯಬಂಧನಂ
ನಾಮ ಚತುಷ್ಪಂಚಾಶತ್ತಮೋಽಧ್ಯಾಯಃ

---

---

೩೬. ಕುದುರೆಯನ್ನು ಬಿಡಿಸಲು ಬಂದ ಶತ್ರುಘ್ನನ ಸೇವಕರನ್ನು ನೋಡಿ ಕೈಯಲ್ಲಿ ಧನುಸ್ಸನ್ನು ಹಿಡಿದು ಮೊನೆಯಾದ ಬಾಣಗಳನ್ನು ಬಿಟ್ಟನು.

೩೭. ಅವರ ಕೈಗಳು ಕತ್ತರಿಸಿ ಹೋಗಲು ಅವರು ಶತ್ರುಘ್ನನ ಬಳಿಗೆ ಹೋದರು. ಶತ್ರುಘ್ನನು ಕೇಳಲು, ಎಲ್ಲವನ್ನೂ ಹೇಳಿ ಲವನು ತಮ್ಮ ಬಾಹುಗಳನ್ನು ಕತ್ತರಿಸಿದುದನ್ನು ಹೇಳಿದರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಲವನು ಕುದುರೆಯನ್ನು
ಕಟ್ಟಿದನೆಂಬ ಐವತ್ತನಾಲ್ಕನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚಪಂಚಾಶತ್ತಮೋऽಧ್ಯಾಯಃ

---

॥ ವ್ಯಾಸ ಉವಾಚ ॥

ಏತಾಂ ಶ್ರುತ್ವಾ ಕಥಾಂ ರಮ್ಯಾಂ ಲವಸ್ಯ ಬಲಿನೋ ಮುನಿಃ ।
ಸಂಶಯಾನಃ ಪರ್ಯಪೃಚ್ಛನ್ನಾಗಂ ದಶಶತಾನನಂ ॥ ೧ ॥

॥ ವಾತ್ಸ್ಯಾಯನ ಉವಾಚ ॥

ತ್ವಯೋಕ್ತಂ ತು ಪುರಾ ರಾಮಃ ಸೀತಾಮೇಕಾಕಿನೀಂ ವನೇ ।
ರಜಕಸ್ಯ ದುರುಕ್ತ್ಯಾಸೌ ತತ್ಯಾಜ ಮಹಿಲೋಲುಪಃ ॥ ೨ ॥

ಜಾನಕ್ಯಾಂ ಕ್ವ ಸುತೌ ಜಾತೌ ಕ್ವ ಧನುರ್ಧರತಾಂ ಗತೌ ।
ಕಥಂ ವಾ ಶಿಕ್ಷಿತಾ ವಿದ್ಯಾ ಯೋ ರಾಮಹಯಮಾಹರತ್ ॥ ೩ ॥

---

## ಐವತ್ತೈದನೆಯ ಅಧ್ಯಾಯವು.

೧. ವ್ಯಾಸನು ಹೇಳಿದನು :—ಈ ಬಲಿಷ್ಠನಾದ ಲವನ ಕಥೆಯನ್ನು ಕೇಳಿ ಸಂಶಯದಿಂದ ಒಂದು ಸಾವಿರ ಹೆಡೆಯುಳ್ಳ ಆ ಶೇಷನನ್ನು ಕುರಿತು ಋಷಿಯು ಇಂತೆಂದನು.

೨. ಎಲೈ ಶೇಷನೇ, ನೀನು, ರಾಮನು ಅಗಸನ ಮಾತಿನ ಮೇಲೆ ಪ್ರಜೆಗಳನ್ನು ರಂಜಿಸಲು ಸೀತೆಯನ್ನು ಕಾಡಿನಲ್ಲಿ ಒಬ್ಬಳನ್ನೇ ಬಿಟ್ಟನೆಂದು ಹೇಳಿದೆಯಲ್ಲವೆ ?

೩. ಜಾನಕಿಗೆ ಮಕ್ಕಳು ಎಲ್ಲಿ ಹುಟ್ಟಿದರು ? ಎಲ್ಲಿ ಧನುರ್ವಿದ್ಯೆಯನ್ನು ಕಲಿತರು ? ವಿದ್ಯೆಗಳನ್ನು ಯಾರು ಹೇಳಿಕೊಟ್ಟರು ? ರಾಮನ ಯಜ್ಞಾಶ್ವವನ್ನು ಕಟ್ಟಿರುವರಲ್ಲ.

॥ ವ್ಯಾಸ ಉವಾಚ ॥
ಇತಿ ಶ್ರುತ್ವಾ ಮುನೇರ್ವಾಕ್ಯಂ ಶೇಷನಾಗೋ ಮಹಾಮತಿಃ ।
ಪ್ರಶಸ್ಯ ವಿಪ್ರಂ ಜಗದೇ ರಾಮಚಾರಿತ್ರಮುದ್ಭುತಂ ॥ ೪ ॥

॥ ಶೇಷ ಉವಾಚ ॥
ರಾಮೋ ರಾಜ್ಯಮಯೋಧ್ಯಾಯಾಂ ಭ್ರಾತೃಭಿಸ್ಸಹಿತೋಽನ್ವಭೂತ್ ।
ಧರ್ಮೇಣ ಪಾಲಯನ್ ಸರ್ವಂ ಕ್ಷಿತಿಖಂಡಂ ಸ್ವಯಾ ಸ್ತ್ರಿಯಾ ॥ ೫ ॥

ಸೀತಾ ದಧಾರ ತದ್ವೀರ್ಯಂ ಮಾಸಾಃ ಪಂಚಾಭವಂಸ್ತದಾ ।
ಅತ್ಯಂತಂ ಶುಶುಭೇ ದೇವೀ ತ್ರಯೀವ ಪುರುಷಂಧರಾ ॥ ೬ ॥

ಕದಾಚಿತ್ಸಮಯೇ ರಾಮಃ ಪಪ್ರಚ್ಛ ಚ ವಿದೇಹಜಾಂ ।
ಕೀದೃಶೋ ದೋಹದಸ್ಸಾಧ್ವಿ ಮಯಾ ತೇ ಸಾಧ್ಯತೇ ಹಿ ಸಃ ॥ ೭ ॥

ರಹಸ್ಯೇವ ತು ಸಾ ಪೃಷ್ಟಾ ತ್ರಪಮಾಣಾ ರಘೋಃ ಪತಿಂ ।
ಲಜ್ಜಾಗದ್ಗದವಾಗ್ರಾಮಂ ನಿಜಗಾದ ವಚೋಽಮೃತಂ ॥ ೮ ॥

---

೪. ವ್ಯಾಸನು ಹೇಳಿದನು:—ಇದನ್ನು ಕೇಳಿ ಶೇಷನು ರಾಮನ ಚರಿತ್ರೆಯನ್ನು ಹೇಳಲು ಪ್ರಾರಂಭಮಾಡಿದನು.

೫. ಶೇಷನು ಹೇಳಿದನು :—ರಾಮನು ತಮ್ಮಂದಿರೊಡನೆ ಅಯೋಧ್ಯೆಯಲ್ಲಿ ಧರ್ಮದಿಂದ ರಾಜ್ಯವಾಳುತ್ತ ಹೆಂಡತಿಯೊಡನೆ ಸುಖವಾಗಿದ್ದನು.

೬. ಸೀತೆಯು ಶ್ರೀ ರಾಮನ ವೀರ್ಯವನ್ನು ಧರಿಸಿದಳು. ಐದು ತಿಂಗಳು ಆದುವು. ಆಕೆಯು ಪರಮ ಪುರುಷನನ್ನು ಒಳಗೆ ಹೊಂದಿರುವ ವೇದಗಳಂತೆ ಪ್ರಕಾಶಿಸಿದಳು.

೭. ಒಂದು ಸಾರಿ ರಾಮನು ಎಲೈ ಸಾಧ್ವಿಯೇ, ನಿನಗೆ ಬಯಕೆಯೇನಿರುವುದು ಹೇಳು ಅದನ್ನು ಮಾಡಿಕೊಡುತ್ತೇನೆ ಎಂದು ಆಕೆಯನ್ನು ಕೇಳಿದನು.

೮. ರಾಮನು ಗುಟ್ಟಾಗಿ ಕೇಳಲು ಆಕೆಯು ಲಜ್ಜೆಯಿಂದ ಗದ್ಗದ ಮಾತುಳ್ಳವಳಾಗಿ ಇಂತೆಂದಳು.

॥ ಸೀತೋವಾಚ ॥

ತ್ವತ್ಪ್ರಸಾದೋ ಮಯಾ ಸರ್ವಂ ಭುಕ್ತಂ ಭೋಕ್ಷ್ಯಾಮಿ ಶೋಭನಂ ।
ನ ಕಶ್ಚಿನ್ಮಾನಸೇ ಕಾಂತ ವಿಷಯೋ ಹ್ಯತಿರಿಚ್ಯತೇ ॥ ೯ ॥

ಯಸ್ಯಾ ಭವಾದೃಶಸ್ಸ್ವಾಮೀ ದೇವಸಂಸ್ತುತಸತ್ಪದಃ ।
ತಸ್ಯಾಸ್ಸರ್ವಂ ವರೀವರ್ತಿ ನ ಕಿಂಚಿದಪಿ ಶಿಷ್ಯತೇ ॥ ೧೦ ॥

ತ್ವಮಾಗ್ರಹಾತ್ಪೃಚ್ಛಸಿ ಮಾಂ ದೋಹದಂ ಮನಸಿ ಸ್ಥಿತಂ ।
ಪ್ರಬ್ರವೀಮಿ ಪುರಸ್ಸತ್ಯಂ ತವ ಸ್ವಾಮಿನ್ಮನೋರಮಂ ॥ ೧೧ ॥

ಚಿರಂ ಜಾತಂ ಮಯಾ ಸತ್ಯೋ ಲೋಪಾಮುದ್ರಾದಿಕಾಃ ಸ್ತ್ರಿಯಃ ।
ದೃಷ್ಟಾ ಸ್ವಾಮಿನ್ಮನೋ ದ್ರಷ್ಟುಂ ತಾ ಉತ್ಸುಕತಿ ಸುಂದರೀಃ ॥ ೧೨ ॥

ರಾಜ್ಯಂ ಪ್ರಾಪ್ತಾ ತ್ವಯಾ ಸಾರ್ಧಮನೇಕಸುಖಮಾಸ್ಥಿತಾ ।
ಕೃತಘ್ನಾಹಂ ಕದಾಪೀಹ ತಾ ನಮಸ್ಕರ್ತುಂ ಮಾನಸಾ ॥ ೧೩ ॥

---

೯. ಎಲೈ ಕಾಂತನೇ, ನಿನ್ನ ಕೃಪೆಯಿಂದ ಎಲ್ಲವನ್ನೂ ಅನುಭವಿಸಿದ ಉತ್ತಮವಾದುದನ್ನು ಮುಂದೆಯೂ ಅನುಭವಿಸುತ್ತಲೂ ಇದ್ದೇನೆ. ನನಗೆ ಅಂತಹ ವಿಶೇಷ ಆಸೆಗಳೇನೂ ಇಲ್ಲ.

೧೦. ದೇವತೆಗಳಿಂದ ಹೊಗಳಲ್ಪಟ್ಟ ಪಾದಕಮಲಗಳುಳ್ಳ ತಮ್ಮಂಥಹ ಸ್ವಾಮಿಯನ್ನು ಪಡೆದಿರುವವಳಿಗೆ ಎಲ್ಲವೂ ವಶವಾಗಿಯೇ ಇರುತ್ತದೆ. ಒಂದೂ ಉಳಿದಿರುವುದಿಲ್ಲ.

೧೧. ನೀನು ಬಲವಂತದಿಂದ ನನ್ನ ಮನಸ್ಸಿನಲ್ಲಿರುವ ಬಯಕೆಯನ್ನು ಕೇಳುತ್ತಿದ್ದೀಯೆ. ಆದ್ದರಿಂದ ನಿನ್ನ ಮುಂದೆ ಸತ್ಯವಾಗಿಯೂ ಹೇಳುತ್ತೇನೆ.

೧೨. ಲೋಪಾಮುದ್ರೆಯೇ ಮೊದಲಾದ ಪತಿವ್ರತಾಸ್ತ್ರೀಯರನ್ನು ನೋಡಿ ಬಹು ದಿನಗಳಾದುವು. ಸ್ವಾಮಿಯೇ, ಅವರನ್ನು ನೋಡಲು ಮನಸ್ಸಿನಲ್ಲಿ ಆಶೆಯಾಗುತ್ತಿದೆ.

೧೩. ನಿನ್ನೊಡನೆ ರಾಜ್ಯವನ್ನು ಹೊಂದಿದೆನು. ಅನೇಕ ಸುಖಗಳನ್ನು ಹೊಂದಿದೆನು. ನಾನು ಕೃತಘ್ನಳು. ಅವರಿಗೆ ಹೋಗಿ ನಮಸ್ಕಾರಮಾಡಿ ಬರುವ ಮನಸ್ಸನ್ನು ಕೂಡ ಮಾಡಲಿಲ್ಲವಲ್ಲ.

ತತ್ರ ಗತ್ವಾ ತಪಃಶೋಽಶಾಸ್ವಸ್ತ್ರಾದ್ಯೈಃ ಪರಿಪೂಜಯೇ ।
ರತ್ನಾನಿ ಚೈವ ಭಾಸ್ವಂತಿ ಭೂಷಾ ಅಪಿ ಸಮರ್ಪಯೇ ॥ ೧೪ ॥

ಯಥಾ ಮೇ ತೋಷಿತಾಸ್ಸತ್ಯೋ ದದತ್ಯಾಶೀರ್ಮನೋಹರಾಃ ।
ಏಷ ಮೇ ದೋಹದಃ ಕಾನ್ತ ಪರಿಪೂರಯ ಮಾನಸೇ ॥ ೧೫ ॥

ಇತ್ಥಮಾಕರ್ಣ್ಯ ವಚನಂ ಸೀತಾಯಾಸ್ಸುಮನೋಹರಂ ।
ಜಗಾದ ಪರಮಪ್ರೀತೋ ರಾಮಚಂದ್ರಂ ಪ್ರಿಯಾಂ ಪ್ರತಿ ॥ ೧೬ ॥

ಧನ್ಯಾಸಿ ಜಾನಕೀ ಪ್ರಾತರ್ಗಮಿಷ್ಯಸಿ ತಪೋಧನಾಃ ।
ಪ್ರೇಕ್ಷ್ಯ ತಾಸ್ತು ಕೃತಾರ್ಥಾ ತ್ವಮಾಗಮಿಷ್ಯಸಿ ಮೇಽನ್ತಿಕಂ ॥ ೧೭ ॥

ಇತಿ ರಾಮವಚಶ್ಶ್ರುತ್ವಾ ಪರಮಾಂ ಪ್ರೀತಿಮಾಪ ಸಾ ।
ಪ್ರಾತರ್ಮಮ ಭವತ್ಯದ್ಧಾ ತಾಪಸೀನಾಂ ಸಮೀಕ್ಷಣಂ ॥ ೧೮ ॥

ಅಥ ತನ್ನಿಶಿ ರಾಮಸ್ಯ ಚರಾಃ ಕೀರ್ತಿಂ ನಿಜಾಂ ಶ್ರುತಾಂ ।
ಪ್ರೇಕ್ಷಿತುಂ ಪ್ರೇಷಿತಾಸ್ತೇ ತು ನಿಶೀಥೇ ವ್ಯಗಮನ್ ಶನೈಃ ॥ ೧೯ ॥

---

೧೪. ಅಲ್ಲಿಗೆ ಹೋಗಿ ಆ ತಪಸ್ವಿನಿಯರನ್ನು ವಸ್ತ್ರ ಮೊದಲಾದುವುಗಳಿಂದ ಸಂತೋಷಪಡಿಸುತ್ತೇನೆ. ಕಾಂತಿಯುತ್ತಾದ ರತ್ನಗಳನ್ನು ಕೊಡುತ್ತೇನೆ.

೧೫. ನಾನು ಅವರನ್ನು ಸಂತೋಷಪಡಿಸಿ ಅವರ ಆಶೀರ್ವಾದವನ್ನು ಹೊಂದುತ್ತೇನೆ. ಕಾಂತನೇ, ಇದೇ ನನ್ನ ಬಯಕೆಯು. ಇದನ್ನು ಪೂರ್ತಿಮಾಡು.

೧೬. ಸೀತೆಯ ಈ ಮಾತನ್ನು ಕೇಳಿ ಸಂತೋಷಪಟ್ಟು ರಾಮಚಂದ್ರ ನಿಂತೆಂದನು.

೧೭. ಜಾನಕಿಯೇ ನೀನೇ ಧನ್ಯಳು. ಬೆಳಗ್ಗೆ ಹೋಗುತ್ತೀಯಂತೆ. ಅವರನ್ನು ನೋಡಿ ಕೃತಾರ್ಥಳಾಗಿ ಬಾ.

೧೮. ರಾಮನ ಈ ಮಾತನ್ನು ಕೇಳಿ ಬಹು ಸಂತೋಷಪಟ್ಟಳು. ಬೆಳಗ್ಗೆ ಖಂಡಿತವಾಗಿಯೂ ತಪಸ್ವಿನಿಯರ ದರ್ಶನವಾಗುತ್ತದೆ ಎಂದುಕೊಂಡಳು.

೧೯. ಅಂದಿನ ರಾತ್ರಿಯಲ್ಲಿ ರಾಮನು ತನ್ನ ಕೀರ್ತಿಯನ್ನು ತಿಳಿಯಲು ಚಾರರನ್ನು ಕಳುಹಿಸಿರಲು ಅವರು ಹೋಗಿದ್ದರು.

ತೆ ಪ್ರತ್ಯಹಂ ರಾಮಕಥಾಃ ಶೃಣ್ವಸ್ತಃ ಸುಮನೋಹರಾಃ ।
ತದ್ದಿನೇ ಗತವಂತಸ್ತು ಧನಾಢ್ಯಸ್ಯ ಗೃಹಂ ಮಹತ್ ॥ ೨೦ ॥

ದೀಪಂ ವೀಕ್ಷ್ಯ ಪ್ರಜ್ವಲಂತಂ ವಚನಂ ವೀಕ್ಷ್ಯ ಮಾನುಷಂ ।
ಸ್ಥಿತಾಸ್ತತ್ರ ಕ್ಷಣಂ ಚಾರಾಃ ಸಮುಶೃಣ್ವನ್ಯಶೋಭೃಶಂ ॥ ೨೧ ॥

ತತ್ರ ಕಾಂಚನ ವಾಮಾಕ್ಷೀ ಬಾಲಕಂ ಪ್ರತಿ ಹರ್ಷಿತಾ ।
ಸ್ತನಂ ಧಯಂತಂ ನಿಜಗೌ ವಾಕ್ಯಂ ತು ಸುಮನೋಹರಂ ॥ ೨೨ ॥

ಪಿಬ ಪುತ್ರ ಯಥೇಷ್ಟಂ ತ್ವಂ ಸ್ತನ್ಯಂ ಮಮ ಮನೋಹರಂ ।
ಪಶ್ಚಾತ್ತವ ಸುದುಷ್ಪ್ರಾಪ್ಯಂ ಭವಿಷ್ಯತಿ ಮಮಾತ್ಮಜ ॥ ೨೩ ॥

ಏತತ್ಪುರ್ಯಾಃ ಪತೀ ರಾಮೋ ನೀಲೋತ್ಪಲದಳಪ್ರಭುಃ ।
ತತ್ಪುರೀಸ್ಥಜನಾನಾಂ ತು ನ ಭವಿಷ್ಯತಿ ವೈ ಜನುಃ ॥ ೨೪ ॥

ಜನ್ಮಾಭಾವಾತ್ಕಥಂ ಪಾನಂ ಸ್ತನ್ಯಸ್ಯ ಭುವಿ ಜಾಯತೇ ।
ತಸ್ಮಾತ್ಪಿಬ ಮುಹುಃ ಸ್ತನ್ಯಂ ದುರ್ಲಭಂ ಮಮ ಪುತ್ರಕ ॥ ೨೫ ॥

---

೨೦. ಅವರು ಪ್ರತಿದಿನವೂ ರಾಮನ ಚರಿತ್ರೆಯನ್ನು ಮನೋಹರವಾಗಿ ಕೇಳಿ ಬರುತ್ತಿದ್ದರು. ಆದಿನ ಒಬ್ಬ ಧನಿಕನ ಮನೆಗೆ ಹೋದರು.

೨೧. ದೀಪ ಉರಿಯುತ್ತಿರುವುದನ್ನೂ ಮನುಷ್ಯರು ಮಾತನಾಡುತ್ತಿರುವುದನ್ನೂ ನೋಡಿ ರಾಮನ ಯಶಸ್ಸನ್ನು ಕೇಳುತ್ತಾ ಅಲ್ಲಿ ಆ ಚಾರರು ಒಂದು ಕ್ಷಣ ಕಾಲವಿದ್ದರು.

೨೨. ಅಲ್ಲೊಬ್ಬ ಹೆಂಗಸು ಮಗನನ್ನು ನೋಡಿ ಸಂತೋಷಪಟ್ಟು ಹಾಲು ಕುಡಿಸುತ್ತ ಇಂತೆಂದಳು.

೨೩. ಎಲೈ ಮಗುವೇ, ನನ್ನ ಚೆನ್ನಾಗಿರುವ ಈ ಮೊಲೆಯಹಾಲನ್ನು ಯಥೇಚ್ಛವಾಗಿ ಕುಡಿ. ಆಮೇಲೆ ನಿನಗೆ ಸಿಕ್ಕುವುದಿಲ್ಲ. ನನ್ನ ಮಗುವೇ ಚೆನ್ನಾಗಿ ಕುಡಿ.

೨೪. ಈ ಊರಿಗೆ ನೀಲೋತ್ಪಲದಂತೆ ಕಾಂತಿಯುಳ್ಳ ರಾಮನು ಪ್ರಭುವು. ಈ ಊರಿನಲ್ಲಿರುವವರಿಗೆ ಪುನರ್ಜನ್ಮ ಸಿಕ್ಕುವುದಿಲ್ಲ

೨೫. ಜನ್ಮವೇ ಇಲ್ಲದಿರುವಾಗ ಭೂಲೋಕದಲ್ಲಿ ಸ್ತನ್ಯಪಾನವು ಹೇಗೆ ಸಿಕ್ಕೀತು ?

ಯೇ ಶ್ರೀರಾಮಂ ಸ್ಮರಿಷ್ಯಂತಿ ಧ್ಯಾಸ್ಯಂತಿ ಚ ವದಂತಿ ಚ ।
ತೇಷಾಮಪಿ ಪಯಃಪಾನಂ ನ ಭವಿಷ್ಯತಿ ಕಾಹಿಚಿತ್ ॥ ೨೬ ॥

ತಾವದನ್ಯಚರಸ್ತತ್ರ ಮನೋಹರಮಿದಂ ಗೃಹಂ ।
ಮತ್ವಾ ತಿಷ್ಠತಿ ರಾಮಸ್ಯ ಕ್ಷಣಂ ಶುಶ್ರೂಷಯಾ ಯಶಃ ॥ ೨೭ ॥

ಇತ್ಯಾದಿ ವಾಕ್ಯಂ ಸಂಶ್ರುತ್ಯ ಶ್ರೀರಾಮಯಶಸೋಽಮೃತಂ ।
ಹರ್ಷಿತಃ ಪ್ರಯಯೌ ಗೇಹಮನ್ಯದ್ಭಾಗ್ಯವತೋ ಮಹತ್ ॥ ೨೮ ॥

ತತ್ರ ಕಾಂತಾ ನಿಜಂ ಕಾಂತಂ ಪರ್ಯಂಕೋಪರಿ ಸುಸ್ಥಿತಂ ।
ತಾಂಬೂಲಂ ಚರ್ವತೀ ದತ್ತಂ ಭರ್ತ್ರಾ ಸ್ನೇಹೇನ ಸುಂದರೀ ॥ ೨೯ ॥

ಕಂಕಣಸ್ವರ್ಣಶೋಭಾಢ್ಯಾ ಕರ್ಪೂರಾಗರುಧೂಪಿತಾ ।
ಕಾನ್ತಂ ವೀಕ್ಷ್ಯ ಲಸನ್ನೇತ್ರಾ ಕಾಮರೂಪಮುಪೋಜತ ॥ ೩೦ ॥

ನಾಥ ತ್ವಂ ತಾದೃಶೋ ಮಹ್ಯಂ ಭಾಸಿ ಯಾದೃಗ್ರಘೋಃ ಪತಿಃ ।
ಅತ್ಯಂತಸುಂದರತರಂ ವಪುರ್ಬಿಭ್ರತ್ಸುಕೋಮಲಂ ॥ ೩೧ ॥

---

೨೬. ರಾಮನನ್ನು ಸ್ಮರಿಸಿದವರೂ, ಧ್ಯಾನಿಸಿದವರೂ, ನಾಮೋಚ್ಚಾರಣೆಮಾಡಿದವರೂ, ಜನ್ಮವನ್ನು ಹೊಂದುವುದಿಲ್ಲ. ಅವರಿಗೂ ಸ್ತನ್ಯಪಾನವು ದುರ್ಲಭವಾದುದು.

೨೭. ಅಲ್ಲಿ ಮತ್ತೊಬ್ಬ ಚಾರನು ಮನೋಹರವಾದ ಆ ಮನೆಯಲ್ಲಿ ರಾಮನ ಯಶಸ್ಸನ್ನು ಕೇಳಬೇಕೆಂಬ ಇಚ್ಛೆಯಿಂದಿದ್ದನು.

೨೮-೩೦. ಈರೀತಿಯಾದ ರಾಮನ ಯಶೋಮೃತಪಾನಮಾಡಿ ಸಂತೋಷಗೊಂಡು ಮತ್ತೊಬ್ಬ ಭಾಗ್ಯವಂತನ ಮನೆಗೆ ಹೋದರು. ಅಲ್ಲಿ ಒಂದು ಮಂಚದ ಮೇಲೆ ಗಂಡನು ಸ್ನೇಹದಿಂದ ತಾನು ತಾಂಬೂಲವನ್ನು ಅಗಿಯುತ್ತಾ ಹೆಂಡತಿಗೂ ಕೊಡುತ್ತಿದ್ದನು. ಆಕೆಯು ಚಿನ್ನದ ಬಳೆಗಳೇ ಮುಂತಾದುವುಗಳನ್ನು ಹಾಕಿಕೊಂಡು ಒಳ್ಳೆಯ ಗಂಧವನ್ನು ಪೂಸಿಕೊಂಡು ತಾಂಬೂಲವನ್ನು ಅಗಿಯುತ್ತಾ ಕಡೆಗಣ್ಣಿನಿಂದ ಗಂಡನನ್ನು ನೋಡುತ್ತಾ ಇಂತೆಂದಳು.

೩೧-೩೨. ಎಲೈ ನಾಥನೇ ನೀನು ನನಗೆ ರಾಮನು ಹೇಗಿದ್ದಾನೋ ಹಾಗೆ ಕಾಣುತ್ತೀಯೆ. ಅತ್ಯಂತ ಸುಂದರವಾದ ದೇಹವಿದೆ. ಅದು ಕೋಮಲವಾಗಿಯೂ

ಪದ್ಮಪ್ರಾಂತ್ತಂ ನೇತ್ರಯುಗ್ಮಂ ವಕ್ಷೋ ಮೋಹನವಿಸ್ತೃತಂ ।
ಭುಜೌ ಚ ಸಾಂಗದೌ ಬಿಭ್ರತ್ಸಾಕ್ಷಾದ್ರಾಮ ಇವಾಸಿ ಮೇ ॥ ೩೨ ॥

ಇತಿ ವಾಕ್ಯಂ ಸಮಾಕರ್ಣ್ಯ ಕಾನ್ತಾಯಾಸ್ಸುಮನೋಹರಂ ।
ಉವಾಚ ನೇತ್ರಯೋಃ ಪ್ರಾಂತ್ತಂ ನರ್ತಯನ್ನಾಮಸುಂದರಃ ॥ ೩೩ ॥

ಶೃಣು ಕಾನ್ತೇ ತ್ವಯಾ ಪ್ರೋಕ್ತಂ ಸಾಧ್ವ್ಯಾ ತು ಸುಮನೋಹರಂ ।
ಪತಿವ್ರತಾನಾಂ ತದ್ಯೋಗ್ಯಂ ಸ್ವಕಾಂತೋ ರಾಮ ಏವ ಹಿ ॥ ೩೪ ॥

ಪರಂ ಕ್ವಾಹಂ ಮಂದಭಾಗ್ಯಃ ಕ್ವ ರಾಮೋ ಭಾಗ್ಯವಾನ್ಮಹಾನ್ ।
ಕ್ವಾಹಂ ಕೀಟಕವತ್ತುಚ್ಛಃ ಕ್ವ ಬ್ರಹ್ಮಾದಿಸುರಾರ್ಚಿತಃ ॥ ೩೫ ॥

ಖದ್ಯೋತಃ ಕ್ವ ನಭೋರತ್ನಂ ಶಲಭಃ ಕ್ವನು ಪಾಮರಃ ।
ಗಜಾರಿಃ ಕ್ವ ಮೃಗೇಂದ್ರೋಽಸೌ ಶಶಕಃ ಕ್ವನು ಮಂದಧೀಃ ॥ ೩೬ ॥

---

ಇದೆ. ಪದ್ಮದಂತೆ ಕಣ್ಣುಗಳಿವೆ. ಎದೆಯು ವಿಶಾಲವಾಗಿ ಮೋಹಕವಾಗಿದೆ. ಭುಜಗಳು ಕೂಡ ಅಂಗದಗಳನ್ನು ಹಾಕಿಕೊಂಡಿರುವ ರಾಮನ ಭುಜಗಳಂತಿವೆ. ನೀನು ನನಗೆ ಪ್ರತ್ಯಕ್ಷವಾದ ರಾಮನಂತೆಯೇ ಇದ್ದೀಯೆ.

೩೩. ಹೀಗೆ ಹೆಂಡತಿಯ ಮನೋಹರವಾದ ಮಾತನ್ನು ಕೇಳಿ ಹುಬ್ಬು ಕುಣಿಸುತ್ತ ಆ ಸುಂದರನಿಂತೆಂದನು.

೩೪. ಎಲೈ ಕಾಂತೆಯೇ, ನೀನು ಹೇಳಿದ ಮಾತು ಮನೋಹರವಾದುದು. ಪತಿವ್ರತೆಯರಿಗೆ ಯೋಗ್ಯವಾದುದು. ಅವರವರಿಗೆ ಆ ಪಾತ್ರಿವ್ರತ್ಯದಿಂದ ಅವರವರ ಗಂಡಂದಿರು ರಾಮನೇ ಆಗಿರುತ್ತಾರೆ.

೩೫. ಆದರೆ ಮಂದಭಾಗ್ಯನಾದ ನಾನೆಲ್ಲಿ? ಭಾಗ್ಯವಂತನಾದ ರಾಮನೆಲ್ಲಿ? ಹುಳುಗಳಂತೆ ತುಚ್ಛನಾದ ನಾನು ಎಷ್ಟರವನು? ಬ್ರಹ್ಮನೇ ಮೊದಲಾದ ದೇವತೆಗಳಿಂದ ಪೂಜಿತನಾದ ಆ ರಾಮನೆಲ್ಲಿ?

೩೬. ನಭೋರತ್ನವಾದ ಸೂರ್ಯನೆಲ್ಲಿ ಪಾಮರವಾದ ಶಲಭನೆಲ್ಲಿ? ಗಜಾರಿಯಾದ ಮೃಗೇಂದ್ರ (ಸಿಂಹ) ನೆಲ್ಲಿ? ಬುದ್ಧಿಯಿಲ್ಲದ ಮೊಲವೆಲ್ಲಿ?

ಕ್ವ ಚ ಸಾ ಜಾಹ್ನವೀ ದೇವೀ ಕ್ವ ರಥ್ಯಾಜಲಮುತ್ಪಥಂ ।
ಕ್ವ ಮೇರುಃ ಸುರಸಂವಾಸಃ ಕ್ವ ಗುಂಜಾಪುಂಜಕೋಽಲ್ಪಕಃ ॥ ೩೭ ॥

ತಥಾಹಂ ಕ್ವ ಕ್ವ ರಾಮೋಽಸೌ ಯತ್ಪಾದರಜಸಾಂಗನಾ ।
ಶಿಲೀಭೂತಾ ಕ್ಷಣಾದ್ಯಾತಾ ಬ್ರಹ್ಮನೋಹನರೂಪಧೃತ್ ॥ ೩೮ ॥

ಇತಿ ವಾಕ್ಯಂ ಪ್ರಬ್ರುವಾಣಂ ಪರಿರೇಭೇ ನಿಜಂ ಪತಿಂ ।
ಜಾತಾ ಕಾಮಾಹೃತಪ್ರೇಮ್ಣಾ ನರ್ತಿತಭ್ರೂಧನುರ್ಧರಾ ॥ ೩೯ ॥

ಇತ್ಯಾದಿ ವಾಕ್ಯಂ ಸಂಶ್ರುತ್ಯ ಗತಶ್ಚಾರೋಽನ್ಯವೇಶನಂ ।
ತಾವದನ್ಯಶ್ಚರೋ ವಾಕ್ಯಂ ಶುಶ್ರಾವ ಯಶಸಾರ್ಜಿತಂ ॥ ೪೦ ॥

ಕಾಚಿತ್ಪುಷ್ಪಮಯೀಂ ಶಯ್ಯಾಂ ಚಂದನಂ ಸಹಚಂದ್ರಕಂ ।
ಸರ್ವಂ ವಿಧಾಯ ಕಾಮಾರ್ಹಂ ಜಗಾದ ವಚನಂ ಪತಿಂ ॥ ೪೧ ॥

---

೩೭. ಆ ಮಹಿಮಳಾದ ಗಂಗಾದೇವಿ ಎಲ್ಲಿ? ದಾರಿಯಿಂದ ಹೊರಗೆ ಬಿದ್ದಿರುವ ಆ ನೀರೆಲ್ಲಿ? ದೇವತೆಗಳ ವಾಸಸ್ಥಾನವಾದ ಆ ಮೇರುವೆಲ್ಲಿ? ಗುಲಗಂಜಿಯ ಗೊಂಚಲೆಲ್ಲಿ?

೩೮. ಆ ರೀತಿಯಾಗಿ ನಾನೆಷ್ಟರವನು, ರಾಮನೆಷ್ಟರವನು? ಅವನ ಪಾದದ ಧೂಳಿನಿಂದ ಕಲ್ಲಾಗಿದ್ದ ಅಹಲ್ಯೆಯು ಸುಂದರ ರೂಪವನ್ನು ಧರಿಸಿದಳು.

೩೯. ಪತಿಯು ಹೀಗೆ ಹೇಳುತ್ತಿರಲು, ಕಾಮದಿಂದ ಪ್ರೀತಿಯು ಹೆಚ್ಚಿ ಹುಬ್ಬನ್ನು ಹಾರಿಸುತ್ತಾ ಆತನನ್ನು ಆಲಿಂಗಿಸಿಕೊಂಡಳು.

೪೦. ಇವೇ ಮೊದಲಾದ ಮಾತುಗಳನ್ನು ಕೇಳಿ, ಚಾರನು ಹೊರಟು ಹೋದನು. ಅಷ್ಟರೊಳಗೆ ಮತ್ತೊಬ್ಬ ಚಾರನು ಆ ರಾಮನ ಯಶಸ್ಸನ್ನು ಕೇಳುತ್ತಿದ್ದನು.

೪೧. ಒಬ್ಬಳು ಹೂವಿನ ಹಾಸಿಗೆಯನ್ನು ಹಾಸಿ, ಚಂದನ ಪಚ್ಚಕರ್ಪೂರ ಮೊದಲಾದ ಎಲ್ಲಾ ಕಾಮೋಪಭೋಗಗಳನ್ನೂ ಇಟ್ಟು ಗಂಡನನ್ನು ಕುರಿತು ಇಂತೆಂದಳು.

ಏಹಿ ಕುರುಷ್ವ ಭೋಗಾರ್ಹಂ ಶಯನಂ ಪುಷ್ಪಶಾಯಕೇ ।
ಚಂದನಾದಿಕಲೇಪಂ ಚ ತಥಾ ಭೋಗಮನೇಕಧಾ ॥ ೪೨ ॥

ತ್ವಾದೃಶಾ ಏವ ಭೋಗಾರ್ಹಾ ನ ಚ ರಾಮಪರಾಙ್ಮುಖಾಃ ।
ಸರ್ವಂ ರಾಮಕೃಪಾಪ್ರಾಪ್ತಮುಪಭುಂಕ್ಷ್ವ ಯಥಾತಥಂ ॥ ೪೩ ॥

ಮತ್ಸದೃಶೀ ಕಾಮಿನೀ ತೇ ಚಂದನಂ ತಾಪಹಾರಕಂ ।
ಪರ್ಯಂಕಃ ಪುಷ್ಪರಚಿತಃ ಸರ್ವಂರಾಮಕೃಪಾಭವಂ ॥ ೪೪ ॥

ಯೇ ರಾಮಂ ನ ಭಜಿಷ್ಯಂತಿ ತೇ ನರಾಜಠರಂ ಸ್ವಕಂ ।
ನ ಭರ್ತುಂ ಶಕ್ನುವಂತ್ಯೇತೇ ವಸ್ತ್ರಭೋಗಾದಿವರ್ಜಿತಾಃ ॥ ೪೫ ॥

ಇತಿ ಬ್ರುವತೀಂ ಮಹಿಳಾಂ ಹರ್ಷಿತಃ ಪತಿರಬ್ರವೀತ್ ।
ಸರ್ವಂ ತಥ್ಯಂ ಬ್ರವೀಷಿ ತ್ವಂ ಮಮ ರಾಮಕೃಪಾಭವಂ ॥ ೪೬ ॥

---

೪೨. ಎಲೈ ಪತಿಯೇ, ಬಾ ಹೂವಿನ ಹಾಸಿಗೆಯಲ್ಲಿ ಭೋಗಪಡು, ಬಾ ಚಂದನ ಕರ್ಪೂರ ಎಲ್ಲಾ ಭೋಗ ಸಾಮಗ್ರಿಗಳೂ ಸಿದ್ಧವಾಗಿವೆ ಭೋಗಪಡು. ಅನೇಕ ರೀತಿಯಲ್ಲಿ ಸುಖಿಸು.

೪೩. ರಾಮಭಕ್ತರಾದ ನಿನ್ನಂತಹವರೇ ಭೋಗಾರ್ಹರು. ಎಲ್ಲವೂ ರಾಮನ ಕೃಪೆಯಿಂದ ಸಿಕ್ಕಿವೆ. ಇಷ್ಟಬಂದಂತೆ ಭೋಗಿಸು.

೪೪. ನನ್ನಂತಹ ಹುಡುಗಿಯು, ತಾಪಹರಣಮಾಡುವ ಚಂದನವು, ಪುಷ್ಪ ದಿಂದ ಮಾಡಿರುವ ಹಾಸಿಗೆಯು, ಇವೆಲ್ಲವೂ ರಾಮಕೃಪೆಯಿಂದ ಉಂಟಾದುವು.

೪೫. ರಾಮನನ್ನು ಭಜಿಸದಿದ್ದರೆ ಅವರು ಹೊಟ್ಟೆಯನ್ನು ಹೊರದುಕೊಳ್ಳ ಲೆ ಬಟ್ಟೆ ಮುಂತಾದುವನ್ನು ಹೊಂದಲಾರರು.

೪೬. ಇಂತೆನ್ನುವ ಹೆಂಡತಿಯನ್ನು ಕುರಿತು ಸಂತೋಷದಿಂದ ಗಂಡನು ನೀನು ಹೇಳುವುದೆಲ್ಲವೂ ನಿಜ. ನನಗೆ ಇವೆಲ್ಲವೂ ರಾಮಕೃಪೆಯಿಂದಲೇ ಸಿಕ್ಕಿವೆ ಎಂದನು.

ಇತ್ಯೇವಂ ರಾಮಭದ್ರಸ್ಯ ಯಶಶ್ಶ್ರುತ್ವಾ ಗತಶ್ಚರಃ ।
ತಾವದನ್ಯಸ್ಯ ವೇಶ್ಮಸ್ಥಂ ಚಾರೋಽನ್ಯಶ್ಶುಶ್ರುವೇ ವಚಃ ॥ ೪೭ ॥

ಕಾಚಿತ್ಕಾಂತೇನ ಪರ್ಯಂಕೇ ವೀಣಾವಾದನತತ್ಪರಾ ।
ಕಾಂತೇನ ರಾಮಸತ್ಕೀರ್ತಿಂ ಗಾಯಮಾನಾ ಪತಿಂ ಜಗೌ ॥ ೪೮ ॥

ಸ್ವಾಮಿನ್ವಯಂ ಧನ್ಯತಮಾ ಯೇಷಾಂ ಪುರ್ಯಾಃ ಪತಿಃ ಪ್ರಭುಃ ।
ಶ್ರೀರಾಮಃ ಸ್ವಪ್ರಜಾಃ ಪುತ್ರಾನ್ಯದ್ವತ್ಪಾತಿ ಚ ರಕ್ಷಕಃ ॥ ೪೯ ॥

ಯೋ ಮಹತ್ಕರ್ಮ ದುಸ್ಸಾಧ್ಯಂ ಕೃತವಾನ್ಸುಲಭಂ ನ ತತ್ ।
ಸಮುದ್ರಂ ಯೋ ನಿಜಗ್ರಾಹ ಸೇತುಂ ತತ್ರ ಬಬಂಧ ಚ ॥ ೫೦ ॥

ರಾವಣಂ ಯೋ ರಿಪುಂ ಹತ್ವಾ ಲಂಕಾಂ ಸಂಭಜ್ಯ ವಾನರೈಃ ।
ಜಾನಕೀಮಾಜಹಾರಾತ್ರ ಮಹದಾಚಾರಮಾಚರತ್ ॥ ೫೧ ॥

ಇತಿ ಪ್ರೋಕ್ತಂ ಸಮಾಕರ್ಣ್ಯ ವಚಸ್ಸುಮಧುರಾಕ್ಷರಂ ।
ಪತಿಸ್ಮಿತಂ ಚಕಾರೇಮಾಂ ವಾಕ್ಯಂ ಪುನರಥಾಬ್ರವೀತ್ ॥ ೫೨ ॥

---

೪೭. ಈರೀತಿಯಾದ ರಾಮಭದ್ರನ ಯಶಸ್ಸನ್ನು ಕೇಳಿ ಚಾರನು ಹೊರಟು ಹೋದನು. ಇನ್ನೊಂದು ಮನೆಯಲ್ಲಿ ಬೇರೆ ಚಾರನು ಮಾತನ್ನು ಕೇಳುತ್ತಿದ್ದನು.

೪೮. ಒಬ್ಬಳು ಗಂಡನೊಡನೆ ಮಂಚದಲ್ಲಿ ಕುಳಿತು ಗಂಡನೊಡನೆ ರಾಮ ಕೀರ್ತಿಯನ್ನು ಹಾಡುತ್ತಾ ಗಂಡನನ್ನು ಗಾನಮಾಡಿದಳು.

೪೯. ಸ್ವಾಮಿ, ನಾವೇ ಧನ್ಯತಮರು. ನಮ್ಮ ಊರಿಗೆ ರಾಮನು ಪ್ರಭುವಾಗಿದ್ದಾನೆ. ಆ ಶ್ರೀರಾಮನು ಪ್ರಜೆಗಳನ್ನು ತನ್ನ ಮಕ್ಕಳಂತೆ ಕಾಪಾಡುತ್ತಿದ್ದಾನೆ.

೫೦. ಆ ರಾಮನು ಅಸಾಧ್ಯವಾದ ಕೆಲಸವನ್ನು ಮಾಡಿದ್ದಾನೆ. ಅದು ಸುಲಭವಾದುದಲ್ಲ. ಅವನು ಸಮುದ್ರರಾಜನನ್ನು ಜಯಿಸಿ ಅದರಲ್ಲಿ ಸೇತುವೆಯನ್ನು ಕಟ್ಟಿರುವನಲ್ಲ.

೫೧. ರಾವಣನನ್ನು ಜಯಿಸಿ ಲಂಕೆಯನ್ನು ಕಪಿಗಳಿಂದ ನಾಶಪಡಿಸಿ ಜಾನಕಿಯನ್ನು ತಂದನು. ಇದು ಮಹಾತ್ಮರು ಮಾಡತಕ್ಕ ಕೆಲಸವಲ್ಲವೇ ?

೫೨. ಹೀಗೆಂದು ಮಧುರವಾಗಿ ಹೇಳಿದ ಮಾತನ್ನು ಕೇಳಿ ಗಂಡನು ನಕ್ಕು ಇಂತೆಂದನು.

**ಮುಗ್ಧೇ ನೇದಂ ಮಹತ್ಕರ್ಮ ರಾಮಚಂದ್ರಸ್ಯ ಭಾಮಿನಿ ।**
**ದಶಾನನವಧಾದೀನಿ ಸಮುದ್ರಬಂಧನಾನಿ ಚ ॥ ೫೩ ॥**

**ಲೀಲಯಾ ಯೋಽವನಿಂ ಪ್ರಾಪ್ತೋ ಬ್ರಹ್ಮಾದಿಪ್ರಾರ್ಥಿತೋ ಮಹಾನ್ ।**
**ಕರೋತಿ ಸಚ್ಚರಿತ್ರಾಣಿ ಮಹಾಪಾಪಹರಾಣಿ ಚ ॥ ೫೪ ॥**

**ಮಾ ಜಾನೀಹಿ ನರಂ ರಾಮಂ ಕೌಸಲ್ಯಾನಂದವರ್ಧನಂ ।**
**ಸೃಜತ್ಯವತಿ ಹಂತ್ಯೇತದ್ವಿಶ್ವಂ ಲೀಲಾತ್ತಮಾನುಷಃ ॥ ೫೫ ॥**

**ಧನ್ಯಾ ವಯಂ ಯೇ ರಾಮಸ್ಯ ಪಶ್ಯಾಮೋ ಮುಖಪಂಕಜಂ ।**
**ಬ್ರಹ್ಮಾದಿಸುರದುರ್ದರ್ಶಂ ಮಹತ್ಪುಣ್ಯಕೃತೋ ವಯಂ ॥ ೫೬ ॥**

**ಇತ್ಯಾದಿ ವಾಕ್ಯಂ ಶುಶ್ರಾವ ಚಾರೋ ದ್ವಾರಿ ಸ್ಥಿತೋ ಮುಹುಃ ।**
**ಅಶೃಣೋದ್ರಾಮಚಂದ್ರಸ್ಯ ಚರಿತ್ರಂ ಶ್ರುತಿಸೌಖ್ಯದಂ ॥ ೫೭ ॥**

**ಅನ್ಯೋ ಹ್ಯನ್ಯಗೃಹಂ ಗತ್ವಾ ತಸ್ಥೌ ಶ್ರೋತುಂ ಹರೇರ್ಯಶಃ ।**
**ತತ್ರಾಪಿ ರಾಮಭದ್ರಸ್ಯ ಯಶಶ್ಶುಶ್ರಾವ ಶೋಭನಂ ॥ ೫೮ ॥**

---

೫೩-೫೪. ಎಲೈ ಸುಂದರಿಯೇ! ಇದು ರಾಮನಿಗೆ ಮಹಾಕಾರ್ಯವಲ್ಲ. ದಶಾನನ ವಧೆ, ಸಮುದ್ರ ಬಂಧನ, ಇವು ಅವನಿಗೆ ದೊಡ್ಡವಲ್ಲ. ಅವನು ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಟ್ಟು ಲೀಲೆಗೋಸ್ಕರ ಭೂಮಿಯಲ್ಲಿ ಅವತರಿಸಿದ್ದಾನೆ. ಮಹಾಪಾಪಹರವಾದ ಇನ್ನೂ ಒಳ್ಳೆಯ ಕೆಲಸಗಳನ್ನು ಮಾಡುತ್ತಾನೆ.

೫೫. ಕೌಸಲ್ಯೆಯ ಮಗನಾದ ರಾಮನನ್ನು ಮನುಷ್ಯಮಾತ್ರನೆಂದು ತಿಳಿಯಬೇಡ. ಸೃಷ್ಟಿ ಸ್ಥಿತಿ ಲಯಕಾರಿಯಾದ ಆ ಪರಮಾತ್ಮನೇ ಲೀಲೆಯಿಂದ ಮನುಷ್ಯನಾಗಿ ಹುಟ್ಟಿದ್ದಾನೆ.

೫೬. ರಾಮನ ಮುಖವನ್ನು ನೋಡುತ್ತಿರುವುದರಿಂದ ನಾವೇ ಧನ್ಯರು. ಬ್ರಹ್ಮನೇ ಮೊದಲಾದ ದೇವತೆಗಳಿಗೂ ನೋಡಲಸಾಧ್ಯವಾದ ಮುಖವನ್ನು ನೋಡುವುದರಿಂದ ನಾವೇ ಪುಣ್ಯವಂತರು.

೫೭. ಚಾರನು ಬಾಗಿಲಿನಲ್ಲಿ ನಿಂತು ಇವೇ ಮುಂತಾದ ರಾಮಚಂದ್ರನ ಸುಖಪ್ರದವಾದ ಕೀರ್ತಿಯ ಮಾತುಗಳನ್ನು ಕೇಳಿದನು.

೫೮. ಮತ್ತೊಬ್ಬನು ಮತ್ತೊಂದು ಮನೆಗೆ ಹೋಗಿ ರಾಮನ ಯಶಸ್ಸನ್ನು ಕೇಳಲು ನಿಂತಿದ್ದನು. ಅಲ್ಲೂ ಕೂಡ ರಾಮನ ಯಶಸ್ಸನ್ನು ಕೇಳಿದನು.

ಖೇಲಂತೀ ಸ್ವಾಮಿನಾ ಸಾಕಂ ದ್ಯೂತೇನ ಸುಮನೋಹರಾ ।
ಉವಾಚ ವಾಕ್ಯಂ ಮಧುರಂ ಕಂಕಣೇ ನೃತ್ಯತೀವ ಚ ॥ ೫೯ ॥

ಜಿತಂ ಮಯಾ ಕಾನ್ತ ಜನೇನ ಸರ್ವಂ
ಧನಂ ತ್ವದೀಯಂ ಗ್ಲಹರೂಪಿತಂ ಯತ್ ।
ಇತ್ಯಾದಿ ವಾಕ್ಯಂ ಪರಿಹಾಸಪೂರ್ವಕಂ
ಕೃತ್ವಾ ಸ್ವಕಾನ್ತಂ ಪರಿಷಸ್ವಜೇ ಮುದಾ ॥ ೬೦ ॥

ಉವಾಚ ಕಾನ್ತಶ್ಚಾರ್ವಂಗಿ ಜಿತಮೇವ ಸುಶೋಭನೇ ।
ರಾಮಂ ಮೇ ಸ್ಮರತೋ ನಿತ್ಯಂ ನ ಕುತ್ರಾಪಿ ಪರಾಜಯಃ ॥ ೬೧ ॥

ಇದಾನೀಂ ತ್ವಾಂ ತು ಜೇಷ್ಯಾಮಿ ರಾಮಂ ಸ್ಮೃತ್ವಾ ಮನೋಹರಂ ।
ದೇವಾ ಯಥಾ ಪುರಾ ಸ್ಮೃತ್ವಾ ದಿತಿಜಾನಜಯನ್ ಕ್ಷಣಾತ್ ॥ ೬೧ ॥

ಏವಮುಕ್ತ್ವಾ ಪಾಶಕಾನಾಂ ಪರಿವರ್ತನಮಾಕರೋತ್ ।
ತಾವಜ್ಜಯಂ ಪ್ರಪೇದೇ ಸ ಹರ್ಷಿತೋ ವಾಕ್ಯಮಬ್ರವೀತ್ ॥ ೬೩ ॥

ಮಮ ಪ್ರೋಕ್ತಮೃತಂ ಜಾತಂ ಜಿತಾ ತ್ವಂ ನವಯೌವ್ವನಾ ।
ರಾಮಸ್ಮಾರೀ ಕದಾಪ್ಯೇವ ನ ಭವೇದ್ರಿಪುತೋ ಭಯೀ ॥ ೬೪ ॥

---

೫೯. ಒಬ್ಬಳು ಬಳೆಗಳು ಕುಣಿಯುತ್ತಿರುವಂತೆ ಗಂಡನೊಡನೆ ಆಟವಾಡುತ್ತಾ ಇಂತೆಂದಳು.

೬೦. ಎಲೈ ಪತಿಯೇ, ನೀನು ಪಣವಾಗಿಟ್ಟ ಎಲ್ಲಾ ಹಣವನ್ನೂ ಗೆದ್ದಿದೇನೆ. ಈ ಮಾತನ್ನು ಪರಿಹಾಸವಾಗಿ ಆಡುತ್ತಾ ಗಂಡನನ್ನು ಆಲಿಂಗಿಸಿದಳು.

೬೧. ಎಲೈ ಚಾರ್ವಂಗಿಯೇ ನೀನೇನೋ ಜಯಿಸಿದೆ. ಆದರೂ ರಾಮನನ್ನು ಸ್ಮರಿಸುತ್ತಿರುವ ನನಗೆ ಅಪಜಯವೆಂಬುದು ಎಲ್ಲೂ ಇಲ್ಲವೇ ಇಲ್ಲ.

೬೨. ದೇವತೆಗಳು ಆ ಸ್ವಾಮಿಯನ್ನು ಸ್ಮರಿಸಿ ರಾಕ್ಷಸರನ್ನು ಗೆದ್ದಂತೆ ಈಗ ನಾನು ಶ್ರೀರಾಮನನ್ನು ಸ್ಮರಿಸಿ ನಿನ್ನನ್ನು ಒಂದು ಕ್ಷಣದಲ್ಲಿ ಗೆಲ್ಲುತ್ತೇನೆ.

೬೩. ಹೀಗೆಂದು ಹೇಳಿ ದಾಳಗಳನ್ನು ಬಿಟ್ಟನು. ಆಗ ಜಯವನ್ನು ಹೊಂದಿ ಸಂತೋಷದಿಂದಿಂತೆಂದನು.

೬೪. ನಾನು ಹೇಳಿದುದು ನಿಜವಾಯಿತು. ನಿನ್ನನ್ನು ಗೆದ್ದೆನು. ರಾಮನನ್ನು ಸ್ಮರಿಸುವವನು ಶತ್ರುವಿನಿಂದ ಭಯವನ್ನು ಹೊಂದುವುದೇ ಇಲ್ಲ.

ಇತ್ಯೇವಂ ತೌ ವದಂತೌ ಚ ಪರಸ್ಪರಮನುಮೋದಿತೌ ।
ಪರಿರಭ್ಯ ದೃಢಂ ಪ್ರೇಮ್ಣಾ ತತಶ್ಚಾರೋ ಗತೋ ಗೃಹಂ ॥ ೬೫ ॥

ಏವಂ ಪಂಚ ಮಹಾಚಾರಾ ರಾಜ್ಞಸ್ಸಂಶ್ರುತ್ಯ ವೈ ಯಶಃ ।
ಪರಸ್ಪರಂ ಪ್ರಶಂಸಂತೋ ಗೇಹಂ ಸ್ವಂ ಸ್ವಂ ಯಯುರ್ಮುದಾ ॥ ೬೬ ॥

ಏಕಃ ಷಷ್ಠಶ್ಚರೋ ಕಾರುಗೇಹಮಾಲೋಕ್ಯ ತತ್ರ ಹ ।
ಜಗಾಮ ಶ್ರೋತುಕಾಮೋಽಸೌ ಯಶೋ ರಾಜ್ಞೋ ಮಹೀಪತೇಃ ॥ ೬೭ ॥

ರಜಕಃ ಕ್ರೋಧಸಂಪ್ಲುಷ್ಟೋ ಭಾರ್ಯಾಮನ್ಯಗೃಹೋಷಿತಾಂ ।
ಪದಾ ಸಂತಾಡಯಾಮಾಸ ಧಿಕ್ಕುರ್ವನ್ ಶೋಣನೇತ್ರವಾನ್ ॥ ೬೮ ॥

ಗಚ್ಛ ತ್ವಂ ಮದ್ಗೃಹಾತ್ತಸ್ಯ ಗೇಹಂ ಯತ್ರೋಷಿತಾ ದಿನಂ ।
ನಾಹಂ ಗೃಹ್ಣಾಮಿ ಭವತೀಂ ದುಷ್ಟಾಂ ವಚನಲಂಘಿನೀಂ ॥ ೬೯ ॥

ತದಾಸ್ಯ ಮಾತಾ ಪ್ರೋವಾಚ ಮಾತ್ಯಜೈನಾಂ ಗೃಹಾಗತಾಂ ।
ಅಪರಾಧೇನ ರಹಿತಾಂ ದುಷ್ಟಕರ್ಮವಿವರ್ಜಿತಾಂ ॥ ೭೦ ॥

---

೬೫. ಹೀಗೆಂದು ಇಬ್ಬರೂ ಮಾತನಾಡಿಕ್ಕೊಳ್ಳುತ್ತಾ ಸಂತೋಷಪಟ್ಟು ಪ್ರೇಮ ದಿಂದ ಅಪ್ಪಿಕೊಂಡರು. ಚಾರನು ಹೊರಟುಹೋದನು.

೬೬. ಈರೀತಿ ಐದು ಜನ ಚಾರರು ರಾಜನ ಯಶಸ್ಸನ್ನು ಕೇಳಿ ಒಬ್ಬ ರೊಬ್ಬರು ಹೊಗಳಿಕ್ಕೊಳ್ಳುತ್ತಾ ತಮ್ಮ ತಮ್ಮ ಮನೆಗಳಿಗೆ ಹೋದರು.

೬೭. ಆರನೆಯ ಮತ್ತೊಬ್ಬ ಚಾರನು ರಾಜನ ಯಶಸ್ಸನ್ನು ಕೇಳಲು ಅಗಸನ ಮನೆಗೆ ಹೋದನು (ಇಸ್ತ್ರಿಮಾಡುವವನು)

೬೮. ಅಲ್ಲಿ ಅಗಸನು ಕೋಪಗೊಂಡು ಪರರ ಮನೆಯಲ್ಲಿದ್ದ ಹೆಂಡತಿಯನ್ನು ಧಿಕ್ಕಾರಮಾಡುತ್ತಾ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಹೊಡೆಯುತ್ತಿದ್ದನು.

೬೯. ಇಲ್ಲಿರಬೇಡ. ದಿನವೆಲ್ಲಾ ಇದ್ದ ಜಾಗಕ್ಕೆ ಹೋಗು. ದುಷ್ಟಳೂ ಮಾತಿನಂತೆ ನಡೆಯದವಳೂ ಆದ ನಿನ್ನನ್ನು ನಾನು ಕರೆದುಕೊಳ್ಳುವುದಿಲ್ಲ.

೭೦. ಆಗ ಅವನ ತಾಯಿಯು ಮನೆಗೆ ಬಂದ ಇವಳನ್ನು ಬಿಡಬೇಡ, ತಪ್ಪು ಮಾಡಿಲ್ಲ. ಕೆಟ್ಟ ಕೆಲಸಮಾಡುತ್ತಿಲ್ಲ ಎಂದು ಹೇಳಿದಳು.

ಮಾತರಂ ಪ್ರತ್ಯುವಾಚಾಥ ರಜಕಃ ಕ್ರೋಧಸಂಯುತಃ ।
ನಾಹಂ ರಾಮ ಇವ ಪ್ರೇಷ್ಠಾಂ ಗೃಹ್ಣಾಮ್ಯನ್ಯಗೃಹೋಷಿತಾಂ ॥ ೭೧ ॥

ಸ ರಾಜಾ ಯತ್ಕರೋತ್ಯೇವ ತತ್ಸರ್ವಂ ನೀತಿಮದ್ಭವೇತ್ ।
ಅಹಂ ಗೃಹ್ಣಾಮಿ ನೋ ಭಾರ್ಯಾಂ ಪರವೇಶ್ಮನಿ ಸಂಸ್ಥಿತಾಂ ॥ ೭೨ ॥

ಪುನಃ ಪುನರುವಾಚೇದಂ ರಾಮೋ ನಾಹಂ ಮಹೀಶ್ವರಃ ।
ಯಃ ಪರಸ್ಯ ಗೃಹೇ ಸಂಸ್ಥಾಂ ಜಾನಕೀಂ ವೈ ರರಕ್ಷ ಸಃ ॥ ೭೩ ॥

ಇತಿ ವಾಕ್ಯಂ ಸಮಾಶ್ರುತ್ಯ ಚಾರಃ ಕೋಪಪರಿಪ್ಲುತಃ ।
ಖಡ್ಗಂ ಗೃಹೀತ್ವಾ ಸ್ವಕರೇ ತಂ ಹಂತುಂ ವಿದಧೇ ಮನಃ ॥ ೭೪ ॥

ಸ ರಾಮೋಕ್ತಂ ಚ ಸಸ್ಮಾರ ನ ವಧ್ಯಃ ಕೋಽಪಿ ಮೇ ಜನಃ ।
ಇತಿ ಜ್ಞಾತ್ವಾ ಸ್ವಕೋಪಂ ತು ಸಂಜಹಾರ ಮಹಾಮನಾಃ ॥ ೭೫ ॥

ತದಾ ಶ್ರುತ್ವಾ ಸುದುಃಖಾರ್ತಃ ಪಂಚ ಚಾರಾ ಯತಃ ಸ್ಥಿತಾಃ ।
ತತೋ ಗತಃ ಪ್ರಕುಪಿತೋ ನಿಶ್ವಸನ್ಮುಹುರುಚ್ಛ್ವಸನ್ ॥ ೭೬ ॥

---

೭೧. ರಜಕನು ತಾಯಿಯನ್ನು ಕುರಿತು ಕೋಪದಿಂದ ನಾನು ರಾಮನಂತೆ ಮತ್ತೊಬ್ಬನ ಮನೆಯಲ್ಲಿ ವಾಸಮಾಡಿದ ಪ್ರೇಯಸಿಯನ್ನು ಸೇರಿಸಿಕೊಳ್ಳುವುದಿಲ್ಲ ಎಂದು ಹೇಳಿದನು.

೭೨. ಮತ್ತು ಅವನು, ದೊರೆಯು ಏನುಮಾಡಿದರೆ ಅದೇ ನ್ಯಾಯವಾಗುತ್ತದೆ. ನಾನು ಬೇರೇ ಕಂಡವರ ಮನೆಯಲ್ಲಿದ್ದ ಹೆಂಡತಿಯನ್ನು ಸ್ವೀಕರಿಸುವುದಿಲ್ಲ.

೭೩. ಪರರ ಮನೆಯಲ್ಲಿರುವ ಜಾನಕಿಯನ್ನು ಕರೆದುಕೊಂಡು ಕಾಪಾಡುವುದಕ್ಕೆ ನಾನು ರಾಮರಾಜನಲ್ಲ ಎಂದು ಪದೇ ಪದೇ ಹೇಳುತ್ತಿದ್ದನು.

೭೪. ಈ ಮಾತನ್ನು ಕೇಳಿ ಚಾರನು ಕೋಪಗೊಂಡು ಕೈಗೆ ಕತ್ತಿಯನ್ನು ತೆಗೆದುಕೊಂಡು ಅವನನ್ನು ಕೊಲ್ಲಲು ಇಚ್ಛಿಸಿದನು.

೭೫. ಆಗ ಅವನು, ರಾಮನು ಹೇಳಿದ್ದ, ನನ್ನ ಜನರಾರನ್ನೂ ಕೊಲ್ಲಕೂಡ ದೆಂಬ ಮಾತನ್ನು ಜ್ಞಾಪಿಸಿಕೊಂಡನು. ಮತ್ತು ಕೋಪವನ್ನು ತಡೆದುಕೊಂಡನು

೭೬. ಅದನ್ನು ಕೇಳಿದ ಅವನು ಮಿಕ್ಕ ಐದು ಜನ ಚಾರರಿದ್ದಲ್ಲಿಗೆ ಹೋದನು. ಅಲ್ಲಿಗೆ ಹೋಗಿ ಪದೇ ಪದೇ ನಿಟ್ಟುಸಿರುಬಿಡುತ್ತಾ ಕೋಪಿಸಿಕೊಂಡನು.

ತೇ ವೈ ಪರಸ್ಪರಂ ತತ್ರ ಮಿಳಿತಾಃ ಸಮುಮುಬ್ರುರ್ವಃ ।
ಸ್ವಶ್ರುತಂ ರಾಮುಚರಿತಂ ಸರ್ವಲೋಕೈಕಪೂಜಿತಂ ॥ ೭೭ ॥

ತೇ ತದ್ಭಾಷಿತಮಾಕರ್ಣ್ಯ ಪರಸ್ಪರಮಮಂತ್ರಯರ್ನ್ ।
ನ ವಾಚ್ಯಂ ರಘುನಾಥಾಯ ವಚೋ ದುಷ್ಟಜನೋದಿತಂ ॥ ೭೮ ॥

ಇತಿ ಸಂಮಂತ್ರ್ಯ ತೇ ಗೇಹಂ ಗತ್ವಾ ಸುಷುಪುರುತ್ಸುಕಾಃ ।
ಪ್ರಾತಃ ರಾಜ್ಞೇ ಪ್ರಶಂಸಾಮ ಇತಿಬುದ್ಧ್ಯಾ ವ್ಯವಸ್ಥಿತಾಃ ॥ ೭೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷ
ವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ ಚಾರ
ನಿರೀಕ್ಷಣಂನಾಮ ಪಂಚಪಂಚಾಶತ್ತಮೋಽಧ್ಯಾಯಃ

---

೭೭. ಅವರೆಲ್ಲರೂ ಅಲ್ಲಿ ಸೇರಿಕೊಂಡು ಸರ್ವಲೋಕೈಕಪೂಜಿತವಾದ, ತಾವು ಕೇಳಿದ ರಾಮಚರಿತೆಯನ್ನು ಹೇಳಿಕೊಳ್ಳುತ್ತಿದ್ದರು.

೭೮. ಅವರು ಆ ಮಾತನ್ನು ಕೇಳಿ ರಾಮನಿಗೆ ಈ ದುಷ್ಟನ ಮಾತನ್ನು ಹೇಳಬಾರದೆಂದು ಯೋಚಿಸಿಕೊಂಡರು.

೭೯. ಎಲ್ಲವನ್ನೂ ಬೆಳಗ್ಗೆ ಹೋಗಿ ರಾಮನಿಗೆ ಹೇಳೋಣವೆಂದು ಮಾತನಾಡಿಕೊಂಡು ಎಲ್ಲರೂ ಮಲಗುವ ಉದ್ದೇಶದಿಂದ ಮನೆಗೆ ಹೋದರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಚಾರನಿರೀಕ್ಷಣವೆಂಬ
ಐವತ್ತೈದನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಟ್ಪಂಚಾಶತ್ತಮೋಽಧ್ಯಾಯಃ

॥ ಶೇಷ ಉವಾಚ ॥

ಪ್ರಾತರ್ನಿತ್ಯಂ ವಿಧಾಯಾಸೌ ಬ್ರಾಹ್ಮಣಾನ್ವೇದಪಿತ್ತರ್ಮಾ ।
ಹಿರಣ್ಯದಾನೈಃ ಸಂತರ್ಪ್ಯ ವಿಧಿವತ್ಸಂಸದಂ ಯಯೌ ॥ ೧ ॥

ಲೋಕಾಸ್ಸರ್ವೇ ನಮಸ್ಕರ್ತುಂ ರಘುನಾಥಂ ಮಹೀಪತಿಂ ।
ಪುತ್ರವತ್ಸ್ವಪ್ರಜಾಸ್ಸರ್ವಾಃ ಪಾಲಯಂತಂ ಯಯುಸ್ಸಭಾಂ ॥ ೨ ॥

ಲಕ್ಷ್ಮಣೇನಾತಪತ್ರಂ ತು ಧೃತಂ ಮೂರ್ಧನಿ ಭೂಪತೇಃ ।
ತದಾ ಭರತಶತ್ರುಘ್ನೌ ಚಾಮರದ್ವಂದ್ವಧಾರಿಣೌ ॥ ೩ ॥

ವಸಿಷ್ಠಪ್ರಮುಖಾಸ್ತತ್ರ ಮುನಯಃ ಪರ್ಯುಪಾಸತೇ ।
ಸುಮಂತ್ರಪ್ರಮುಖಾಸ್ತತ್ರ ಮನ್ತ್ರಿಣೋ ನ್ಯಾಯಕರ್ತೃಕಾಃ ॥ ೪ ॥

---

## ಐವತ್ತಾರನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಶ್ರೀರಾಮನು ಪ್ರಾತಃಕಾಲದ ಕೆಲಸಗಳನ್ನು ಮಾಡಿಕೊಂಡು ವೇದವ್ಯೋದಿರುವ ಬ್ರಾಹ್ಮಣರಿಗೆ ದುಡ್ಡನ್ನು ದಾನಮಾಡಿ ಸಂತೋಷ ಪಡಿಸಿ ಅನಂತರ ಸಭೆಗೆ ಹೋದನು.

೨. ತಂದೆಯಂತೆ ಕಾಪಾಡಿಸಿಕೊಳ್ಳುತ್ತಿರುವ ಪ್ರಜೆಗಳು ಆ ರಾಜನಾದ ರಘುನಾಥನನ್ನು ನಮಸ್ಕರಿಸಲು ಸಭೆಗೆ ಹೋದರು.

೩–೪. ಲಕ್ಷ್ಮಣನು ಶ್ವೇತಚ್ಛತ್ರವನ್ನು ಹಿಡಿದಿದ್ದಾನೆ. ಭರತಶತ್ರುಘ್ನರು ಚಾಮರವನ್ನು ಬೀಸುತ್ತಿದ್ದಾರೆ. ವಸಿಷ್ಠನೇ ಮುಂತಾದ ಋಷಿಗಳು ರಾಮನನ್ನು ಓಲೈಸುತ್ತಿದ್ದಾರೆ. ರಾಮನ ಸಭೆಯಲ್ಲಿ ಸುಮಂತ್ರನೇ ಮುಂತಾದ ಮಂತ್ರಿಗಳು ನ್ಯಾಯವನ್ನು ಇತ್ಯರ್ಥಪಡಿಸುತ್ತಿದ್ದಾರೆ.

ಏವಂ ಪ್ರವೃತ್ತೇ ಸಮಯೇ ಷಟ್ಚಾರಾಸ್ತೇ ಸ್ವಲಂಕೃತಾಃ ।
ಸಮಾಜಗ್ಮುರ್ನರಪತಿಂ ನಮಸ್ಕರ್ತುಂ ಸಭಾಸ್ಥಿತಂ ॥ ೫ ॥

ತಾನ್ಸ್ವಕೃತ್ಯಕಾಮಾನ್ಸಂವೀಕ್ಷ್ಯ ಚಾರಾನ್ನೃಪತಿಸತ್ತಮಃ ।
ಸಭಾಯಾಮಂತರಾವೇಶ್ಮ ರಹಃ ಪ್ರಾವಿಶದುತ್ಸುಕಃ ॥ ೬ ॥

ಏಕಾಂತೇ ತಾಂಶ್ಚರಾನ್ಸರ್ವಾನ್ಸಪ್ರಚ್ಛ ಸುಮತಿರ್ನೃಪಃ ।
ಕಥಯಂತು ಚರಾ ಮಹ್ಯಂ ಯಥಾತಥ್ಯಮರಿಂದಮಾಃ ॥ ೭ ॥

ಲೋಕಾ ಬ್ರುವಂತಿ ಮಾಂ ಕೀದೃಗ್ಭಾರ್ಯಾಯಾ ಮಮ ಕೀದೃಶಂ ।
ಮಂತ್ರಿಣಾಂ ಕೀದೃಶಂ ಲೋಕಾ ವದಂತಿ ಚರಿತಂ ಕಥಂ ॥ ೮ ॥

ಇತಿ ವಾಕ್ಯಂ ಸಮಾಕರ್ಣ್ಯ ಚರಾ ರಾಮಮಥಾಬ್ರುವನ್ ।
ಮೇಘಗಂಭೀರಯಾ ವಾಣ್ಯಾ ಪೃಚ್ಛಂತಂ ರಘುನಾಯಕಂ ॥ ೯ ॥

॥ ಚಾರಾ ಊಚುಃ ॥

ನಾಥ ಕೀರ್ತಿರ್ಜನಾನ್ಸರ್ವಾನ್ ಪಾವಯತ್ಯಧುನಾ ಭುವಿ ॥
ಗೃಹೇ ಗೃಹೇ ಶ್ರುತಾಸ್ಮಾಭಿಃ ಪುರುಷೈಸ್ತ್ರಿಭಿರೀಡಿತಾ ॥ ೧೦ ॥

---

೫. ಈ ಸಮಯದಲ್ಲಿ ಈ ಆರುಜನ ಚಾರರು ಅಲಂಕಾರವನ್ನು ಹಾಕಿಕೊಂಡು ರಾಜನನ್ನು ನಮಸ್ಕರಿಸಲು ಸಭೆಗೆ ಬಂದರು.

೬. ರಾಜನು ಚಾರರು ಏನೋ ಹೇಳಲಿಚ್ಛೆಯುಳ್ಳವರೆಂಬುದನ್ನು ತಿಳಿದು ಸಭೆಯಲ್ಲಿರುವ ರಹಸ್ಯವಾದ ಮನೆಗೆ ಹೋದನು.

೭. ಏಕಾಂತದಲ್ಲಿ ಆ ಚಾರರನ್ನು ರಾಮನು ಕುರಿತು, ನೀವೆಲ್ಲರೂ ನಿಜವಾದ ಸಿಸ್ಥಿಯನ್ನು ಮರೆಮಾಚದೆ ಹೇಳಿರಿ ಎಂದನು.

೮. ಜನಗಳು ನನ್ನನ್ನು ಏನೆನ್ನುತ್ತಾರೆ? ನನ್ನ ಹೆಂಡತಿಯ ವಿಷಯದಲ್ಲಿ ಏನುಹೇಳುತ್ತಾರೆ? ಮಂತ್ರಿಗಳ ವಿಚಾರದಲ್ಲಿ ಏನಭಿಪ್ರಾಯಪಡುತ್ತಾರೆ? ನಮ್ಮಗಳ ಚರಿತ್ರೆ ಹೇಗಿದೆಯೆಂದೆನ್ನುತ್ತಾರೆ?

೯. ಮೇಘಗಂಭೀರಧ್ವನಿಯಿಂದ ಕೇಳುತ್ತಿರುವ ರಘುರಾಮನನ್ನು ಕುರಿತು ಚಾರರು ಇಂತೆಂದರು.

೧೦. ಸ್ವಾಮಿ, ನಿನ್ನ ಕೀರ್ತಿಯು ಭೂಮಿಯಲ್ಲಿ ಎಲ್ಲಾ ಜನರನ್ನೂ ಪಾವನ ಮಾಡುತ್ತದೆ. ಹೆಂಗಸರು, ಗಂಡಸರು ಹೇಳುತ್ತಿರುವುದನ್ನು ಮನೆಮನೆಯಲ್ಲೆಲ್ಲಾ ಕೇಳಿದೆವು.

ಪಿವಸ್ವತೋ ಮಹಾವಂಶಂ ಭವತಾ ಪರಮೇಷ್ಠಿನಾ ।
ಅಲಂಕರ್ತುಂ ಗತಂ ಭೂಮೌ ಕೀರ್ತಿವಿಸ್ತಾರಿತಾ ಭುವಿ ॥ ೧೧ ॥

ಅನೇಕೇ ಸಗರಾದ್ಯಾಶ್ಚ ಕೃತಾರ್ಥಾಃ ಪೂರ್ವಜಾ ನೃಪ ।
ಅಭವಂಸ್ತಾದೃಶೀ ಕೀರ್ತಿಸ್ತೇಷಾಂ ನಾಭೂದ್ಯಥೇದೃಶೀ ॥ ೧೨ ॥

ತ್ವಯಾ ನಾಥೇನ ಸಕಲಾಃ ಕೃತಾರ್ಥ್ಯಂತೇ ಪ್ರಜಾನ್ನೃಪ ।
ಯಾಸಾಂ ನಾಕಾಲಮರಣಂ ನ ಚ ರೋಗಾದ್ಯುಪದ್ರುತಿಃ ॥ ೧೩ ॥

ಯಾದೃಶಶ್ಚಂದ್ರಮಾ ಲೋಕೇ ಯಾದೃಶೀ ಜಾಹ್ನವೀ ಸರಿತ್ ।
ತಾದೃಶೀ ತವ ಸತ್ಕೀರ್ತಿಃ ಪ್ರಕಾಶಯತಿ ಭೂತಲಂ ॥ ೧೪ ॥

ಬ್ರಹ್ಮಾದಿಕಾ ಭವತ್ಕೀರ್ತಿಮಾಕರ್ಣ್ಯ ತ್ರಪಿತಾ ಭೃಶಂ ।
ನಾಥ ಸರ್ವತ್ರ ತೇ ಕೀರ್ತಿಃ ಪಾವಯತ್ಯಧುನಾ ಜನಾನ್ ॥ ೧೫ ॥

ವಯಂ ಧನ್ಯತಮಾಸ್ಸರ್ವೇ ಯೇ ಚಾರಾಸ್ತವ ಭೂಪತೇ ।
ಕ್ಷಣೇ ಕ್ಷಣೇ ತವ ಮುಖಂ ಲೋಕಯಾಮೋ ಮನೋಹರಂ ॥ ೧೬ ॥

---

೧೧. ಸೂರ್ಯವಂಶವನ್ನು ಸ್ವಾಮಿಯಾದ ನೀನು ಅಲಂಕರಿಸಿ ಭೂಮಿಯಲ್ಲಿ ಅವತರಿಸಿರುವುದರಿಂದ ನಿನ್ನ ಕೀರ್ತಿಯು ಎಲ್ಲೆಲ್ಲಿಯೂ ಹರಡಿರುವುದು.

೧೨. ನಿನ್ನ ಪೂರ್ವಿಕರಾದ ಸಗರನೇ ಮುಂತಾದವರು ಕೃತಾರ್ಥರಾದರು. ಯಾದೂ ಹೊಂದದಿರುವ ಕೀರ್ತಿಯನ್ನು ಹೊಂದಿದ್ದೀಯೆ. ಅವರೊಬ್ಬರಿಗೂ ಇಂತಹ ಕೀರ್ತಿಯು ಬಂದಿರಲಿಲ್ಲ.

೧೩. ನೀನು ಸ್ವಾಮಿಯಾಗಿರುವುದರಿಂದ ಜನರೆಲ್ಲರೂ ಕೃತಾರ್ಥರಾಗಿದ್ದಾರೆ. ಅಂತಹ ರಾಜ್ಯದಲ್ಲಿರುವ ಪ್ರಜೆಗಳಿಗೆ ಅಕಾಲಮರಣವಾಗಲಿ, ರೋಗಗಳ ತೊಂದರೆಯಾಗಲಿ ಇಲ್ಲ.

೧೪. ಚಂದ್ರ,ಗಂಗಾನದಿಗಳಂತೆ ನಿನ್ನ ಕೀರ್ತಿಯು ಭೂಮಿಯಲ್ಲಿ ಪ್ರಕಾಶಿಸುತ್ತಿದೆ.

೧೫. ಬ್ರಹ್ಮಾದಿಗಳೂ ಕೂಡ ನಿನ್ನ ಕೀರ್ತಿಯನ್ನು ಕೇಳಿ ಬಹಳವಾಗಿ ನಾಚಿಗೊಂಡಿದ್ದಾರೆ. ನಾಥನೇ, ಎಲ್ಲಾಕಡೆಯಲ್ಲೂ ನಿನ್ನ ಕೀರ್ತಿಯು ಜನಗಳನ್ನು ಪವಿತ್ರರನ್ನಾಗಿ ಮಾಡುತ್ತಿದೆ.

೧೬. ನಾವು ಕ್ಷಣಕ್ಷಣಕ್ಕೂ ನಿನ್ನ ಮುಖವನ್ನು ನೋಡುತ್ತಿರುವುದರಿಂದ ಲೋಕದಲ್ಲಿ ನಾವೇ ಧನ್ಯರು.

ಇತ್ಯಾದಿ ವಾಕ್ಯಂ ಚಾರಾಣಾಂ ಪಂಚಾನಾಂ ವೀಕ್ಷ್ಯ ರಾಘವಃ ।
ಪಪ್ರಚ್ಛ ಪಪ್ರಚ್ಛ ಚಾರಂ ತಂ ನಿರೀಕ್ಷಣಮುಖಾಂಕಿತಂ ॥ ೧೭ ॥

॥ ರಾಮ ಉವಾಚ ॥

ಸತ್ಯಂ ವದ ಮಹಾಬುದ್ಧೇ ಯಚ್ಛ್ರುತಂ ಲೋಕಸಂಕರೇ ।
ತಾದೃಶಂ ಶಂಸ ಮಹ್ಯಂ ತ್ವಮನ್ಯಥಾ ಪಾತಕಾದಿಕೃತ್ ॥ ೧೮ ॥

ಪುನಃ ಪುನಶ್ಚರಂ ರಾಮಃ ಪಪ್ರಚ್ಛ ಶ್ರುತಿವಿಶ್ರುತಂ ।
ತಥಾಪಿ ನ ಬ್ರವಿತ್ಯೇವ ರಾಮಂ ಲೋಕೈಕಭಾಷಿತಂ ॥ ೧೯ ॥

ತದಾ ರಾಮಃ ಪ್ರತ್ಯವೋಚಚ್ಚರಂ ಮುಖವಿಲಕ್ಷಿತಂ ।
ಶಪಾಮಿ ತ್ವಾಂ ತು ಸತ್ಯೇನ ಶಂಸ ಸರ್ವಂ ಯಥಾತಥಂ ॥ ೨೦ ॥

ತದಾ ರಾಮಂ ಪ್ರತ್ಯುವಾಚ ಚರೋ ವಾಕ್ಯಂ ಶನೈಃಶನೈಃ ।
ಅಕಥ್ಯಮಪಿ ತೇ ವಾಚ್ಯಂ ವಾಕ್ಯಂ ಕಾರುಜನೋದಿತಂ ॥ ೨೧ ॥

॥ ಚರ ಉವಾಚ ॥

ಸ್ವಾಮಿನ್ಸರ್ವತ್ರ ತೇ ಕೀರ್ತಿರ್ದಶಾನನವಧಾದಿಕಾ ।
ಅನ್ಯತ್ರ ರಾಕ್ಷಸಗೃಹೇ ಸ್ಥಿತಾಯಾಸ್ತೇ ಸ್ತ್ರಿಯಾ ಅಹೋ । ॥ ೨೨ ॥

---

೧೭. ಈರೀತಿ ಐದುಜನ ಚಾರರ ಮಾತನ್ನು ಕೇಳಿ ರಾಮನು ವಿಲಕ್ಷಣ ಮುಖದಿಂದ ಕೂಡಿರುವ ಆರನೆಯ ಚಾರನನ್ನು ಕುರಿತು ಕೇಳಿದನು.

೧೮. ರಾಮನು ಹೇಳಿದನು:—ಲೋಕದ ಜನಗಳಲ್ಲಿ ನೀನು ಕೇಳಿರುವು ದನ್ನು ಸರಿಯಾಗಿ ಹೇಳು. ಮರೆಮಾಚಿದರೆ ನಿನಗೆ ಪಾತಕಬರುತ್ತದೆ.

೧೯. ರಾಮನು ಪದೇಪದೇ ಮತ್ತೆಮತ್ತೆ ತನ್ನ ವಿಷಯವನ್ನು ಕೇಳಿದನು. ಆದರೂ ಲೋಕಸಂಭಾವಿತನಾದ ರಾಮನಿಗೆ ಈ ಚಾರನು ಹೇಳಲ್ಲೊಲ್ಲನು.

೨೦. ಆಗ ರಾಮನು ನಿನ್ನಮೇಲೆ ಸತ್ಯದ ಆಣೆಯನ್ನು ಇಟ್ಟಿದ್ದೇನೆ. ನಡೆದು ದನ್ನು ಸರಿಯಾಗಿ ಹೇಳು ಎಂದನು.

೨೧. ಆಗ ಚಾರನು ಮೆಲ್ಲಮೆಲ್ಲಗೆ ರಾಮನನ್ನು ಕುರಿತು ಹೇಳಿದನು. ಹೇಳ ಬಾರದಾಗಿದ್ದರೂ ಅಗಸನು ಹೇಳಿದ ಮಾತನ್ನು ಹೇಳಬೇಕಾಗಿದೆ.

೨೨. ಚಾರನು ಹೇಳಿದನು :—ಸ್ವಾಮಿ, ತಮ್ಮ ಹೆಂಡತಿಯು ರಾಕ್ಷಸನ ಮನೆ ಯಲ್ಲಿದ್ದುದನ್ನು ಬಿಟ್ಟು ಮಿಕ್ಕ ರಾವಣಾದಿಗಳನ್ನು ಕೊಂದ ಕೀರ್ತಿಯು ಎಲ್ಲಾಕಡೆ ಯಲ್ಲೂ ಹರಡಿದೆ.

ಕಾರುರೇಕಸ್ತು ರಜಕೋ ನಿಶೀಥೇ ಮಹಿಳಾಂ ಸ್ವಕಾಂ ।
ಅನ್ಯಗೇಹೋಷಿತಾಂ ದುಷ್ಟೋ ಧಿಕ್ಕುರ್ವನ್ಸಮತಾಡಯತ್ ॥ ೨೩ ॥

ತನ್ಮಾತಾ ಪ್ರತ್ಯುವಾಚೇಮಾಂ ಕಥಂ ತಾಡಯಸೇನಘಾಂ ।
ಗೃಹಾಣ ಮಾ ಕೃಥಾ ನಿಂದಾಂ ಸ್ತ್ರಿಯಂ ಮದ್ವಾಕ್ಯಮಾಚರ ॥ ೨೪ ॥

ತದಾಪ್ರೋಚತ್ಸ ರಜಕೋ ನಾಹಂ ರಾಮೋ ಮಹೀಪತಿಃ ।
ಯದ್ರಾಕ್ಷಸಗೃಹೋಷಿತಾಂ ಸೀತಾಮಂಗೀಚಕಾರ ಸಃ ॥ ೨೫ ॥

ಸರ್ವಂ ರಾಜ್ಞಃ ಕೃತಂ ಕರ್ಮ ನೀತಿಮದ್ಭವತಿ ಪ್ರಭೋಃ ।
ಅನ್ಯೇಷಾಂ ಪುಣ್ಯಕರ್ತೄಣಾಮಪಿ ಕೃತ್ಯಮನೀತಿಮತ್ ॥ ೨೬ ॥

ಪುನಃ ಪುನರುವಾಚಾಸೌ ನಾಹಂ ರಾಮೋ ಮಹೀಪತಿಃ ।
ಚಕ್ರುಧೇ ಸಮಯೇ ರಾಜನ್ಮಯಾ ವಾಕ್ಯಂ ತವ ಸ್ಮೃತಂ ॥ ೨೭ ॥

ತದಾನೀಂ ಶಿರ ಆಚ್ಛಿದ್ಯ ಪಾತಯಾಮಿ ಮಹೀತಳೇ ।
ಪುನರ್ವಿಚಾರಯಾಮಾಸ ರಾಮಃ ಕ್ವ ರಜಕಃ ಕ್ವ ನು ॥ ೨೮ ॥

---

೨೩. ಇಸ್ತ್ರಿಮಾಡುವ ಅಗಸನೊಬ್ಬನು ರಾತ್ರಿಯಲ್ಲಿ ಕಂಡವರ ಮನೆಯಲ್ಲಿದ್ದ ತನ್ನ ಹೆಂಡತಿಯನ್ನು ಬೈಯ್ಯುತ್ತಾ ಹೊಡೆಯುತ್ತಿದ್ದನು.

೨೪. ಅವನ ತಾಯಿಯು ಆಕೆಯನ್ನು ಏಕೆ ಹೊಡೆಯುತ್ತೀಯೆ? ಕರೆದುಕೋ. ಆಕೆಯನ್ನು ಬಯ್ಯಬೇಡ, ನನ್ನ ಮಾತನ್ನು ಕೇಳು ಎಂದಳು.

೨೫. ಆಗ ಆ ಅಗಸನು ರಾಕ್ಷಸರ ಮನೆಯಲ್ಲಿದ್ದ ಸೀತೆಯನ್ನು ಕರೆದು ಕೊಂಡಂತೆ ಕರೆದುಕೊಳ್ಳುವುದಕ್ಕೆ ನಾನು ರಾಜನಾದ ರಾಮನಲ್ಲ ಎಂದು ಉತ್ತರ ಕೊಟ್ಟನು.

೨೬. ರಾಜನು ಏನುಮಾಡಿದರೂ ಅದು ನೀತಿಯಾಗುತ್ತದೆ. ಮಿಕ್ಕವರು ಒಳ್ಳೆಯ ಕೆಲಸವನ್ನು ಮಾಡಿದರೂ ಅದು ನೀತಿಯಾಗಿರುವುದಿಲ್ಲ.

೨೭. ಮತ್ತೆಮತ್ತೆ ನಾನು ರಾಜನಾದ ರಾಮನಲ್ಲ ಎಂದು ಹೇಳುತ್ತಲೇ ಇದ್ದನು. ಆಗ ನನಗೆ ಬಹು ಕೋಪಬಂದಿತು. ಆದರೆ ತಾವು ಹೇಳಿದ್ದ ಮಾತು ನೆನಪಿಗೆ ಬಂದಿತು.

೨೮. ಮತ್ತೆ ಅವನ ತಲೆಯನ್ನು ಕಡಿದು ಬೀಳಿಸಬೇಕೆಂದೆನ್ನಿಸಿತು. ಪುನಃ ಯೋಚಿಸಿ, ರಾಮನೆಲ್ಲಿ! ಈ ಅಗಸನೆಲ್ಲಿ! ಎಂದುಕೊಂಡೆ.

ಅಯಂ ದುಷ್ಟೋ ನೃತಂ ವಕ್ತಿ ನ ಹೀದಂ ತಥ್ಯಮುಚ್ಯತೇ ।
ಆಜ್ಞಾಪಯಸಿ ಚೇದ್ರಾಮ ಸಾಂಪ್ರತಂ ಪಾತಯಾಮಿ ತಂ　　॥ ೨೯ ॥

ಅವಾಚ್ಯಮಪಿ ತೇ ಪ್ರೋಕ್ತಂ ತ್ವದಾಗ್ರಹತ ಉನ್ನಯಂ ।
ರಾಜಾ ಪ್ರಮಾಣಮತ್ರೇದಂ ವಿಚಾರಯತು ಸಂಗತಂ　　॥ ೩೦ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಮಹಾವಜ್ರನಿಭಾಕ್ಷರಂ ।
ನಿಶ್ವಸನ್ಮುಹುರುಚ್ಚೈಃ ಸಮಾಚರನ್ಮೂರ್ಛಿತೋಽಪತತ್　　॥ ೩೧ ॥

ತಂ ಮೂರ್ಛಿತಂ ನೃಪಂ ದೃಷ್ಟ್ವಾ ಚಾರಾ ದುಃಖಸಮನ್ವಿತಾಃ ।
ವೀಜಯಾಮಾಸುರ್ವಾಸೋಗ್ರೈರ್ದುಃಖಾಪನಯಹೇತವೇ　　॥ ೩೨ ॥

ಸ ಲಬ್ಧಸಂಜ್ಞೋ ನೃಪತಿಃ ಮುಹೂರ್ತೇನ ಜಗಾದ ತಾನ್ ।
ಗಚ್ಛಂತು ಭರತಂ ಗೇಹೇ ಪ್ರೇಷಯಂತು ಚ ಮಾಂ ಪ್ರತಿ　　॥ ೩೩ ॥

ತೇ ದುಃಖಿತಾಶ್ಚರಾಸ್ತೂರ್ಣಂ ಭರತಸ್ಯ ಗೃಹಂ ಗತಾಃ ।
ಕಥಯಾಮಾಸುಃ ರಾಮಸ್ಯ ಸಂದೇಶಂ ನೃಪಹಾರಕಾಃ　　॥ ೩೪ ॥

---

೨೯. ಈ ದುಷ್ಟನು ಸುಳ್ಳನ್ನು ಹೇಳುತ್ತಾನೆ. ಇದು ಸರಿಯಾದ ಮಾತು. ನೀನು ಅಪ್ಪಣೆಕೊಟ್ಟರೆ ಈಗಲೂ ಅವನನ್ನು ಕೊಲ್ಲುತ್ತೇನೆ.

೩೦. ನಿನ್ನ ವಿಷಯದಲ್ಲಿ ಕೆಟ್ಟದ್ದನ್ನು ಹೇಳಿದರು. ಆಡಬಾರದುದನ್ನು ಆಡಿದರು. ಅದನ್ನು ನಿನ್ನ ಬಲಾತ್ಕಾರದಿಂದ ಹೇಳಿದೆನು. ಈ ವಿಷಯದಲ್ಲಿ ಪ್ರಭು ಚಿತ್ತ. ಸಂಗತವನ್ನು ವಿಚಾರಮಾಡಬಹುದು.

೩೧. ಶೇಷನು ಹೇಳಿದನು :—ವಜ್ರಕ್ಕೆ ಸಮಾನವಾದ ಈ ಕಠಿಣ ಮಾತನ್ನು ಕೇಳಿ ನಿಟ್ಟುಸಿರುಬಿಡುತ್ತಾ ಮೂರ್ಛಿತನಾಗಿ ನೆಲದಮೇಲೆ ಬಿದ್ದನು.

೩೨. ಅವನು ಮೂರ್ಛೆಬಿದ್ದುದನ್ನು ನೋಡಿ ಚಾರರು ದುಃಖಪಟ್ಟು ಒಳ್ಳೆಯ ಸೆರಗಿನಿಂದ ಬೀಸಿದರು.

೩೩. ಕ್ಷಣಕಾಲದಮೇಲೆ ಜ್ಞಾನವನ್ನು ಹೊಂದಿ ರಾಮನು ನೀವು ಹೋಗಿ ಭರತನನ್ನು ಬರಹೇಳಿ ಎಂದನು.

೩೪. ಆ ಚರರು ದುಃಖಗೊಂಡು ಭರತನಿಗೆ ರಾಮನ ಅಪ್ಪಣೆಯನ್ನು ತಿಳಿಸಿದರು.

ಭರತೋ ರಾಮಸಂದೇಶಂ ಶ್ರುತ್ವಾ ಧೀಮಾನ್ಮಯೌ ನರಃ ।
ರಾಮಂ ಪ್ರತಿ ರಹಸ್ಸಂಸ್ಥಂ ಶ್ರುತ್ವಾ ತಂ ತ್ವರಯಾ ಯುತಃ ॥ ೩೫ ॥

ಆಗತ್ಯ ತಂ ಪ್ರತೀಹಾರಂ ಪ್ರತ್ಯುವಾಚ ಮಹಾಮನಾಃ ।
ಕುತ್ರಾಸ್ತೇ ರಾಮಭದ್ರೋಽಸೌ ಮಮ ಭ್ರಾತಾ ಕೃಪಾನಿಧಿಃ ॥ ೩೬ ॥

ತನ್ನಿರ್ದಿಷ್ಟಂ ಗೃಹಂ ವೀರೋ ಯಯೌ ರತ್ನಮನೋಹರಂ ।
ರಾಮಂ ವಿಲೋಕ್ಯ ವಿಕ್ಲಾಂತಂ ಭಯಮಾಪ ಸ ಮಾನಸೇ ॥ ೩೭ ॥

ಕಿಂ ವಾಸೌ ಕುಪಿತೋ ರಾಮಃ ಕಿಂ ವಾ ದುಃಖಮಿದಂ ವಿಭೋಃ ।
ತದಾ ಪ್ರೋವಾಚ ನೃಪತಿಂ ನಿಶ್ವಸನ್ತಂ ಮುಹುರ್ಮುಹುಃ ॥ ೩೮ ॥

ಸ್ವಾಮಿನ್ಸುಖಸಮಾರಾಧ್ಯಂ ವಕ್ತ್ರಂ ತೇ ಕಥಮಾನತಂ ।
ಅಶ್ರುಭಿರ್ಲಕ್ಷ್ಯತೇ ರಾಹುಗ್ರಸ್ತದೇಹಃ ಶಶೀವ ತೇ ॥ ೩೯ ॥

ಸರ್ವಂ ಮೇ ಕಾರಣಂ ತಥ್ಯಂ ಬ್ರೂಹಿ ಮಾಂ ಕಿಂ ಕರೋಮಿ ತೇ ।
ತ್ಯಜ ದುಃಖಂ ಮಹಾರಾಜ ಕಥಂ ದುಃಖಸ್ಯ ಭಾಜನಂ ॥ ೪೦ ॥

---

೩೫. ಭರತನು ರಾಮನ ಮಾತನ್ನು ಕೇಳಿ ಆ ಸರಸ್ಸಿನಿಂದ ಹೊರಟು, ರಾಮನು ರಹಃಸ್ಥಾನದಲ್ಲಿರುವುದನ್ನು ತಿಳಿದುಬಂದು ಬಾಗಿಲುಕಾಯುವವನಿಗೆ ಹೇಳಿದನು.

೩೬. ಕೃಪಾಳುವಾದ ನನ್ನ ಸೋದರ ರಾಮಭದ್ರನು ಎಲ್ಲಿದ್ದಾನೆಂದನು.

೩೭. ಅವನು ತೋರಿಸಿದ ಮನೆಯನ್ನು ಹೊಂದಿ ಖೇದಗೊಂಡಿರುವರಾಮನನ್ನು ನೋಡಿ ಮನಸ್ಸಿನಲ್ಲಿ ಭಯಪಟ್ಟನು.

೩೮. ಆಗ ಭರತನು ಈತನೇನು ಕೋಪಗೊಂಡಿದ್ದಾನೆಯೇ ? ಅಲ್ಲವೇ ದುಃಖಗೊಂಡಿರುವನೇ ? ಎಂದೆನ್ನುತ್ತ ನಿಟ್ಟುಸಿರುಬಿಡುತ್ತಿರುವ ಅತನನ್ನು ಕುರಿತು ಇಂತೆಂದನು.

೩೯. ಸ್ವಾಮಿ, ನಿಮ್ಮ ಮುಖವು ಸುಖವಾಗಿ ನೋಡುವುದಕ್ಕೆ ಅರ್ಹವಾದುದು. ಏತಕ್ಕೆ ಬಗ್ಗಿದೆ ? ಕಣ್ಣೀರಿನಿಂದ ಕೂಡಿ ರಾಹುವಿನಿಂದ ಹಿಡಿಯಲ್ಪಟ್ಟ ಚಂದ್ರನಂತಿರುವುದಲ್ಲ.

೪೦. ನಿಜವಾದ ಕಾರಣವನ್ನು ಹೇಳು. ಏನುಮಾಡಲಿ ಹೇಳು ? ದುಃಖವನ್ನು ಬಿಡು. ದುಃಖಕ್ಕೆ ಭಾಗಿಯಾಗಬೇಡ.

ಏವಂ ಭ್ರಾತ್ರಾ ಪ್ರೋಚ್ಯಮಾನೋ ಗದ್ಗದಸ್ವರಯಾ ಗಿರಾ ।
ಪ್ರೋವಾಚ ಭ್ರಾತರಂ ವೀರೋ ರಾಮಚಂದ್ರಸ್ಸ ಧಾರ್ಮಿಕಃ ॥ ೪೧ ॥

ಶೃಣು ಭ್ರಾತರ್ವಚೋ ಮಹ್ಯಂ ಮಮ ದುಃಖಸ್ಯ ಕಾರಣಂ ।
ತನ್ಮಾರ್ಜನಂ ಕುರುಷ್ವಾದ್ಯ ಭ್ರಾತರ್ಭ್ರಾತರ್ಮಹಾಮತೇ ॥ ೪೨ ॥

ವಂಶೇ ವೈವಸ್ವತೇ ರಾಜಾ ನಕಶ್ಚಿದಯಶಃಕ್ಷತಃ ।
ಮತ್ಕೀರ್ತಿರದ್ಯ ಕಲುಷಾ ಗಂಗಾ ಯಮುನಯಾ ಗತಾ ॥ ೪೩ ॥

ಯೇಷಾಂ ಯಶೋ ನೃಣಾಂ ಭೂಮೌ ತೇಷಾಮೇವ ಸುಜೀವಿತಂ ।
ಅಪಕೀರ್ತಿಕ್ಷತಾನಾಂ ತು ಜೀವಿತಂ ಮೃತ್ಯುಕೈಸ್ಸಮಂ ॥ ೪೪ ॥

ಅದ್ಯ ಮೇ ಕಲುಷಾ ಕೀರ್ತಿಸ್ಸ್ವರ್ಧುನೀ ಲೋಕವಿಸ್ತೃತಾ ।
ತಚ್ಛೃಣುಷ್ವ ವಚೋ ಮೇಽದ್ಯ ರಜಕಸ್ಯ ಯಥೋದಿತಂ ॥ ೪೫ ॥

ಅಸ್ಮಿನ್ಪುರೇಽದ್ಯ ರಜಕ ಉಕ್ತವಾನ್ಜಾನಕೀಭವಂ ।
ಕಿಂ ಬಿದ್ಧಾಚ್ಯಂ ತತೋ ಭ್ರಾತಃ ಕಿಂಕರಿಷ್ಯಾಮಿ ಭೂತಲೇ ॥ ೪೬ ॥

---

೪೧. ಈರೀತಿ ಭರತನು ಕೇಳಲು ರಾಮಚಂದ್ರನು ಗದ್ಗದಸ್ವರದಿಂದ ಭರತನಿಗೆ ಹೇಳಿದನು.

೪೨. ಸಹೋದರನೇ, ನನ್ನ ದುಃಖಕ್ಕೆ ಕಾರಣವನ್ನು ಕೇಳು. ಮಹಾಮತಿಯೇ, ಅದರ ನಾಶಕ್ಕೆ ಪ್ರಯತ್ನಪಡು.

೪೩. ಸೂರ್ಯವಂಶದಲ್ಲಿ ಅಪಯಶಸ್ಸು ಯಾರಿಗೂ ಬಂದಿಲ್ಲ. ನನ್ನ ಕೀರ್ತಿಯು ಕಲುಷವಾಯಿತು. ಗಂಗೆಯು ಯಮುನೆಯೊಡನೆ ಕೂಡಿಕೊಂಡಿತು.

೪೪. ಯಾರ ಯಶಸ್ಸು ಭೂಮಿಯಲ್ಲಿದೆಯೋ ಅವರ ಜೀವಿತವು ಉತ್ತಮವಾದದ್ದು. ಅಪಕೀರ್ತಿ ಬಂದವರ ಜೀವಿತವು ಹೆಣಕ್ಕೆ ಸಮಾನವು.

೪೫. ಲೋಕದಲ್ಲೆಲ್ಲಾ ವ್ಯಾಪಿಸಿರುವ ನನ್ನ ಕೀರ್ತಿಯೆಂಬ ಗಂಗೆಯು ಕಲುಷವಾಗಿದೆ, ಹೇಳುತ್ತೇನೆ ಕೇಳು. ಒಬ್ಬ ಅಗಸನ ಮಾತು ಇಂತಿರುವುದು.

೪೬. ಈ ಊರಲ್ಲಿ ಒಬ್ಬ ಅಗಸನು ಜಾನಕಿಗೆ ಸಂಬಂಧಪಟ್ಟ ಒಂದು ಕೆಟ್ಟ ಮಾತನ್ನಾಡಿದನು. ನಾನೇನು ಮಾಡಲಿ ?

ಕಿಮಾತ್ಮಾನಂ ಜಹಾಮ್ಯದ್ಯ ಕಿಮೇತಾಂ ಜಾನಕೀಂ ಪ್ರಿಯಾಂ ।
ಉಭಯೋಃ ಕಿಂ ಮಯಾ ಕಾರ್ಯಂ ತತ್ತಥ್ಯಂ ಬ್ರೂಹಿ ಕಿಂ ಮಮ ॥ ೪೭ ॥

ಇತ್ಯುಕ್ತ್ವಾ ನಿರ್ಗಳದ್ಬಾಷ್ಪೋ ವೇಪಥುಕ್ಷುಭಿತಾಂಗಕಃ ।
ಪಪಾತ ಭೂಮೌ ವಿರಜೋ ಧಾರ್ಮಿಕಾಣಾಂ ಶಿರೋಮಣಿಃ ॥ ೪೮ ॥

ಭ್ರಾತರಂ ಪತಿತಂ ದೃಷ್ಟ್ವಾ ಭರತೋ ದುಃಖಸಂಯುತಃ ।
ಸಂವೀಜ್ಯ ಶನಕೈ ರಾಮಂ ಸಂಜ್ಞಾಮಾಪ್ತಂ ಚಕಾರ ಸಃ ॥ ೪೯ ॥

ಸಂಜ್ಞಾಂ ಪ್ರಾಪ್ತಂ ತು ಸಂವೀಕ್ಷ್ಯ ರಾಮಚಂದ್ರಂ ಸುದುಃಖಿತಂ ।
ಉವಾಚ ದುಃಖನಾಶಾಯ ಸ ವಾಕ್ಯಂ ಸುಮನೋಹರಂ ॥ ೫೦ ॥

॥ ಭರತ ಉವಾಚ ॥

ಕೋಽಯಂ ವೈ ರಜಕಃ ಕಿಂ ತು ವಾಚ್ಯಂ ವಾಕ್ಯಕಥಾಯುತಃ ।
ಜಿಹ್ವಾಚ್ಛೇದಂ ಕರಿಷ್ಯಾಮಿ ಜಾನಕೀವಾಚ್ಯಕಾರಿಣಃ ॥ ೫೧ ॥

---

೪೭. ಈಗ ನಾನು ಪ್ರಾಣಬಿಡಲೇ ? ಇಲ್ಲ ಜಾನಕಿಯನ್ನು ಬಿಡಲೇ ? ಎರಡ ರಿಂದಲೂ ನನಗೆ ಪ್ರಯೋಜನವಿಲ್ಲವಾಗಿದೆ. ನನಗೆ ಸರಿಯಾದುದನ್ನು ಹೇಳು.

೪೮. ಹೀಗೆಂದು ಹೇಳಿ ಕಣ್ಣೀರುಬಿಡುತ್ತಾ ನಡುಗುತ್ತಾ ಕಾಂತಿಹೀನನಾಗಿ ಈ ಧಾರ್ಮಿಕಶಿರೋಮಣಿಯು ನೆಲದಮೇಲೆ ಬಿದ್ದನು.

೪೯. ಅಣ್ಣನು ಬಿದ್ದುದನ್ನು ನೋಡಿ ಭರತನೂ ದುಃಖಗೊಂಡು ಮೆಲ್ಲಗೆ ಬೀಸುತ್ತಾ ಜ್ಞಾನಬರುವಂತೆ ಮಾಡಿದನು.

೫೦. ದುಃಖಗೊಂಡ ರಾಮನು ಜ್ಞಾನಹೊಂದಿದುನ್ನು ನೋಡಿ ದುಃಖ ಹೋಗಲು ಈರೀತಿ ಹೇಳಿದನು.

೫೧. ಭರತನು ಹೇಳಿದನು:—ಆ ಅಗಸನಾರು ? ಆ ಕೆಟ್ಟಮಾತಾವುದು ? ಜಾನಕಿಯನ್ನು ದೂಗಿದ ಆ ರಜಕನ ನಾಲಿಗೆಯನ್ನು ಕತ್ತರಿಸುತ್ತೇನೆ.

ತದಾ ರಾಮೋಽಬ್ರವೀದ್ವಾಕ್ಯಂ ರಜಕಸ್ಯ ಮುಖೋದ್ಗತಂ ।
ಶ್ರುತಂ ಚಾರೇಣ ತತ್ಸರ್ವಂ ಭರತಾಯ ಮಹಾತ್ಮನೇ　　॥ ೫೨ ॥

ತಚ್ಛ್ರುತ್ವಾ ಭರತಃ ಪ್ರಾಹ ಭ್ರಾತರಂ ದುಃಖಶೋಕಿನಂ ।
ಜಾನಕೀ ವಹ್ನಿಶುದ್ಧಾ ಭೂಲ್ಲಂಕಾಯಾಂ ವೀರಪೂಜಿತಾ　　॥ ೫೩ ॥

ಬ್ರಹ್ಮಾಬ್ರವೀದಿಯಂ ಶುದ್ಧಾ ಪಿತಾ ದಶರಥಸ್ತವ ।
ಕಥಂ ಸಾ ರಜಕೋಕ್ತಿತ್ವಾಬ್ಧಾತವ್ಯಾ ಲೋಕಪೂಜಿತಾ　　॥ ೫೪ ॥

ಬ್ರಹ್ಮಾದಿಸಂಸ್ತುತಾ ಕೀರ್ತಿಸ್ತವ ಲೋಕಾನ್ಪುನಾತಿ ಹಿ ।
ಸಾ ಕಥಂ ರಜಕೋಕ್ತ್ಯಾ ವೈ ಕಲುಷಾದ್ಯ ಭವಿಷ್ಯತಿ　　॥ ೫೫ ॥

ತಸ್ಮಾತ್ತ್ಯಜ್ಯ ಮಹಾದುಃಖಂ ಸೀತಾವಾಚ್ಯಸಮುದ್ಭವಂ ।
ಕುರು ರಾಜ್ಯಂ ತಯಾ ಸಾರ್ಧಮನ್ತರ್ವತ್ನ್ಯಾ ಸುಭಾಗ್ಯಯಾ　　॥ ೫೬ ॥

---

೫೨. ರಾಮನು ಚಾರನ ಮುಖದಿಂದ ಕೇಳಿದ್ದ, ರಜಕನು ಹೇಳಿದ್ದ ಮಾತೆಲ್ಲವನ್ನೂ ಹೇಳಿದನು.

೫೩. ಆದನ್ನು ಕೇಳಿ ಭರತನು ರಾಮನನ್ನು ಕುರಿತು ಜಾನಕಿಯು ಲಂಕೆಯಲ್ಲಿ ಅಗ್ನಿಶುದ್ಧಳಾಗಿ ವೀರರಿಂದ ಸರಿ ಎನ್ನಿಸಿಕೊಂಡು ಬಂದಿರುವಳಲ್ಲ ಎಂದನು.

೫೪. ಬ್ರಹ್ಮನೂ, ನಿನ್ನ ತಂದೆಯಾದ ದಶರಥನೂ ಕೂಡ ಈಕೆಯು ಶುದ್ಧಳೆಂದು ಹೇಳಿದ್ದಾರೆ. ಒಬ್ಬ ಅಗಸನ ಮಾತಿನಿಂದ ಹೇಗೆ ಅವಳನ್ನು ಬಿಡುತ್ತೀಯೆ ? ಅವಳು ಲೋಕಪೂಜಿತಳಲ್ಲವೇ ?

೫೫. ಬ್ರಹ್ಮನ ಪರ್ಯಂತವೂ ಹರಡಿರುವ ನಿನ್ನ ಕೀರ್ತಿಯು ಲೋಕಗಳನ್ನು ಪರಿಶುದ್ಧಮಾಡುತ್ತಿರುವಾಗ ಒಬ್ಬ ಅಗಸನ ಮಾತಿನಿಂದ ಆ ಕೀರ್ತಿಯು ಕೊಳಕಾಗುವುದಿಲ್ಲವು.

೫೬. ಆದ್ದರಿಂದ ಸೀತೆಯ ಸಂಬಂಧವಾದ ಕೆಟ್ಟಮಾತಿನಿಂದ ಬಂದಿರುವ ದುಃಖವನ್ನು ಬಿಟ್ಟುಬಿಡು. ಅವಳು ಭಾಗ್ಯವತಿ, ಯೋಗ್ಯಳು, ಗರ್ಭಿಣಿಯಾಗಿದ್ದಾಳೆ. ಅವಳೊಡನೆ ಸುಖದಿಂದ ರಾಜ್ಯಭಾರಮಾಡು.

ತ್ವಂ ಕಥಂ ಸ್ವಶರೀರಂ ತು ಹಾತುಮಿಚ್ಛಸಿ ಶೋಭನಂ ।
ವಯಂ ಹತಾಃ ಸ್ಮ ಸರ್ವೇಽದ್ಯ ತ್ವಾಂ ವಿನಾ ದುಃಖನಾಶಕಂ ॥ ೫೭ ॥

ಕ್ಷಣಂ ಸೀತಾ ನ ಜೀವೇತ ತ್ವಾಂ ವಿನಾ ಸುಮಹೋದಯಾ ।
ತಸ್ಮಾತ್ಪತಿವ್ರತಾ ಸಾಕಂ ಭುನಕ್ತು ವಿಪುಲಾಂ ಶ್ರಿಯಂ ॥ ೫೮ ॥

ಇತಿ ವಾಕ್ಯಂ ಸಮಾಕರ್ಣ್ಯ ಭರತಸ್ಯ ಸುಧಾರ್ಮಿಕಃ ।
ಪುನರೇವ ಜಗಾದೇಮಂ ವಾಕ್ಯಂ ವಾಕ್ಯವಿಶಾರದಃ ॥ ೫೯ ॥

ಯತ್ತ್ವಂ ಕಥಯಸಿ ಭ್ರಾತಸ್ತವ ಧರ್ಮಸಮಂ ಯುತಂ ।
ಪರಂ ಯದ್ವಚ್ಮ್ಯಹಂ ವಾಕ್ಯಂ ತತ್ಕುರುಷ್ವ ಮಮಾಜ್ಞಯಾ ॥ ೬೦ ॥

ಜಾನಾಮ್ಯೇನಾಂ ವಹ್ನಿಶುದ್ಧಾಂ ಪವಿತ್ರಾಂ ಲೋಕಪೂಜಿತಾಂ ।
ಲೋಕಾಪವಾದಾದ್ಭೀತೋಽಹಂ ತ್ಯಜಾಮಿ ಸ್ವಾಂ ತು ಜಾನಕೀಂ ॥ ೬೧ ॥

ತಸ್ಮಾತ್ಕರೇ ಶಿತಂ ಧೃತ್ವಾ ಕರವಾಳಂ ಸುದಾರುಣಂ ।
ಶಿರಶ್ಛಿಂಧ್ಯಥವಾ ಜಾಯಾಂ ಜಾನಕೀಂ ಮುಂಚ ವೈ ವನೇ ॥ ೬೨ ॥

---

೫೭. ನೀನು ಉತ್ತಮವಾದ ನಿನ್ನ ಶರೀರವನ್ನು ಬಿಡಲು ಇಚ್ಛಿಸುತ್ತಿರುತ್ತೀಯಲ್ಲ! ದುಃಖನಾಶಕವಾದ ನೀನಿಲ್ಲದಿದ್ದರೆ ನಾವೆಲ್ಲರೂ ಹಾಳಾಗಿಹೋಗುತ್ತೇವೆ.

೫೮. ಆ ಭಾಗ್ಯವತಿಯಾದ ಸೀತೆಯು ನೀನು ಇಲ್ಲದಮೇಲೆ ತಾನು ನಾಶವಾಗುವಳು. ಆದ್ದರಿಂದ ಆ ಪತಿವ್ರತೆಯೊಡನೆ ಬಹುವಾದ ಲಕ್ಷ್ಮಿಯನ್ನೂ ಸಂಪತ್ತನ್ನೂ ಅನುಭವಿಸು.

೫೯. ಧಾರ್ಮಿಕನಾದ ರಾಮನು ಭರತನ ಈ ಮಾತನ್ನು ಕೇಳಿ ಪುನಃ ಇಂತೆಂದನು.

೬೦. ಎಲೈ ಭ್ರಾತೃವೇ, ನೀನು ಹೇಳತಕ್ಕುದು ನಿನಗೆ ಧರ್ಮವಾಗಿರುತ್ತದೆ.

೬೧. ನಾನು ಜಾನಕಿಯನ್ನು ಪವಿತ್ರಳೆಂದೂ, ಲೋಕಪೂಜಿತಳೆಂದೂ ಬಲ್ಲೆ. ವಹ್ನಿಶುದ್ಧಳಾಗಿರುವುದನ್ನೂ ಬಲ್ಲೆ. ಲೋಕಾಪವಾದದಿಂದ ಹೆದರಿದ್ದೇನೆ. ಆದ್ದರಿಂದ ನಾನು ಜಾನಕಿಯನ್ನು ಬಿಟ್ಟುಬಿಡುತ್ತೇನೆ.

೬೨. ಆದ್ದರಿಂದ ಹರಿತವಾದ ಕತ್ತಿಯನ್ನು ಕೈಲಿ ತೆಗೆದುಕೊಂಡು ಜಾನಕಿಯ ತಲೆಯನ್ನು ಕಡಿ. ಇಲ್ಲದಿದ್ದರೆ ಆಕೆಯನ್ನು ಕಾಡಿನಲ್ಲಿ ಬಿಟ್ಟುಬಿಡು.

**ಇತಿ ವಾಕ್ಯಂ ಸಮಾಕರ್ಣ್ಯ ರಾಮಸ್ಯ ಭರತೋಽಪತತ್ ।**
**ಮೂರ್ಛಿತಸ್ಸನ್ಸ್ಥಿತೌ ದೇಹೇ ಕಂಪಯುಕ್ತಸ್ಸಬಾಷ್ಪಕಃ ॥ ೬೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ**
**ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ**
**ಷಟ್ಪಂಚಾಶತ್ತಮೋಽಧ್ಯಾಯಃ**

---

೬೩. ಈ ಮಾತನ್ನು ಕೇಳಿದೊಡನೆಯೇ ಭರತನು ಕಣ್ಣೀರುಸುರಿಸುತ್ತಾ ನಡುಗುತ್ತಾ ಮೂರ್ಛೆಬಂದು ನೆಲದಲ್ಲಿ ಧೊಪ್ಪನೆ ಬಿದ್ದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಭರತವಾಕ್ಯವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತಪಂಚಾಶತ್ತಮೋಽಧ್ಯಾಯಃ

॥ ವಾತ್ಸ್ಯಾಯನ ಉವಾಚ ॥

**ಜಗತ್ಪವಿತ್ರಸತ್ಕೀರ್ತಿರ್ಜಾನಕ್ಯಾ ವಾಚ್ಯವಾಚನಂ ।**
**ಕಥಂ ಸಮಾಕರೋತ್ಸ್ವಾಮಿಂಸ್ತನ್ಮೇ ಕಥಯ ಸುವ್ರತ ॥ ೧ ॥**

**ಯಥಾ ಮೇ ಮನಸಸ್ಸೌಖ್ಯಂ ಭವಿಷ್ಯತಿ ಸುಶೋಭನಂ ।**
**ತಥಾ ಕುರುಷ್ವ ಶೇಷಾದ್ಯ ತ್ವನ್ಮುಖಾನ್ನಿಸ್ಸೃತಾಮೃತಂ ॥ ೨ ॥**

**ಪಿಬತಸ್ತೃಪ್ತಿರೇವ ಸ್ಯಾದ್ಯಯಾ ಸಂಸೃತಿಕೃಂತನಂ ॥ ೩ ॥**

॥ ಶೇಷ ಉವಾಚ ॥

**ಮಿಥಿಲಾಯಾಂ ಮಹಾಪುರ್ಯಾಂ ಜನಕೋ ನಾಮ ಭೂಪತಿಃ ।**
**ತಸ್ಯಾಂ ಕರೋತಿ ಸದ್ರಾಜ್ಯಂ ಧರ್ಮೇಣಾರಾಧಯನ್ಪ್ರಜಾಃ ॥ ೪ ॥**

---

### ಐವತ್ತೇಳನೆಯ ಅಧ್ಯಾಯವು.

೧. ವಾತ್ಸ್ಯಾಯನನು ಹೇಳಿದನು:—ಜಗತ್ತನ್ನು ಪವಿತ್ರಮಾಡುವ ಸತ್ಕೀರ್ತಿಯುಳ್ಳ ಜಾನಕಿಗೆ ಕೆಟ್ಟ ಮಾತನ್ನು ಹೇಗೆ ಆಡಿದನು? ಸ್ವಾಮಿ, ಅದನ್ನು ದಯವಿಟ್ಟು ಹೇಳು.

೨-೩. ನನ್ನ ಮನಸ್ಸಿಗೆ ಹಿತವೂ ಸೌಖ್ಯವುಂಟಾಗುವಂತೆ ಮಾಡು. ನಿನ್ನ ಬಾಯಿಯಿಂದ ಹೊರಬೀಳುತ್ತಿರುವ ಅಮೃತವನ್ನು ಕುಡಿಯುತ್ತಿರುವ ನನಗೆ ತೃಪ್ತಿಯೇ ಉಂಟಾಗುವುದಿಲ್ಲ. ಮತ್ತು ಅದರಿಂದ ಜನನ ಮರಣಗಳು ತಪ್ಪುತ್ತವೆ.

೪. ಶೇಷನು ಹೇಳಿದನು:—ಮಿಥಿಲಾಪಟ್ಟಣದಲ್ಲಿ ಜನಕನೆಂಬ ರಾಜನು ಧರ್ಮದಿಂದ ಪ್ರಜೆಗಳನ್ನು ಕಾಪಾಡುತ್ತ ರಾಜ್ಯಭಾರಮಾಡುತ್ತಿದ್ದನು.

ತಸ್ಯ ಸಂಕರ್ಷತೋ ಭೂಮಿಂ ಸೀತಯಾ ದೀರ್ಘಮುಖ್ಯಯಾ ।
ಸೀರಧ್ವಜಸ್ಯ ನಿರಗಾತ್ಕುಮಾರೀ ರತಿಸುಂದರೀ ॥ ೫ ॥

ತದಾತ್ಯಂತಂ ಮುದಂ ಪ್ರಾಪ್ತಃ ಸೀರಕೇತುರ್ಮಹೀಪತಿಃ ।
ಸೀತಾನಾಮಾಕರೋತ್ತಸ್ಯಾ ಮೋಹಿಸ್ಯಾಃ ಜಗತಃ ಶ್ರಿಯಾಃ ॥ ೬ ॥

ಸೈಕದೋದ್ಯಾನವಿಪಿನೇ ಖೇಲಂತೀ ಸುಮನೋಹರಾ ।
ಅಪಶ್ಯತ್ಸ್ವಮನಃಕಾನ್ತಂ ಶುಕಶುಕ್ಯೋರ್ಯುಗಂ ವದತ್ ॥ ೭ ॥

ಅತ್ಯಂತಂ ಹರ್ಷಮಾಪನ್ನಮತ್ಯಂತಂ ಕಾಮಲೋಲುಪಂ ।
ಪರಸ್ಪರಂ ಭಾಷಮಾಣಂ ಸ್ನೇಹೇನ ಶುಭಯಾ ಗಿರಾ ॥ ೮ ॥

ರಮಮಾಣಂ ತದಾ ಯುಗ್ಮಂ ನಭಸಿ ಕ್ಷಿಪ್ರವೇಗತಃ ।
ಸಮುತ್ಪತನ್ನಗೋಪಸ್ಥೇ ಸ್ಥಿತಂ ಶಬ್ದಂ ಚಕಾರ ತತ್ ॥ ೯ ॥

---

೫. ಅಲ್ಲಿ ಸೀರಧ್ವಜನು ಉದ್ದವಾದ ಮೊನೆಯಾದ ನೇಗಿಲಿನಿಂದ ಭೂಮಿಯನ್ನು ಉಳುತ್ತಿರುವಾಗ ರತಿಯಂತೆ ಸುಂದರಿಯಾದ ಹುಡುಗಿಯು ಸಿಕ್ಕಿದಳು.

೬. ಆಗ ಆಕೆಯನ್ನು ನೋಡಿ ಸಂತೋಷಗೊಂಡು ಸೀರಧ್ವಜನು ಸೀತೆಯೆಂದು ಹೆಸರಿಟ್ಟನು.

೭. ಆಕೆಯು ಉದ್ಯಾನವನದಲ್ಲಿ ಆಟವಾಡುತ್ತಿದ್ದಾಗ ಮನೋಹರವಾಗಿ ಮಾತಾಡುತ್ತಿರುವ ಗಿಳಿಯ ದಂಪತಿಗಳನ್ನು ನೋಡಿದಳು.

೮. ಅವು ಅತ್ಯಂತ ಹರ್ಷದಿಂದಿದ್ದುವು. ಅತಿ ಕಾಮಾಸಕ್ತವಾಗಿದ್ದುವು. ಸ್ನೇಹದಿಂದ ಶುಭವಾದ ಮಾತುಗಳನ್ನಾಡುತ್ತಿದ್ದುವು.

೯. ಆಗ ಆ ಯುಗ್ಮವು ರಮಿಸುತ್ತಾ ಆಕಾಶಕ್ಕೇರಿ ಅಲ್ಲಿದ್ದ ಒಂದು ಬೆಟ್ಟದ ತುದಿಯಲ್ಲಿ ಕುಳಿತು ಶಬ್ದಮಾಡಿದುವು.

ರಾಮೋ ಮಹೀಪತಿರ್ಭೂಮೌ ಭವಿಷ್ಯತಿ ಮನೋಹರಃ ।
ತಸ್ಯ ಸೀತೇತಿ ನಾಮ್ನಾ ತು ಭವಿಷ್ಯತಿ ಮಹೇಲಿಕಾ ॥ ೧೦ ॥

ಸ ತಯಾ ಸಹ ವರ್ಷಾಣಾಂ ಸಹಸ್ರಾಣ್ಯೇಕಯುಗ್ದಶ ।
ರಾಜ್ಯಂ ಕರಿಷ್ಯತೇ ಧೀಮಾನ್ಕರ್ಷನ್ಭೂಮಿಪತೀನ್ಬಲೀ ॥ ೧೧ ॥

ಧನ್ಯಾ ಸಾ ಜಾನಕೀ ದೇವೀ ಧನ್ಯೋಽಸೌ ರಾಮಸಂಜ್ಞಿತಃ ।
ಯೌ ಪರಸ್ಪರಮಾಪನ್ನೌ ಪೃಥಿವ್ಯಾಂ ರಮತೋ ಮುದಾ ॥ ೧೨ ॥

ಇತಿ ಸಂಭಾಷಮಾಣಂ ತು ಶುಕಯುಗ್ಮಂ ತು ಮೈಥಿಲೀ ।
ಜ್ಞಾತ್ವೇದಂ ದೇವತಾಯುಗ್ಮಂ ವಾಣೀಂ ತಸ್ಯ ವಿಲೋಕ್ಯ ಚ ॥ ೧೩ ॥

ಮದೀಯಸ್ತು ಕಥಾ ರಮ್ಯಾಃ ಕುರುತೇ ಶುಕಯೋರ್ಯುಗಂ ।
ಏತದ್ಗೃಹೀತ್ವಾ ಪೃಚ್ಛಾಮಿ ಸರ್ವಂ ವಾಕ್ಯಂ ಗತಾರ್ಥಕಂ ॥ ೧೪ ॥

ಏವಂ ವಿಚಾರ್ಯ ಸಾ ಸ್ವೀಯಾಃ ಸಖೀಃ ಪ್ರತಿ ಜಗಾದ ಸಾ ।
ಗೃಹ್ಣನ್ತು ಶನಕೈರೇತತ್ಪಕ್ಷಿಯುಗ್ಮಂ ಮನೋಹರಂ ॥ ೧೫ ॥

---

೧೦-೧೧. ಭೂಮಿಯಲ್ಲಿ ರಾಮನೆಂಬುವನು ರಾಜನಾಗುತ್ತಾನೆ. ಅವನಿಗೆ ಸೀತೆ ಎಂಬ ಹೆಸರಿನ ಹೆಂಡತಿಯಾಗುತ್ತಾಳೆ. ಅವನು ಅವಳೊಂದಿಗೆ ಹನ್ನೊಂದು ಸಾವಿರ ವರ್ಷಗಳವರೆಗೆ ರಾಜ್ಯವನ್ನು ನಿಯಮದಲ್ಲಿಟ್ಟುಕೊಂಡು ಆಳುತ್ತಾನೆ.

೧೨. ಆ ಜಾನಕಿಯು ಧನ್ಯಳು. ಆ ರಾಮನೂ ಧನ್ಯನು. ಇಬ್ಬರೂ ಸಂತೋಷದಿಂದ ಸೇರಿಕೊಂಡು ಭೂಮಿಯಲ್ಲಿ ಸಂತೋಷದಿಂದ ರಮಿಸುತ್ತಾರಲ್ಲ.

೧೩-೧೪. ಹೀಗೆ ಮಾತಾಡುತ್ತಿರುವ ಆ ಶುಕದಂಪತಿಗಳ ಮಾತನ್ನು ಯೋಚಿಸಿದರೆ ಅವು ದೇವತೆಗಳೇ ಇರಬೇಕು. ನನ್ನ ಸಂಬಂಧವಾದ ಕಥೆಗಳನ್ನೇ ಹೇಳುತ್ತಿವೆ. ಆದ್ದರಿಂದ ಇವನ್ನು ಕೇಳಿ ನನ್ನ ಕಥೆಗಳೆಲ್ಲವನ್ನೂ ನಿಶ್ಚಯವಾಗಿ ತಿಳಿದುಕೊಳ್ಳುತ್ತೇನೆ.

೧೫. ಹೀಗೆಂದು ಯೋಚಿಸಿ ಸಖಿಯರನ್ನು ಕುರಿತು ಮೆಲ್ಲಗೆ ಮನೋಹರವಾದ ಈ ಪಕ್ಷಿಗಳನ್ನು ಹಿಡಿಯಿರಿ ಎಂದಳು.

ಸಖ್ಯಸ್ತಾಸ್ತದ್ಗಿರಂ ಗತ್ವಾಗೃಹ್ಣಸ್ಪಕ್ಷಿಯುಗ್ಮಕಂ ।
ನಿವೇದಯಾಮಾಸುರಿದಂ ಸ್ವಸಖ್ಯಾಃ ಪ್ರಿಯಕಾಮ್ಯಯಾ ॥ ೧೬ ॥

ಬಹುಧಾ ವಿವಿಧಾರ್ಶಬ್ದಾನ್ಸ್ವರ್ಧನ್ವೀಕ್ಷ್ಯ ಮನೋಹರಂ ।
ಆಶ್ವಾಸಯಾಮಾಸ ತದಾ ಪಪ್ರಚ್ಛ ತದಿದಂ ವಚಃ ॥ ೧೭ ॥

॥ ಸೀತೋವಾಚ ॥
ಮಾ ಭೈಷಾತಾಂ ಯುವಾಂ ರಮ್ಯೌ ಕೌ ವಾ ಕುತ್ರ ಸಮಾಗತೌ ।
ಕೋ ರಾಮಃ ಕಾ ಚ ಸಾ ಸೀತಾ ತಜ್ಜ್ಞಾನಂ ತು ಕುತಃ ಸ್ಮೃತಂ ॥ ೧೮ ॥

ತತ್ಸರ್ವಂ ಶಂಸತಂ ಕ್ಷಿಪ್ರಂ ಮತ್ತೋ ನೋ ಭವತೋರ್ಭಯಂ ।
ಇತಿ ಪೃಷ್ಟಂ ತಯಾ ಪಕ್ಷಿಯುಗಂ ಸರ್ವಮಶಂಸತ ॥ ೧೯ ॥

॥ ಪಕ್ಷಿಯುಗ್ಮಮುವಾಚ ॥
ವಾಲ್ಮೀಕಿರಾಸ್ತೇ ಸುಮಹಾನೃಷಿರ್ಧರ್ಮವಿದುತ್ತಮಃ ।
ಆವಾಂ ತದಾಶ್ರಮಸ್ಥಾನೌ ಸರ್ವದಾ ಸುಮನೋಹರಂ ॥ ೨೦ ॥

---

೧೬. ಆ ಸಖಿಯರು ಆ ಬೆಟ್ಟಕ್ಕೆ ಹೋಗಿ ಅವನ್ನು ಹಿಡಿದು ಸಖಿಗೆ ಸಂತೋಷವಾಗಲೆಂದು ಕೊಟ್ಟರು.

೧೭. ಮನೋಹರವಾಗಿ ಅನೇಕ ಬಗೆಯಾಗಿ ಕೂಗಿಕೊಳ್ಳುತ್ತಿರುವ ಅವನ್ನು ಸಮಾಧಾನಪಡಿಸಿ ಈ ಮಾತನ್ನು ಕೇಳಿದಳು.

೧೮. ರಮ್ಯವಾದ ಎಲೈ ಗಿಳಿಗಳೇ, ನೀವು ಹೆದರಬೇಡಿ. ರಮ್ಯವಾಗಿರುವ ನೀವು ಯಾರು? ಎಲ್ಲಿಂದ ಬಂದಿರಿ? ರಾಮನಾರು? ಆ ಸೀತೆಯಾದರೂ ಯಾವಳು? ನಿಮಗೆ ಈ ಉತ್ತಮಜ್ಞಾನವು ಹೇಗೆ ಬಂದಿತು?

೧೯. ಅದೆಲ್ಲವನ್ನೂ ಹೇಳಿರಿ. ನನ್ನಿಂದ ನಿಮಗೆ ಯಾವ ಭಯವೂ ಇಲ್ಲ ಎಂದು ಆಕೆಯು ಹೇಳಲು, ಆ ಪಕ್ಷಿಗಳು ಎಲ್ಲವನ್ನೂ ಹೇಳಿದುವು.

೨೦. ಪಕ್ಷಿಗಳು ಹೇಳಿದುವು :—ವಾಲ್ಮೀಕಿ ಎಂಬ ಶ್ರೇಷ್ಠನಾದ ಋಷಿಯೊಬ್ಬನಿರುವನು. ನಾವು ಮನೋಹರವಾದ ಅವನ ಆಶ್ರಮದಲ್ಲಿದ್ದೇವೆ.

ಸ ಶಿಷ್ಯಾನ್ಪಾಠಯಾಮಾಸ ಭಾವಿ ರಾಮಾಯಣಂ ಮುನಿಃ ।
ಪ್ರತ್ಯಹಂ ತತ್ಪದಸ್ಮಾರೀ ಸರ್ವಭೂತಹಿತೇ ರತಃ ॥ ೨೧ ॥

ತದಾವಾಭ್ಯಾಂ ಶ್ರುತಂ ಸರ್ವಂ ಭಾವಿ ರಾಮಾಯಣಂ ಮಹತ್ ।
ಮುಹುರ್ಮುರ್ಹುಗೀಯಮಾನಮಾಯಾತಂ ಪರಿಪಾಠತಃ ॥ ೨೨ ॥

ಶೃಣ್ವಾವಾಂ ತೇಽಭಿಧಾಸ್ಯಾವೋ ಯೋ ರಾಮೋ ಯಾ ಚ ಜಾನಕೀ ।
ಯದ್ಯದ್ಭವಿಷ್ಯತೀತಸ್ಯಾ ರಾಮೇಣ ಕ್ರೀಡಿತಾತ್ಮನಃ ॥ ೨೩ ॥

ಋಷ್ಯಶೃಂಗಕೃತೇಷ್ಟ್ಯಾ ಚ ಚತುರ್ಧಾತ್ವಂ ಗತೋ ಹರಿಃ ।
ಪ್ರಾದುರ್ಭವಿಷ್ಯತಿ ಶ್ರೀಮಾನ್ಸುರಸ್ತ್ರೀಗೀತಸತ್ಕಥಃ ॥ ೨೪ ॥

ಸ ಕೌಶಿಕೇನ ಮಿಥಿಲಾಂ ಪ್ರಾಪ್ಸ್ಯತೇ ಭ್ರಾತೃಸಂಯುತಃ ।
ಧನುಷ್ಪಾಣಿಸ್ತದಾ ದೃಷ್ಟ್ವಾ ದುರ್ಗ್ರಾಹ್ಯಮನ್ಯಭೂಭುಜಾಂ ॥ ೨೫ ॥

ಧನುರ್ಭಂಕ್ತ್ವಾ ಜನಕಜಾಂ ಪ್ರಾಪ್ಸ್ಯತೇ ಸುಮನೋಹರಾಂ ।
ತಯಾ ಸಹ ಮಹದ್ರಾಜ್ಯಂ ಕರಿಷ್ಯತಿ ಶ್ರುತಂ ವರೇ ॥ ೨೬ ॥

---

೨೧. ಮುಂದೆ ಬರುವ ರಾಮಾಯಣವನ್ನು ಅವನು ಶಿಷ್ಯರಿಗೆ ಕಲಿಸಿದ್ದಾನೆ. ಅವನು ಯಾವಾಗಲೂ ಆ ರಾಮಪದಗಳನ್ನು ಸ್ಮರಿಸುತ್ತಾ ಸರ್ವಭೂತಗಳಲ್ಲಿಯೂ ದಯಾಪರನಾಗಿದ್ದಾನೆ.

೨೨. ಆ ಭಾವಿ ರಾಮಾಯಣವನ್ನೆಲ್ಲಾ ಕೇಳಿದ್ದೇವೆ. ಬಾರಿ ಬಾರಿಗೂ ಹಾಡುತ್ತಿರುವುದರಿಂದ ನಮಗೆ ಕ್ರಮವಾಗಿ ಪಾಠವಾಗಿ ಬಂದಿರುತ್ತದೆ.

೨೩. ರಾಮನಾರು ? ಸೀತೆಯಾರು ? ರಾಮನಿಂದ ಆಕೆಗೆ ಏನೇನಾಗುತ್ತದೆ ಎಂಬುದೆಲ್ಲವನ್ನೂ ಹೇಳುತ್ತೇವೆ ಕೇಳು.

೨೪. ಋಷ್ಯಶೃಂಗನು ಮಾಡಿಸಿದ ಯಾಗದಿಂದ ಶ್ರೀಹರಿಯು ತನ್ನನ್ನು ನಾಲ್ಕು ಭಾಗವನ್ನಾಗಿಮಾಡಿಕೊಂಡು ಆ ದಶರಥನಲ್ಲಿ ಹುಟ್ಟುತ್ತಾನೆ.

೨೫-೨೬. ಆ ರಾಮನನ್ನು ತಮ್ಮನೊಡನೆ ಕೌಶಿಕನು ಮಿಥಿಲಾಪಟ್ಟಣಕ್ಕೆ ಕರೆದುಕೊಂಡು ಹೋಗುತ್ತಾನೆ. ಧನ್ವಿಯಾದ ಈತನು ಇತರ ರಾಜರಿಗೆ ಅಸಾಧ್ಯವಾದ ಧನುಸ್ಸನ್ನು ಮುರಿದು, ಜನಕನ ಮಗಳನ್ನು ಮದುವೆಯಾಗುತ್ತಾನೆ. ಅವಳೊಡನೆ ಮಹಾರಾಜ್ಯವನ್ನಾಳುತ್ತಾನೆ. ತಿಳಿಯಿತೇನಮ್ಮಾ !

ಏತದನ್ಯಚ್ಚ ತತ್ರಸ್ಥೈಃ ಶ್ರುತಮಸ್ಮಾಭಿರುದ್ಗತೈಃ ।
ಕಥಿತಂ ತವ ಚಾರ್ವಂಗಿ ಮುಂಚಾವಾಂ ಗಂತುಕಾಮುಕೌ ॥ ೨೭ ॥

ಇತಿ ವಾಕ್ಯಂ ತಯೋರ್ಧ್ವತ್ವಾ ಶ್ರೋತ್ರಯೋಸ್ತುಮನೋಹರಂ ।
ಪುನರೇವ ಜಗಾದೇದಂ ವಾಕ್ಯಂ ಪಕ್ಷಿಯುಗಂ ಪ್ರತಿ ॥ ೨೮ ॥

ಸ ರಾಮಃ ಕುತ್ರ ವರ್ತೇತ ಕಸ್ಯ ಪುತ್ರಃ ಕಥಂ ತು ತಾಂ ।
ಪರಿಗ್ರಹೀಷ್ಯತಿ ಪರಃ ಕೀದೃಗ್ರೂಪಧರೋ ನರಃ ॥ ೨೯ ॥

ಮಯಾ ಪೃಷ್ಟಮಿದಂ ಸರ್ವಂ ಕಥಯಸ್ವ ಯಥಾತಥಂ ।
ಪಶ್ಚಾತ್ಸರ್ವಂ ಕರಿಷ್ಯಾಮಿ ಪ್ರಿಯಂ ಯುಷ್ಮನ್ಮನೋಹರಂ ॥ ೩೦ ॥

ತಚ್ಛ್ರುತ್ವಾ ತಾಂ ತು ಕಾಮೇನ ಪೀಡಿತಾಂ ವೀಕ್ಷ್ಯ ಸಾ ಶುಕೀ ।
ಜಾನಕೀಂ ಹೃದಿ ಜ್ಞಾತ್ವಾ ಚ ಪಪಾತ ಪುರತಸ್ತತಃ ॥ ೩೧ ॥

ಸೂರ್ಯವಂಶಧ್ವಜೋ ನಾಮ ರಾಜಾ ಪಂಕ್ತಿರಥೋ ಬಲೀ ।
ಯಂ ದೇವಾಃ ಶ್ರಿತ್ಯ ಸರ್ವಾರೀನ್ವಿಜೇಷ್ಯಂತೇ ಚ ಸರ್ವತಃ ॥ ೩೨ ॥

---

೨೭. ಇವೇ ಮುಂತಾದುವುಗಳನ್ನು ಅಲ್ಲಿನವರು ಹಾಡುತ್ತಿರುವುವನ್ನು ಕೇಳಿದ್ದೇವೆ. ಅದನ್ನು ನಿನಗೆ ಹೇಳಿದ್ದೇವೆ. ನಾವು ಹೋಗಬೇಕು. ನಮ್ಮನ್ನು ಬಿಡು.

೨೮. ಮನೋಹರವಾದ ಆ ಮಾತುಗಳನ್ನು ಕೇಳಿ ಆ ಹಕ್ಕಿಗಳನ್ನು ಕುರಿತು ಮತ್ತಿಂತೆಂದಳು.

೨೯. ಆ ರಾಮನು ಎಲ್ಲಿದ್ದಾನೆ? ಯಾರ ಮಗನು? ಆ ಜಾನಕಿಯನ್ನು ಹೇಗೆ ಮದುವೆಯಾಗುತ್ತಾನೆ? ಅವನು ಹೇಗಿದ್ದಾನೆ?

೩೦. ನಾನು ಕೇಳಿದುದೆಲ್ಲವನ್ನೂ ಹೇಳಿರಿ. ಆ ಮೇಲೆ ನಿಮಗೆ ಸರಿಯಾದ ಆತಿಥ್ಯವನ್ನು ಮಾಡಿ ಬಿಡಿಸುತ್ತೇನೆ.

೩೧. ಅದನ್ನು ಕೇಳಿ ಆ ಹೆಣ್ಣು ಗಿಳಿಯು ಕಾಮಾರ್ಪಿತಳಾದ ಆಕೆಯನ್ನು ಜಾನಕಿ ಎಂದು ತಿಳಿದು ಅವಳ ಪಾದಗಳಿಗೆ ಬಿದ್ದಿತು.

೩೨. ಸೂರ್ಯವಂಶಕ್ಕೆ ತಿಲಕಪ್ರಾಯನಾದ ದಶರಥನೆಂಬ ರಾಜನಿದ್ದಾನೆ. ಅವನನ್ನು ಆಶ್ರಯಿಸಿ ದೇವತೆಗಳು ತಮ್ಮ ಶತ್ರುಗಳನ್ನು ಜಯಿಸುತ್ತಾರೆ. ಅವನು ಅಷ್ಟು ಬಲಿಷ್ಠನು.

ತಸ್ಯ ಭಾರ್ಯಾತ್ರಯಂ ಭಾವಿ ಶಕ್ರನೋಽಪಸರೂಪಧೃತ್ ।
ತಸ್ಯಾಮಪತ್ಯಚಾತುಷ್ಕಂ ಭವಿಷ್ಯತಿ ಬಲೋಽನ್ವಿತಂ ॥ ೩೩ ॥

ಸರ್ವೇಷಾಮಗ್ರಜೋ ರಾಮೋ ಭರತಸ್ತದನು ಸ್ಮೃತಃ ।
ಲಕ್ಷ್ಮಣಸ್ತದನು ಶ್ರೀಮಾನ್ ಶತ್ರುಘ್ನಸ್ಸರ್ವತೋ ಬಲಃ ॥ ೩೪ ॥

ರಘುನಾಥ ಇತಿ ಖ್ಯಾತಿಂ ಗಮಿಷ್ಯತಿ ಮಹಾಮನಾಃ ।
ತೇಷಾಮನಂತನಾಮಾನಿ ರಾಮಸ್ಯ ಬಲಿನಸ್ಸಖಿ ॥ ೩೫ ॥

ಪದ್ಮಕೋಶ ಇವ ಶೋಭನಂ ಮುಖಂ
ಪಂಕಜಾಭನಯನೇ ಸುದೀರ್ಘಕೇ ।
ಉನ್ನತಾಪ್ಯಥ ಮನೋಹರಾನಸಂ
ವಲ್ಗು ಸಂಗತಮನೋಹರೇ ಭ್ರುವೌ ॥ ೩೬ ॥

ಜಾನುಲಂಬಿತಮನೋಹರೌ ಭುಜೌ
ಕಂಬುಶೋಭಿಲಗಕ್ರೋಡಹ್ರಸ್ವಕಃ ।
ಸತ್ಕಪಾಟತಲವಿಸ್ತೃತಶ್ರೀಕಂ
ವಕ್ಷ ಏತದಮಲಂ ಸಲಕ್ಷ್ಮಕಂ ॥ ೩೭ ॥

---

೩೩. ಅವನಿಗೆ ರೂಪವತಿಯರಾದ ಮೂವರು ಹೆಂಡಿರಾಗುತ್ತಾರೆ. ಅವರಲ್ಲಿ ಬಲಿಷ್ಠರಾದ ನಾಲ್ಕು ಜನ ಮಕ್ಕಳು ಹುಟ್ಟುತ್ತಾರೆ.

೩೪. ಎಲ್ಲರಿಗೂ ದೊಡ್ಡವನು ರಾಮನು, ಅನಂತರ ಭರತನು, ಅವನ ತಮ್ಮನು ಲಕ್ಷ್ಮಣನು, ಅವನಾದ ಮೇಲೆ ಶತ್ರುಘ್ನನು.

೩೫. ಆ ಧೀರನು ರಘುನಾಥನೆಂಬ ಹೆಸರನ್ನು ಹೊಂದುತ್ತಾನೆ. ಆ ಬಲಿಷ್ಠನಾದ ರಾಮನಿಗೆ ಬಹಳ ಹೆಸರುಗಳು ಆಗುತ್ತವೆ.

೩೬-೩೮. ಆ ರಾಮನ ಮುಖವು ಪದ್ಮದಂತೆಯೂ, ಕಣ್ಣುಗಳು ದೀರ್ಘವಾಗಿಯೂ ಎತ್ತರವಾಗಿಯೂ, ದಪ್ಪಾಗಿರುವ ಮೂಗೂ,ವಕ್ರವಾಗಿ ಸೇರಿಕೊಂಡಿರುವ ಹುಬ್ಬೂ. ಮಂಡಿಯವರೆಗೂ ಉದ್ದವಾದ ಕೈಗಳೂ, ಶಂಖದಂತಿರುವ ಕತ್ತೂ, ಭುಜದ ಮಧ್ಯಭಾಗವು ಚಿಕ್ಕದಾಗಿಯೂ, ಬಾಗಿಲಿನ ಕದಗಳಂತೆ ಅಗಲವಾದ ಎದೆಯೂ,

ಶೋಭನೋರುಕಟಿಶೋಭಯಾ ಯುತಂ
ಜಾನುಯುಗ್ಮಮಮಲಂ ಸ್ವಸೇವಿತಂ
ಪಾದಪದ್ಮಮಖಿಲೈರ್ನಿಜೈಸ್ಸದಾ
ಸೇವಿತಂ ರಘುಪತೇಃ ಸುಶೋಭನಂ　　　॥ ೩೮ ॥

ಏತದ್ರೂಪಧರೋ ರಾಮೋ ಮಯಾ ಕಿಂತು ಸ ವರ್ಣ್ಯತೇ ।
ಶತಾನನೋಽಪಿ ನೋ ಯಾತಿ ಪಕ್ಷಿಣಃ ಕಿಮು ಮಾನ್ಯತಾಃ　　　॥ ೩೯ ॥

ಯದ್ರೂಪಂ ವೀಕ್ಷ್ಯ ಲಲಿತಾ ಮನೋಹರವಪುರ್ಧರಾ ।
ಲಕ್ಷ್ಮೀರ್ಮುಮೋಹ ಭುವಿ।ಕಾ ವರ್ತತೇ ಯಾ ನ ಮೋಹತಿ　　　॥ ೪೦ ॥

ಮಹಾಬಲೋ ಮಹಾವೀರ್ಯೋ ಮಹಾನೋಹನರೂಪಧೃತ್ ।
ಕಿಂ ವರ್ಣಯಾಮಿ ಶ್ರೀರಾಮಂ ಸರ್ವೈಶ್ವರ್ಯಗುಣಾನ್ವಿತಂ　　　॥ ೪೧ ॥

ಧನ್ಯಾ ಸಾ ಜಾನಕೀ ದೇವೀ ಮಹಾಮೋಹನರೂಪಧೃತ್ ।
ರಂಸ್ಯತೇ ಯೇನ ಸಹಿತಾ ವರ್ಷಾಣಾಮಯುತಂ ಮುದಾ　　　॥ ೪೨ ॥

---

ನಡುವು ಮನೋಹರವಾಗಿಯೂ, ಮಂಡಿಗಳು ಚೆನ್ನಾಗಿಯೂ, ಪಾದಯುಗ್ಮಗಳು ಎಲ್ಲರಿಂದಲೂ ಎಲ್ಲಾ ಕಾಲದಲ್ಲೂ ಸೇವಿಸಲ್ಪಡುವುವಾಗಿಯೂ ಆತನಿಗಿರುತ್ತವೆ.

೩೯. ರಾಮನು ಈರೀತಿ ಇರುತ್ತಾನೆ. ನನ್ನಿಂದ ವರ್ಣಿಸಲು ಸಾಧ್ಯವೂ ಇಲ್ಲ. ಆತನನ್ನು ವರ್ಣಿಸಲು ಶತಾನನ (ಬ್ರಹ್ಮ) ನಿಗೂ ಸಾಧ್ಯವಿಲ್ಲದಿರುವಾಗ ನನ್ನಂತಹ ಪಕ್ಷಿಗಳೇನು ವರ್ಣಿಸಿಯೇವು ?

೪೦. ಲಲಿತವಾದ ಸುಂದರವಾದ ದೇಹವುಳ್ಳ ಲಕ್ಷ್ಮಿಯೂ, ಅವನ ರೂಪವನ್ನು ನೋಡಿ ಮೋಹಗೊಂಡ ಮೇಲೆ ಭೂಮಿಯಲ್ಲಿ ಆತನನ್ನು ಮೋಹಿಸದವಳು ಯಾವಳಿದ್ದಾಳೆ ?

೪೧. ಮಹಾಬಲಿ, ಮಹಾಪರಾಕ್ರಮವುಳ್ಳ ಸರ್ವೈಶ್ವರ್ಯದಿಂದ ಕೂಡಿದ ಸುಂದರ ಆ ಶ್ರೀರಾಮನನ್ನು ಯಾರು ತಾನೇ ವರ್ಣಿಸಲು ಸಾಧ್ಯ ?

೪೨. ಸುಂದರಿಯಾದ ಆ ಜಾನಕಿಯೇ ಧನ್ಯಳು. ಅವನೊಡನೆ ಹತ್ತು ಸಾವಿರ ವರ್ಷಗಳು ಸುಖಿಸುತ್ತಾಳೆ.

ತ್ವಂ ಕಾ ಸಾ ಕಿಂತು ನಾಮಾಸಿ ತವ ಸುಂದರಿ ಯತ್ತು ಮಾಂ ।
ಪರಿಪೃಚ್ಛಸಿ ವೈದಗ್ಧ್ಯಾದ್ರಾಮಕೀರ್ತೇಃ ಸಮಾದರಾತ್ ॥ ೪೩ ॥

ಏತದ್ವಾಕ್ಯಂ ಸಮಾಕರ್ಣ್ಯ ಜಾನಕೀ ಪಕ್ಷಿಣೋರ್ಯುಗಂ ।
ಉವಾಚ ಜನ್ಮ ಲಲಿತಂ ಶಂಸಂತೀ ಸ್ವಸ್ಯ ಮೋಹನಂ ॥ ೪೪ ॥

ಯಾ ತ್ವಯಾ ಜಾನಕೀ ಪ್ರೋಕ್ತಾ ಸಾಹಂ ಜನಕಪುತ್ರಿಕಾ ।
ಸ ರಾಮೋ ಮಾಂ ಯದಾಗತ್ಯ ಪ್ರಾಪ್ಸ್ಯತೇ ಸುಮನೋಹರಃ ॥ ೪೫ ॥

ತದಾ ವಾಂ ಮೋಚಯಾಮ್ಯದ್ಧಾ ನಾನ್ಯಥಾ ವಾಕ್ಯಲೋಭಿತಾ ।
ಲೀಲಯಾ ಚ ಸುಖೇನಾಸ್ತಾಂ ಮದ್ಗೃಹೇ ಮಧುರಾದಕೌ ॥ ೪೬ ॥

ಇತ್ಯುಕ್ತಂ ತತ್ಸಮಾಕರ್ಣ್ಯ ಪಕ್ಷಿಣೌ ಭಯುತಾಂ ಗತೌ ।
ಪರಸ್ಪರಂ ಪ್ರಕ್ಷುಭಿತೌ ಜಾನಕೀಂ ಪ್ರತ್ಯವೋಚತಾಂ ॥ ೪೭ ॥

ವಯಂ ವೈ ಪಕ್ಷಿಣಸ್ಸಾಧ್ವಿ ವನಸ್ಥಾ ವೃಕ್ಷಗೋಚರಾಃ ।
ಪರಿಭ್ರಮಾಮಃ ಸರ್ವತ್ರ ನೋ ಸುಖಂ ನೋ ಭವೇದ್ಗೃಹೇ ॥ ೪೮ ॥

---

೪೩. ನೀನು ಯಾರು? ನಿನ್ನ ಹೆಸರೇನು? ನೀನು ಹೀಗೆ ಕೇಳಲು ಕಾರಣವೇನು? ರಾಮಕೀರ್ತಿಯನ್ನು ನೀನು ಹೀಗೆ ಜಾಣತನದಿಂದ ಕೇಳಲು ಕಾರಣವೇನು?

೪೪. ಜಾನಕಿಯು ಆ ಹಕ್ಕಿಗಳ ಮಾತನ್ನು ಕೇಳಿ ತನ್ನ ಜನ್ಮಾದಿಗಳನ್ನು ಹೇಳಿದಳು?

೪೫. ನೀನು ಹೇಳಿದ ಜಾನಕಿಯೇ ನಾನು ನನ್ನನ್ನು ಮೋಹಿಸಿ ಬರುವನೇ ರಾಮನು.

೪೬. ರಾಮನು ಬಂದು ನನ್ನನ್ನು ಮದುವೆಯಾದಾಗ ನಿಮ್ಮನ್ನು ಬಿಡುತ್ತೇನೆ. ಅಲ್ಲಿವರೆಗೂ ನನ್ನ ಮನೆಯಲ್ಲಿ ಒಳ್ಳೆಯ ತಿಂಡಿಯನ್ನು ತಿಂದುಕೊಂಡಿರಿ.

೪೭. ಹೀಗೆ ಹೇಳಿದುದನ್ನು ಕೇಳಿ ಆ ಪಕ್ಷಿಗಳು ಭಯವನ್ನು ಹೊಂದಿ, ಒಂದಕ್ಕೊಂದು ಹೆದರಿ ಜಾನಕಿಯನ್ನು ಕುರಿತು ಹೇಳಿದುವು.

೪೮. ಎಲೈ ಸಾಧ್ವಿಯೇ, ನಾವು ಪಕ್ಷಿಗಳು. ಕಾಡಿನಲ್ಲಿ ಮರದ ಮೇಲಿರತಕ್ಕವರು. ಎಲ್ಲ ಕಡೆಯಲ್ಲೂ ಸುತ್ತುತ್ತಿದ್ದೇವೆ. ನಮಗೆಲ್ಲೂ ಕಷ್ಟವೆಂಬುದೇ ಇಲ್ಲ.

ಅನ್ತರ್ವರ್ತ್ನೀ ಸ್ವಕೇ ಸ್ಥಾನೇ ಗತ್ವಾ ಸಂಸೂಯ ಪುತ್ರಕಾನ್ ।
ತ್ವತ್ಸ್ಥಾನಮಾಗಮಿಷ್ಯಾಮಿ ಸತ್ಯಂ ಮೇ ಹ್ಯುದಿತಂ ವಚಃ ॥ ೪೯ ॥

ಏವಂ ಪ್ರೋಕ್ತಾ ತಯಾ ಸಾ ತು ನ ಮುಮೋಚ ಶಿಶುಃ ಸ್ವಯಂ ।
ತದಾ ಪತಿಸ್ತಾಂ ಪ್ರೋವಾಚ ವಿನೀತವದನೋತ್ಸುಕಃ ॥ ೫೦ ॥

ಸೀತೇ ಮುಂಚ ಕಥಂ ಭಾರ್ಯಾಂ ರಕ್ಷಸೇ ಮೇ ಮನೋಹರಾಂ।
ಆವಾಂ ಗಚ್ಛಾವ ವಿಪಿನೇ ವಿಚರಾವಃ ಸುಖಂ ವನೇ ॥ ೫೧ ॥

ಅಂತರ್ವರ್ತ್ನೀ ತು ವರ್ತೇತ ಭಾರ್ಯಾ ಮಮ ಮನೋಹರಾ ।
ತಸ್ಯಾಃ ಪ್ರಸೂತಿಂ ಕೃತ್ವಾ ತ್ವಾಮಾಗಮಿಷ್ಯಾಮಿ ಶೋಭನೇ ॥ ೫೨ ॥

ಇತ್ಯುಕ್ತಾ ನಿಜಗಾದೇಮಂ ಸುಖಂ ಗಚ್ಛ ಮಹಾಮತೇ ।
ಏತಾಂ ರಕ್ಷಾಮಿ ಸುಖಿತಾಂ ಮತ್ಪಾರ್ಶ್ವೇ ಪ್ರಿಯಕಾರಿಣೀಂ ॥ ೫೩ ॥

ಇತ್ಯುಕ್ತೋ ದುಃಖಿತಃ ಪಕ್ಷೀ ತಾಮುವಾಚ ಕರುಣಾನ್ವಿತಃ ।
ಯೋಗಿಭಿಃ ಪ್ರೋಚ್ಯತೇ ಯದ್ವೈ ತದ್ವಚಸ್ತಥ್ಯಮೇವ ಹಿ ॥ ೫೪ ॥

---

೪೯. ಈಕೆಯು ಗರ್ಭಿಣಿಯು. ನಮ್ಮ ಸ್ಥಾನಕ್ಕೆ ಹೋಗಿ ಮರಿಗಳನ್ನು ಹಾಕಿ ಪುನಃ ನಿನ್ನ ಹತ್ತಿರಕ್ಕೆ ಬರುತ್ತೇವೆ. ಇದು ಸತ್ಯವಾದ ಮಾತು.

೫೦. ಹೀಗೆ ಹೇಳಿದರೂ ಆ ಸೀತೆಯು ಹೆಣ್ಣು ಗಿಳಿಯನ್ನು ಬಿಡದಿರಲು ಆಗ ಗಂಡು ಗಿಣಿಯು ವಿನಯದಿಂದ ಆಕೆಗೆ ಹೇಳಿತು.

೫೧. ಸೀತೆಯೇ ನನ್ನ ಹೆಂಡತಿಯನ್ನು ಬಿಟ್ಟುಬಿಡು. ಏತಕ್ಕೆ ಅವಳನ್ನು ಬಂಧನವಲ್ಲಿಟ್ಟಿದ್ದೀಯೆ ? ನಾವು ಕಾಡಿಗೆ ಹೋಗುತ್ತೇವೆ. ಸುಖವಾಗಿರುತ್ತೇವೆ.

೫೨. ನನ್ನ ಹೆಂಡತಿಯು ಗರ್ಭಿಣಿಯಾಗಿರುತ್ತಾಳೆ. ಅವಳ ಹೆರಿಗೆಯಾದ ಮೇಲೆ ಬರುತ್ತೇವೆ.

೫೩. ಹೀಗೆನ್ನಲು, ಎಲೈ ಪಕ್ಷಿಯೇ ಸುಖವಾಗಿರು. ನಿನ್ನ ಹೆಂಡತಿಯನ್ನು ನನ್ನ ಹತ್ತಿರದಲ್ಲೇ ಸುಖವಾಗಿ ಕಾಪಾಡುತ್ತೇನೆ.

೫೪. ಹೀಗೆ ಹೇಳಲು ಆ ಪಕ್ಷಿಯು ದುಃಖಗೊಂಡು ಆಕೆಗೆ ಇಂತೆಂದಿತು. ಯೋಗಿಗಳು ಯಾವುದನ್ನು ಹೇಳುತ್ತಾರೋ ಅದು ನಿಶ್ಚಯವು.

ನ ವಕ್ತವ್ಯಂ ನ ವಕ್ತವ್ಯಂ ಮೌನಮಾಶ್ರಿತ್ಯ ತಿಷ್ಠತು ।
ನೋ ಚೇತ್ಸ ವಾಕ್ಯದೋಷೇಣ ಪ್ರಾಪ್ನೋತ್ಯಾಶಾಸನಮುನ್ಮದಃ ॥ ೫೫ ॥

ವಯಂ ಚೇದತ್ರ ವಾಕ್ಯಂ ನಾಕರಿಷ್ಯಾಮ ನಗೋಪರಿ ।
ಬಂಧನಂ ಕಥಮಾವಾಂ ಸ್ಯಾತ್ತಸ್ಮಾನ್ಮೌನಂ ಸಮಾಚರೇತ್ ॥ ೫೬ ॥

ಇತ್ಯುಕ್ತ್ವಾ ತಾಂ ಪ್ರತ್ಯುವಾಚ ನಾಹಂ ಜೀವಾಮಿ ಸುಂದರಿ ।
ಏತಯಾ ಭಾರ್ಯಯಾ ಸೀತೇ ತಸ್ಮಾನ್ಮುಂಚ ಮನೋಹರೇ ॥ ೫೭ ॥

ಅನೇಕವಿಧವಾಕ್ಯೈಸ್ಸಾ ಬೋಧಿತಾ ನಾಮುಚತ್ತದಾ ।
ಕುಪಿತಾ ದುಃಖಿತಾ ಭಾರ್ಯಾ ಶಶಾಪ ಜನಕಾತ್ಮಜಾಂ ॥ ೫೮ ॥

ಯಥಾ ತ್ವಂ ಪತಿನಾ ಸಾರ್ಧಂ ವಿಯೋಜಯಸಿ ಮಾಮಿತಃ ।
ತಥಾ ತ್ವಮಪಿ ರಾಮೇಣ ವಿಮುಕ್ತಾ ಭವ ಗರ್ಭಿಣೀ ॥ ೫೯ ॥

ಇತ್ಯುಕ್ತವತ್ಯಾಂ ತಸ್ಯಾಂ ತು ದುಃಖಿತಾಯಾಂ ಪುನಃ ಪುನಃ ।
ಪ್ರಾಣಾ ನಿರಗಮನ್ದುಃಖಾತ್ಪತಿದುಃಖೇನ ಪೂರಿತಾತ್ ॥ ೬೦ ॥

---

೫೫. ಹೇಳಬೇಡಿ, ಹೇಳಬೇಡಿ, ಮೌನವನ್ನು ಹೊಂದಿ ಸುಮ್ಮನಿರಿ. ಇಲ್ಲದಿದ್ದರೆ ತನ್ನ ಮಾತಿನ ದೋಷದಿಂದಲೇ ಬೇಡಿಯನ್ನು ಹಾಕಿಸಿಕೊಳ್ಳುತ್ತಾನೆ.

೫೬. ನಾವು ಆ ಬೆಟ್ಟದ ಮೇಲಿರುವಾಗ ನಿನ್ನ ಮಾತನ್ನು ಆಡದಿದ್ದರೆ ಬಂಧನವು ಹೇಗೆ ಬರುತ್ತಿತ್ತು?

೫೭. ಹೀಗೆಂದು ಹೇಳಿ ಎಲೈ ಸೀತೆಯೇ, ನಾನು ಬದುಕುವುದಿಲ್ಲ. ಆದ್ದರಿಂದ ಈ ಹೆಂಡತಿಯೊಡನೆ ನನ್ನನ್ನು ಬಿಟ್ಟುಬಿಡು ಎಂದಿತು.

೫೮. ಅನೇಕ ಬಗೆಯಿಂದ ಹೇಳಿದರೂ, ಆಕೆಯು ಬಿಡದಿರಲು ಕೋಪವನ್ನೂ, ದುಃಖವನ್ನೂ ಹೊಂದಿ ಆ ಜನಕಜೆಗೆ ಶಾಪಕೊಟ್ಟಿತು.

೫೯. ನಾನು ಗರ್ಭಿಣಿಯಾಗಿರುವಾಗ ಗಂಡನೊಡನೆ ನನ್ನನ್ನು ಹೇಗೆ ನೀನು ಅಗಲಿಸಿದೆಯೋ ಹಾಗೆ ನೀನೂ ಕೂಡ ಗರ್ಭಿಣಿಯಾದಾಗ ರಾಮನಿಂದ ಅಗಲು.

೬೦. ಹೀಗೆಂದು ಹೇಳಿ ದುಃಖಗೊಂಡು ಪತಿದುಃಖದಿಂದಲೇ ಪ್ರಾಣಗಳನ್ನು ಬಿಟ್ಟಿತು.

ರಾಮಂ ರಾಮಂ ಸ್ಮರಂತ್ಯಾಶ್ಚ ವದಂತ್ಯಾಶ್ಚ ಪುನಃ ಪುನಃ ।
ವಿಮಾನಮಾಗತಂ ಸುಷ್ಠು ಪಕ್ಷಿಣೀ ಸ್ವರ್ಗತಾ ಬಭೌ ॥ ೬೧ ॥

ತಸ್ಯಾಂ ಮೃತಾಯಾಂ ದುಃಖಾರ್ತೋ ಭರ್ತಾ ತಸ್ಯಾಸ್ಸ ಪಕ್ಷಿರಾಟ್ ।
ಪರಮಂ ಕ್ರೋಧಮಾಪನ್ನೋ ಜಾಹ್ನವ್ಯಾಂ ದುಃಖಿತೋಽಪತತ್ ॥

ತಥಾ ಭವಾಮಿ ರಾಮಸ್ಯ ನಗರೇ ಜನಲಾಲಿತೇ ।
ಮದ್ವಾಕ್ಯಾದಿಯಮುದ್ವಿಗ್ನಾ ವಿಯೋಗೇನ ಸುದುಃಖಿತಾ ॥ ೬೩ ॥

ಇತ್ಯುಕ್ತ್ವಾ ಸ ಪಪಾತೋದೇ ಜಾಹ್ನವ್ಯಾ ಭ್ರಮಶೋಭಿತೇ ।
ದುಃಖಿತಃ ಕುಪಿತೋ ಭೀತಸ್ತದ್ವಿಯೋಗೇನ ಕಂಪಿತಃ ॥ ೬೪ ॥

ಕ್ರುದ್ಧತ್ವಾದ್ದುಃಖಿತತ್ವಾಚ್ಚ ಸೀತಾಯಾ ಅಪಮಾನನಾತ್ ।
ಅನ್ತ್ಯಜತ್ವಂ ಪರಂ ಪ್ರಾಪ್ತೋ ರಜಕಃ ಕ್ರೋಧನಾಭಿಧಃ ॥ ೬೫ ॥

---

೬೧. ರಾಮ ರಾಮ ಎಂದು ಹೇಳುತ್ತಾ ಸ್ಮರಿಸುತ್ತಾ ಪ್ರಾಣಬಿಟ್ಟಿತು. ಆಗ ವಿಮಾನವು ಬಂದು ಪಕ್ಷಿಯು ಸ್ವರ್ಗಕ್ಕೆ ಹೋಯಿತು.

೬೨. ಆ ಹಕ್ಕಿಯು ಸಾಯಲು ಗಂಡುಪಕ್ಷಿಯು ದುಃಖದಿಂದ ಕೋಪಗೊಂಡು ಗಂಗೆಯಲ್ಲಿ ಬಿದ್ದಿತು.

೬೩. ನಾನು ರಾಮನ ನಗರದಲ್ಲಿ ಹುಟ್ಟಿ, ಇವಳು ದುಃಖಗೊಂಡು, ರಾಮನಿಂದ ಬೇರೆಯಾಗುವಂತೆ ಮಾಡುತ್ತೇನೆ.

೬೪. ಹೀಗೆಂದು ಹೇಳಿ ದುಃಖದಿಂದಲೂ, ಕೋಪದಿಂದಲೂ, ನಡುಗುತ್ತ ಗಂಗೆಯ ಮಡುವಿನಲ್ಲಿ ಬಿದ್ದಿತು.

೬೫. ಕೋಪದುಃಖಗಳಿಂದಲೂ, ಸೀತೆಗೆ ಅಪಮಾನ ಮಾಡಿದುದರಿಂದಲೂ ಅಗಸನೆಂಬ ಕೀಳುಜಾತಿಯಲ್ಲಿ ಕ್ರೋಧನೆಂಬ ಹೆಸರಿನಿಂದ ಹುಟ್ಟಿದನು.

ಯಃ ಕ್ರೋಧಾಚ್ಚ ಸ್ವಕಾನ್ಪ್ರಾಣಾನ್ಮಹತಾಂ ದುಷ್ಟಮಾಚರನ್ ।
ಸಂತ್ಯಜೇತ್ಸ ಮೃತೋ ಯಾತಿ ಅಂತ್ಯಜತ್ವಂ ದ್ವಿಜೋತ್ತಮಃ ॥ ೬೬ ॥

ತಜ್ಜಾತಂ ರಜಕೋಕ್ತ್ಯಾಽಸೌ ನಿಂದಿತಾ ಚ ವಿಯೋಗಿತಾ ।
ರಜಕಸ್ಯ ಚ ಶಾಪೇನ ವಿಯುಕ್ತಾ ಸಾ ವನಂ ಗತಾ ॥ ೬೭ ॥

ಏತತ್ತೇ ಕಥಿತಂ ವಿಪ್ರ ಯತ್ತೇ ಪೃಷ್ಟಂ ವಿದೇಹಜಾಂ ।
ಪುನರತ್ರ ಪರಂ ವೃತ್ತಂ ಶೃಣುಷ್ವ ನಿಗದಾಮಿ ತತ್ ॥ ೬೮ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ರಜಕಪ್ರಾಗ್ಜನ್ಮಕಥನಂ
ನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೬೬. ಮಹಿಮರಿಗೆ ಕೆಟ್ಟುದನ್ನು ಮಾಡಿ ಯಾವನು ಕೋಪದಿಂದ ಪ್ರಾಣಗಳನ್ನು ಬಿಡುತ್ತಾನೋ ಅವನು ಅಂತ್ಯಜಾತಿಯಲ್ಲಿ ಹುಟ್ಟುತ್ತಾನೆ.

೬೭. ಆಕೆಯಿಂದ ಅವಳು ನಿಂದೆಹೊಂದಲ್ಪಟ್ಟವಳೂ ಬಿಡಲ್ಪಟ್ಟವಳೂ ಆದಳು ರಜಕನ ಶಾಪದಿಂದ ವಿಯೋಗಹೊಂದಿ ವನವನ್ನು ಹೋದಿದಳು.

೬೮. ಎಲೈ ವಿಪ್ರನೇ ನೀನು ಕೇಳಿದುದುನ್ನು ಹೇಳಿದ್ದೇನೆ. ಮುಂದಿನ ವಿಷಯವನ್ನು ಹೇಳುತ್ತೇನೆ ಕೇಳು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಅಗಸನ ಹಿಂದಿನ ಜನ್ಮದ ಕಥನವೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಪಂಚಾಶತ್ತಮೋಽಧ್ಯಾಯಃ

॥ ಶೇಷ ಉವಾಚ ॥

ಭರತಂ ಮೂರ್ಛಿತಂ ದೃಷ್ಟ್ವಾ ರಘುನಾಥಃ ಸುದುಃಖಿತಃ ।
ಪ್ರತೀಹಾರಮುವಾಚೇದಂ ಶತ್ರುಘ್ನಂ ಪ್ರಾಪಯಾಶು ಮಾಂ ॥ ೧ ॥

ತದ್ವಾಕ್ಯಂ ಪ್ರೋಕ್ತಮಾಕರ್ಣ್ಯ ಕ್ಷಣಾಚ್ಛತ್ರುಘ್ನಮಾನಯತ್ ।
ಯತ್ರ ರಾಮೋ ನಿಜಭ್ರಾತಾ ಭರತೇನ ಸಹ ಸ್ಥಿತಃ ॥ ೨ ॥

ಭರತಂ ಮೂರ್ಛಿತಂ ದೃಷ್ಟ್ವಾ ರಘುನಾಥಂ ಚ ದುಃಖಿತಂ ।
ಪ್ರಣಮ್ಯ ದುಃಖಿತೋಽವೋಚತ್ಕಿಮಿದಂ ದಾರುಣಂ ಮಹತ್ ॥ ೩ ॥

ತದಾ ರಾಮೋಂತ್ಯಜಪ್ರೋಕ್ತಂ ವಾಕ್ಯಂ ಲೋಕವಿಗರ್ಹಿತಂ ।
ತಂ ಪ್ರತ್ಯುವಾಚ ರಾಮೋಽಸೌ ಶತ್ರುಘ್ನಂ ಪದಸೇವಕಂ ॥ ೪ ॥

---

## ಐವತ್ತೆಂಟನೆಯ ಅಧ್ಯಾಯವು.

೧. ರಾಮನು ಮೂರ್ಛೆಬಿದ್ದಿರುವುದನ್ನು ನೋಡಿ ಪ್ರತೀಹಾರಿಗೆ ಶತ್ರುಘ್ನನನ್ನು ಕರೆತರುವಂತೆ ಹೇಳಿದನು.

೨. ಅದನ್ನು ಕೇಳಿ ಶತ್ರುಘ್ನನನ್ನು ಕರೆತರಲು ಪ್ರತೀಹಾರಿಯು ಜಾಗ್ರತೆಯಾಗಿ ಹೋಗಿ ಅವನನ್ನು ಕರೆತರಲು ರಾಮನಿರುವ ಬಳಿಗೆ ಆತನು ಹೋದನು.

೩. ಭರತನ ಮೂರ್ಛೆಯನ್ನೂ, ರಾಮನ ದುಃಖವನ್ನೂ ನೋಡಿ ರಾಮನಿಗೆ ನಮಸ್ಕರಿಸಿ, ಎಲೈ ರಾಮನೇ ಇದೇನು ದಾರುಣವಾದ ಕೆಲಸವು ಎಂದನು.

೪. ಆಗ ರಾಮನು ರಜಕನು ಹೇಳಿದ ಲೋಕಗರ್ಹಿತವಾದ ಮಾತನ್ನು ಶತ್ರುಘ್ನನಿಗೆ ಹೇಳಿದನು.

ಅಧೋಮುಖೋ ದೀನರವೋ ಗದ್ಗದಸ್ವರವೇಪಥುಃ ।
ಶೃಣು ಭ್ರಾತರ್ವಚೋ ಮೇಽದ್ಯ ಕುರು ತತ್ಕ್ಷಿಪ್ರಮಾದರಾತ್ ॥ ೫ ॥

ಯಥಾ ಸ್ಯಾದ್ವಿಮಲಾ ಕೀರ್ತಿರ್ಗಂಗೇವ ಪೃಥಿವೀಂ ಗತಾ ।
ಸೀತಾಯಾ ವಾಚ್ಯಮತುಲಂ ಲೋಕೇ ಶ್ರುತ್ವಾಽತ್ರ್ಯೋದಿತಂ ॥ ೬ ॥

ತ್ಯಜಾಮಿ ಚಾಪಿ ದೇಹಂ ಸ್ವಮೇನಾಂ ವಾ ಕಿಲ ಜಾನಕೀಂ ।
ಇತಿ ವಾಕ್ಯಂ ಸಮಾಕರ್ಣ್ಯ ರಾಮಸ್ಯ ಕಿಲ ಶತ್ರುಹಾ ॥ ೭ ॥

ಸವೇಪಥುಃ ಪಪಾತೋರ್ವ್ಯಾಂ ದುಃಖಿತಃ ಪರದಾರಣಃ ।
ಸಂಜ್ಞಾಂ ಪ್ರಾಪ್ಯ ಮುಹೂರ್ತೇನ ರಘುನಾಥಮುವಾಚ ತ ॥ ೮ ॥

॥ ಶತ್ರುಘ್ನ ಉವಾಚ ॥

ಕಿಮೇತದುಚ್ಯತೇ ಸ್ವಾಮಿನ್ ಜಾನಕೀಂ ಪ್ರತಿ ದಾರುಣಂ ।
ಪಾಷಂಡೈರ್ದುಷ್ಟಚಿತ್ತೈಶ್ಚ ಸರ್ವಧರ್ಮಬಹಿಷ್ಕೃತೈಃ ॥ ೯ ॥

ನಿಂದಿತಾ ಶ್ರುತಿರಗ್ರಾಹ್ಯಾ ಭವತಿ ತ್ವಗ್ರ್ಯಜನ್ಮನಾ ।
ಜಾಹ್ನವೀ ಸರ್ವಲೋಕಾನಾಂ ಪಾಪಘ್ನೀ ದುರಿತಾಪಹಾ ॥ ೧೦ ॥

---

೫. ಆಗ ರಾಮನು ತಲೆ ಬಗ್ಗಿಸಿಕೊಂಡು ಅಳುತ್ತಾ ಭ್ರಾತನೇ, ನನ್ನ ಮಾತನ್ನು ಕೇಳು. ಅದನ್ನು ಜಾಗ್ರತೆಯಾಗಿ ನಡೆಸು.

೬. ಭೂಮಿಗೆ ಬಂದ ಗಂಗೆಯಂತೆ ಕೀರ್ತಿಯು ವಿಮಲವಾಗಿ ಶೋಭಿಸುವಂತೆ ಆ ಸೀತೆಯ ಅವತಾರವನ್ನು ಕೇಳಿ ಅದಕ್ಕೆ ತಕ್ಕಂತೆ ಮಾಡು.

೭-೮. ನಾನು ದೇಹವನ್ನು ಬಿಡುತ್ತೇನೆ. ಇಲ್ಲದಿದ್ದರೆ ಜಾನಕಿಯನ್ನು ಬಿಡುತ್ತೇನೆ ಎನ್ನಲು, ಈ ಮಾತನ್ನು ಕೇಳಿ ಶತ್ರುಘ್ನನು ದುಃಖಗೊಂಡು ನಡಗುತ್ತಾ ಮೂರ್ಛೆಯಿಂದ ಕೆಳಗೆ ಬಿದ್ದನು. ಕ್ಷಣಕಾಲದ ಮೇಲೆ ಜ್ಞಾನವನ್ನು ಹೊಂದಿ ರಾಮನಿಗಿಂತೆಂದನು.

೯-೧೦. ಸ್ವಾಮಿ ಇದೇನು? ಜಾನಕಿಯನ್ನು ಕುರಿತು ದಾರುಣವಾದ ವಿಷಯವನ್ನು ಹೇಳುತ್ತೀರಲ್ಲ. ನಾಸ್ತಿಕರು, ಅಯೋಗ್ಯರು, ವಿಧರ್ಮಿಗಳು ವೇದವನ್ನು ನಿಂದಿಸಿದರೆ ಬ್ರಾಹ್ಮಣನು ಅದನ್ನು ಬಿಡಬಹುದೇ? ಜಾಹ್ನವಿಯು ಲೋಕಪಾವನಿಯು, ಪಾಪನಾಶಕಳು, ಪಾಪಿಗಳು ನಿಂದಿಸಿದರೆ ಅದು ಸ್ಪರ್ಶಕ್ಕೆ ಅನರ್ಹವಾಯಿತೇ?

ನಿಸ್ಪೃಷ್ಟಾ ಪಾಪಿಭಿಃ ಪುಂಭಿಃ ಸಾ ಸ್ವರ್ಶೇ ನಾರ್ಹಿತಾ ಸತಾಂ ।
ಸೂರ್ಯೋ ಜಗತ್ಪ್ರಕಾಶಾಯ ಸಮುದೇತಿ ಜಗತ್ಯಹೋ ॥ ೧೧ ॥
ಉಲೂಕಾನಾಂ ರುಚಿಕರೋ ನ ಭವೇತ್ತತ್ರ ಕಾ ಕ್ಷತಿಃ ।
ತಸ್ಮಾತ್ತ್ವಮೇನಾಂ ಗೃಹ್ಣೀಷ್ವ ಮಾ ತ್ಯಜಾನಿಂದಿತಾಂ ಸ್ತ್ರಿಯಂ ॥ ೧೨ ॥
ಶ್ರೀರಾಮಭದ್ರ ಕೃಪಯಾ ಕುರುಷ್ವ ವಚನಂ ಮಮ ।
ಏತಚ್ಛ್ರುತ್ವಾ ವಚಸ್ತಸ್ಯ ಶತ್ರುಘ್ನಸ್ಯ ಮಹಾತ್ಮನಃ ॥ ೧೩ ॥
ಪುನಃಪುನರ್ಜಗಾದೇಮಂ ಯದುಕ್ತಂ ಭರತಂ ಪ್ರತಿ ।
ತನ್ನಿಶಮ್ಯ ವಚೋ ಭ್ರಾತುರ್ದುಃಖಪೂರಪರಿಪ್ಲುತಃ ॥ ೧೪ ॥
ಪಪಾತ ಮೂರ್ಛಿತೋ ಭೂಮೌ ಛಿನ್ನಮೂಲ ಇವ ದ್ರುಮಃ ।
ಭ್ರಾತರಂ ಪತಿತಂ ವೀಕ್ಷ್ಯ ಶತ್ರುಘ್ನಂ ದುಃಖಿತೋ ಭೃಶಂ ॥ ೧೫ ॥
ಪ್ರತಿಹಾರಮುವಾಚೇದಂ ಲಕ್ಷ್ಮಣಂ ತ್ವಾನಯಾಂತಿಕಂ
ಸ ಲಕ್ಷ್ಮಣಗೃಹೇ ಗತ್ವಾ ನ್ಯವೇದಯದಿದಂ ವಚಃ ॥ ೧೬ ॥

॥ ಪ್ರತೀಹಾರ ಉವಾಚ ॥

ಸ್ವಾಮಿನ್ ರಾಮೋ ಭವಂತಂ ತು ಸಮಾಹ್ವಯತಿ ವೇಗತಃ ।
ಸ ತಚ್ಛ್ರುತ್ವಾ ಸಮಾಹ್ವಾನಂ ರಾಮಚಂದ್ರೇಣ ವೇಗತಃ ॥ ೧೭ ॥

---

೧೧-೧೨. ಸೂರ್ಯನು ಜಗತ್ಪ್ರಕಾಶಕ್ಕೆ ಹುಟ್ಟಿದರೆ, ಗೂಬೆಯು ನಿಂದಿಸಿದರೆ ಅವರಲ್ಲಿ ತೊಂದರೆಯೇನು? ಆದ್ದರಿಂದ ಆಕೆಯನ್ನು ಪರಿಗ್ರಹಿಸು. ಆಕೆಯು ಅನಿಂದಿತೆಯು. ಬಿಡಬೇಡ.

೧೩. ಶ್ರೀರಾಮನೇ, ದಯವಿಟ್ಟು ನಾನು ಹೇಳಿದಂತೆ ಮಾಡು ಎಂದನು. ಅವನ್ನು ಕೇಳಿ ಶತ್ರುಘ್ನನಿಗೆ ಭರತನಿಗೆ ಹೇಳಿದಂತೆಯೇ ಅದನ್ನೇ ಮತ್ತೆ ಮತ್ತೆ ಹೇಳಿದನು.

೧೪. ರಾಮನ ಈ ಮಾತನ್ನು ಕೇಳಿ ದುಃಖದಿಂದ ಬುಡಕಡಿದ ಮರದಂತೆ ಧೊಪ್ಪನೆ ಬಿದ್ದು ಮೂರ್ಛೆ ಹೊಂದಿದನು.

೧೫. ಶತ್ರುಘ್ನನು ದುಃಖಗೊಂಡುದನ್ನು ನೋಡಿ ಪ್ರತೀಹಾರನನ್ನು ಕುರಿತು ಲಕ್ಷ್ಮಣನನ್ನು ಕರೆದುಕೊಂಡು ಬಾ ಎಂದು ಅಪ್ಪಣೆಮಾಡಿದನು. ಆ ಪ್ರತೀಹಾರಿಯು ಲಕ್ಷ್ಮಣನ ಮನೆಗೆ ಹೋಗಿ ಈ ಮಾತನ್ನು ಹೇಳಿದನು.

೧೬-೧೭. ಪ್ರತೀಹಾರನು ಹೇಳಿದನು :—ಸ್ವಾಮಿ! ರಾಮನು ತಮ್ಮನ್ನು ಜಾಗ್ರತೆಯಾಗಿ ಕರೆಯುತ್ತಾನೆ ಎನ್ನಲು ಅದನ್ನು ಕೇಳಿ ಒಡನೆಯೇ ಶೀಘ್ರವಾಗಿ ತಮ್ಮಂದಿರೊಡನೆ ಇರುವ ಜಾಗಕ್ಕೆ ಬಂದನು.

ಜಗಾಮ ತರಸಾ ತತ್ರ ಯತ್ರ ಸಭ್ರಾತೃಕೋಽನಘಃ ।
ಭರತಂ ಮೂರ್ಛಿತಂ ದೃಷ್ಟ್ವಾ ಶತ್ರುಘ್ನಮಪಿ ಮೂರ್ಛಿತಂ ॥ ೧೮ ॥

ಶ್ರೀರಾಮಚಂದ್ರಂ ದುಃಖಾರ್ತಂ ದುಃಖಿತೋ ವಾಕ್ಯಮಬ್ರವೀತ್ ।
ಕಿಮೇತದ್ದಾರುಣಂ ರಾಜನ್ದೃಶ್ಯತೇ ಮೂರ್ಛನಾದಿಕಂ ॥ ೧೯ ॥

ತದಾಶು ಶಂಸ ಸರ್ವಂ ಮೇ ಕಾರಣಂ ಮುಖ್ಯತೋಽನಘ ।
ಏವಂ ವದಂತಂ ನೃಪತಿರ್ವೃತ್ತಾಂತಂ ಸರ್ವಮಾದಿತಃ ॥ ೨೦ ॥

ಶಶಂಸ ಲಕ್ಷ್ಮಣಂ ಕ್ಷಿಪ್ರಂ ದುಃಖಪೂರಪರಿಪ್ಲುತಂ ।
ಲಕ್ಷ್ಮಣಸ್ತದ್ವಚಶ್ಶ್ರುತ್ವಾ ಸೀತಾಯಾಸ್ತ್ಯಾಗಸಂಭವಂ ॥ ೨೧ ॥

ನಿಶ್ವಸನ್ಮುಹುರುಚ್ಚೈಸ್ಸಂಸ್ತಬ್ಧಗಾತ್ರ ಇವಾಭವತ್ ।
ಭ್ರಾತರಂ ಸ್ತಬ್ಧಗಾತ್ರಂ ಚ ಕಂಪಮಾನಂ ಮುಹುರ್ಮುಹುಃ ॥ ೨೨ ॥

ನ ಕಿಂಚನ ವದಂತಂ ತಂ ವೀಕ್ಷ್ಯ ಶೋಕಾರ್ದಿತೋಽಬ್ರವೀತ್ ।
ಕಿಂ ಕರಿಷ್ಯಾಮ್ಯಹಂ ಭೂಮೌ ಸ್ಥಿತ್ವಾ ದುರ್ಯಶಸಾಂಕಿತಃ ॥ ೨೩ ॥

---

೧೮. ಭರತ ಶತ್ರುಘ್ನರು ಮೂರ್ಛಿತರಾಗಿರುವುದನ್ನೂ, ರಾಮನು ದುಃಖಿತನಾಗಿರುವುದನ್ನೂ ನೋಡಿ ದುಃಖಗೊಂಡು ಇಂತೆಂದನು.

೧೯. ಎಲೈ ರಾಜನೇ ಇದೇನು? ಈ ದಾರುಣವಾದ ಮೂರ್ಛೆಗಳು ಕಾಣುತ್ತಿವೆಯಲ್ಲ? ಇದನ್ನೂ ಇದಕ್ಕೆ ಕಾರಣವನ್ನೂ ಜಾಗ್ರತೆ ಹೇಳು ?

೨೦. ಲಕ್ಷ್ಮಣನು ಇಂತೆನಲು ರಾಮನು ಮೊದಲಿನಿಂದ ಕೊನೆಯವರೆಗೂ ದುಃಖದಿಂದ ಕೂಡಿದ ಆ ವಿಷಯವನ್ನು ತಿಳಿಸಿದನು.

೨೧. ಲಕ್ಷ್ಮಣನು ಸೀತಾತ್ಯಾಗದ ವಿಷಯವನ್ನು ಕೇಳಿದ ಕೂಡಲೇ ನಿಟ್ಟುಸಿರುಬಿಡುತ್ತಾ ಸುಮ್ಮನೆ ನಿಂತನು.

೨೨. ಲಕ್ಷ್ಮಣನು ಚಲಿಸದೆ ನಡುಗುತ್ತಿರುವುದನ್ನೂ, ಅವನು ಮಾತನಾಡದಿರುವುದನ್ನೂ ನೋಡಿ ರಾಮನು ದುಃಖದಿಂದ ಇಂತೆಂದನು.

೨೩. ಅಪಯಶಸ್ಸು ಬಂದ ಮೇಲೆ ಭೂಮಿಯಲ್ಲಿದ್ದು ಏನು ಮಾಡಲಿ? ಲೋಕಾಪವಾದದಿಂದ ಹೆದರಿ ದೇಹವನ್ನಾದರೂ ಬಿಡುತ್ತೇನೆ.

ತ್ಯಜಾಮಿ ಸ್ವಂ ವಪುಶ್ಶ್ರೀಮಲ್ಲೋಕಭೀತ್ಯಾ ಚ ಶೋಕವಾನ್ ।
ಸರ್ವದಾ ಭ್ರಾತರೋ ಮಹ್ಯಂ ವಾಕ್ಯಂಕರಾ ವಿಚಕ್ಷಣಾಃ ॥ ೨೪ ॥

ಇದಾನೀಂ ತೇಽಪಿ ದೈವೇನ ಪ್ರತಿಕೂಲವಚಃಕರಾಃ ।
ಕುತ್ರ ಗಚ್ಛಾಮಿ ಕಿಂ ಯಾಮಿ ಹಸಿಷ್ಯಂತಿ ನೃಪಾ ಭುವಿ ॥ ೨೫ ॥

ದುರ್ಯಶೋಲಾಂಛಿತಂ ನೈ ನೂಾಂ ಕುಷ್ಠಿನಂ ರೂಪವನ್ನರಾಃ ।
ಮನೋರ್ವಂಶೇ ಪುರಾ ಭೂಪಾ ಜಾತಾ ಜಾತಾ ಗುಣಾಧಿಕಾಃ ॥ ೨೬ ॥

ಇದಾನೀಂ ಮಯಿ ಜಾತೇ ತು ವಿಪರೀತಂ ಬಭೂವ ತತ್ ।
ಇತಿ ಸಂಭಾಷಮಾಣಂ ತಂ ರಾಮಭದ್ರಂ ಸಮೀಕ್ಷ್ಯ ಸಃ ॥ ೨೭ ॥

ಸಂಸ್ತಭ್ಯಾಶ್ರೂಣಿ ವಿಪುಲಾನ್ಯುವಾಚ ವಿಕಲಸ್ವರಃ ।
ಸ್ವಾಮಿನ್ವಿಷಾದಂ ಮಾ ಕಾರ್ಷೀಃ ಕಥಂ ತವ ಮತಿರ್ಹೃತಾ ॥ ೨೮ ॥

---

೨೪-೨೫. ನನ್ನ ತಮ್ಮಂದಿರು ಯಾವಾಗಲೂ ನಾನು ಹೇಳಿದುದನ್ನು ಮಾಡುತ್ತಾ ಬುದ್ಧಿವಂತರಾಗಿದ್ದರು. ಅದೃಷ್ಟದ ಪ್ರತಿಕೂಲದಿಂದ ನನಗೆ ಈಗ ಪ್ರತಿಕೂಲರಾಗಿದ್ದಾರೆ. ಎಲ್ಲಿ ಹೋಗಲಿ? ಯಾರನ್ನು ಹೊಂದಿ ಹೇಳಿಕೊಳ್ಳಲಿ? ಲೋಕದಲ್ಲಿ ರಾಜರು ನಗುತ್ತಾರಲ್ಲ?

೨೬. ದುರ್ಯಶಸ್ಸಿನಿಂದ ಕೂಡಿದ ನನ್ನನ್ನು ಜನರು ನೋಡಿ, ರೂಪವಂತರು ತೊನ್ನು ಹಿಡಿದವನನ್ನು ತಿರಸ್ಕರಿಸುವಂತೆ ತಿರಸ್ಕರಿಸುತ್ತಾರೆ. ಮನುವಿನ ವಂಶದಲ್ಲಿ ಒಬ್ಬರಿಗಿಂತಲೂ ಮತ್ತೊಬ್ಬರು ಗುಣಗಳಲ್ಲಿ ಹೆಚ್ಚು ಹೆಚ್ಚಿನವರು ಹುಟ್ಟಿದ್ದರು. ಈಗ ನಾನು ಹುಟ್ಟಲಾಗಿ ಆ ಗುಣವು ವ್ಯತ್ಯಾಸವಾಯಿತು.

೨೭. ಹೀಗೆ ಹೇಳುತ್ತಿರುವ ರಾಮನನ್ನು ಕುರಿತು ಲಕ್ಷ್ಮಣನು ಕಣ್ಣೀರನ್ನು ತಡೆದುಕೊಂಡು ದೀನಸ್ವರದಿಂದ ಇಂತೆಂದನು.

೨೮. ಸ್ವಾಮಿ, ದುಃಖಪಡಬೇಡ. ಬುದ್ಧಿ ಏಕೆ ನಾಶವಾಯಿತು? ನೀನು ತಿಳುವಳಿಕೆಯುಳ್ಳವನಾಗಿ ಅನಿಂದಿತಳಾದ ಸೀತೆಯನ್ನು ಏಕೆ ಬಿಡುತ್ತೀಯೆ?

ಸೀತಾಮನಿಂದಿತಾಂ ಕೋ ನು ತ್ಯಜತಿ ಶ್ರುತವಾನ್ನರಾ ।
ಆಕಾರಯಾಮಿ ರಜಕಂ ಪರಿಪೃಚ್ಛಾಮಿ ತಂ ಪ್ರತಿ ॥ ೨೯ ॥

ಕಥಂ ತ್ವಯಾ ನಿಂದಿತಾ ಸಾ ಜಾನಕೀ ಯೋಷಿತಾಂ ವರಾ ।
ತವ ದೇಶೇ ಬಲಾತ್ಕಶ್ಚಿದ್ಬಾಧ್ಯತೇ ನ ಜನೋಽಲ್ಪಕಃ ॥ ೩೦ ॥

ತಸ್ಮಾತ್ತಸ್ಯ ಯಥಾ ಸ್ವಾಂತೇ ಪ್ರತೀತಿಸ್ಸ್ಯಾತ್ತಥಾಚರ
ಕಿಮರ್ಥಂ ತ್ಯಜ್ಯತೇ ಭೀರುಃ ಪತಿವ್ರತಪರಾಯಣಾ ॥ ೩೧ ॥

ಮನಸಾ ವಚಸಾ ನಾನ್ಯಂ ಜಾನಾತಿ ಜನಕಾತ್ಮಜಾ ।
ತಸ್ಮಾದೇನಾಂ ಗೃಹಾಣ ತ್ವಮೇತಾಂ ಮಾ ತ್ಯಜ ಜಾನಕೀಂ ॥ ೩೨ ॥

ಮಮೋಪರಿ ಕೃಪಾಂ ಕೃತ್ವಾ ಮದುಕ್ತಂ ಸಂಶ್ರಯಾಶು ತತ್ ।
ಏವಂ ವದಂತಂ ಪ್ರತ್ಯೂಚೇ ರಾಮಃ ಶೋಕೇನ ಕರ್ಷಿತಃ ॥ ೩೩ ॥

ಲಕ್ಷ್ಮಣಂ ಧರ್ಮವಾಕ್ಯೇನ ಬೋಧಯಂಸ್ತ್ಯಜನೋದ್ಯಮಃ ।

॥ ಶ್ರೀರಾಮ ಉವಾಚ ॥

ಕಥಂ ತು ಮಾಂ ಬ್ರವೀಷಿ ತ್ವಂ ಮಾ ತ್ಯಜೈನಾಮನಿಂದಿತಾಂ ।
ಲೋಕಾಪವಾದಾತ್ತ್ಯಕ್ಷ್ಯೇಽಹಂ ಜಾನನ್ನಪಿ ಪಿಪಾಪಿನೀಂ ॥ ೩೪ ॥

---

೨೯-೩೦. ಆ ಅಗಸನನ್ನು ಕರೆಯುತ್ತೇನೆ ಅವನನ್ನು ಕೇಳೋಣ, ಸ್ತ್ರೀ ಜಾನಕಿಯನ್ನೇಕೆ ನಿಂದಿಸಿದೆ ? ಎಂದು ಕೇಳೋಣ ನಿನ್ನ ದೇಶದಲ್ಲಿ ಅಯೋಗ್ಯನನ್ನೂ ಬಲಿಷ್ಠನು ತಿರಸ್ಕರಿಸಕೂಡದು. ಆದ್ದರಿಂದ ಅವನ ಮನಸ್ಸಿನಲ್ಲಿ ನಂಬಿಕೆಯುಂಟಾಗುವಂತೆ ಮಾಡೋಣ.

೩೧-೩೨. ಭೀರುವಾಗಿಯೂ, ಪತಿವ್ರತೆಯಾಗಿಯೂ, ಇರುವ ಸೀತೆಯನ್ನೇಕೆ ಬಿಡುತ್ತೀಯೆ ? ಮನೋವಾಕ್ಕಾಯಗಳಿಂದ ಆ ಸೀತೆಯು ಮತ್ತೊಬ್ಬನನ್ನು ಯೋಚಿಸಿದವಳಲ್ಲ. ಆದ್ದರಿಂದ ಈಕೆಯನ್ನು ಗ್ರಹಿಸು. ಜಾನಕಿಯನ್ನು ಬಿಡಬೇಡ.

೩೩. ನನ್ನ ಮೇಲೆ ದಯವಿಟ್ಟು ನಾನು ಹೇಳಿದುದನ್ನು ಆಶ್ರಯಿಸು ಎಂದನು. ಈರೀತಿ ಹೇಳುತ್ತಿರುವ ಲಕ್ಷ್ಮಣನನ್ನು ಕುರಿತು ಬಿಟ್ಟೇಬಿಡಬೇಕೆಂದು ಇಚ್ಛೆಯುಳ್ಳ ರಾಮನು ದುಃಖದಿಂದ ಧರ್ಮವಾಕ್ಯಗಳಿಂದ ಉಪದೇಶಿಸಿದನು.

೩೪. ರಾಮನು ಹೇಳಿದನು :— ಈಕೆಯನ್ನು ಬಿಡಬೇಡವೆಂದು ನೀನು ಹೇಗೆ ಹೇಳುತ್ತೀಯೆ ? ಆಕೆಯು ನಿರ್ಮಲಳು ಪಾಪಿಯಲ್ಲವೆಂಬುದು ನನಗೆ ಗೊತ್ತಿದೆ. ಆದರೂ ಲೋಕಾಪವಾದ ಭೀತಿಯಿಂದ ಬಿಡುತ್ತೇನೆ.

**ಸ್ವಯಶಃಕಾರಣೇಽಹಂ ಸ್ವಂ ದೇಹಂ ತ್ಯಕ್ಷ್ಯಾಮಿ ಶೋಭನಂ ।**
**ತ್ವಾಮಪಿ ಭ್ರಾತರಂ ತ್ಯಕ್ಷ್ಯೇ ಲೋಕವಾದಾದ್ವಿಗರ್ಹಿತಂ** ॥ ೩೫ ॥

**ಕಿಮುತಾನ್ಯೇ ಗೃಹಾಃ ಪುತ್ರಾ ಮಿತ್ರಾಣಿ ವಸು ಶೋಭನಂ ।**
ಸ್ವಯಶಃಕಾರಣೇ ಸರ್ವಂ ತ್ಯಜಾಮಿ ಕಿಮುತ ಮೈಥಿಲೀಂ ॥ ೩೬ ॥

ನ ತಥಾ ಮೇ ಪ್ರಿಯೋ ಭ್ರಾತಾ ನ ಕಳತ್ರಂ ನ ಬಾಂಧವಾಃ ।
ಯಥಾ ಮೇ ವಿಮಲಾ ಕೀರ್ತಿರ್ವಲ್ಲಭಾ ಲೋಕನಿಶ್ರುತಾ ॥ ೩೭ ॥

ಇದಾನೀಂ ರಜಕೋ ನಾದ್ಯ ಪ್ರಷ್ಟವ್ಯೋ ಭವತಿ ಧ್ರುವಂ ।
ಕಾಲೇನ ಸರ್ವಂ ಭವಿತಾ ಲೋಕಚಿತ್ತಸ್ಯ ರಂಜನಂ ॥ ೩೮ ॥

ಆಮಯೋ ಯದ್ವದಾಮಸ್ತು ನ ಚಿಕಿತ್ಸ್ಯೋ ಭವೇತ್ಕ್ವಚಿತ್ ।
ಸ ಕಾಲೇನ ಪರೀಪಾಕಾತ್ಭೇಷಜಾದೇವ ನಶ್ಯತಿ ॥ ೩೯ ॥

ತಥಾ ಕಾಲೇನ ಸಂಭಾವಿ ಸಾಂಪ್ರತಂ ಮಾ ವಿಲಂಘಯ ।
ತ್ಯಜೈನಾಂ ವಿಪಿನೇ ಸಾಧ್ವೀಂ ಮಾಂ ವಾ ಖಡ್ಗೇನ ಘಾತಯ ॥ ೪೦ ॥

---

೩೫. ನನ್ನ ಯಶಸ್ಸಿಗೋಸ್ಕರ ನನ್ನ ದೇಹವನ್ನು ಬಿಡಲು ಸಿದ್ಧನಾಗಿದ್ದೇನೆ. ಲೋಕಾಪವಾದದಿಂದ ನಿಂದಿತನಾದರೆ ಸೋದರನಾದ ನಿನ್ನನ್ನು ಬಿಟ್ಟುಬಿಡುತ್ತೇನೆ.

೩೬. ಮಿಕ್ಕನಾದ ಮನೆ, ಮಕ್ಕಳು, ಮಿತ್ರರು, ಹಣ ಇವುಗಳ ವಿಷಯದಲ್ಲಿ ಹೇಳುವುದೇನು? ನನ್ನ ಯಶಸ್ಸಿಗೋಸ್ಕರ ಎಲ್ಲವನ್ನೂ ಬಿಡಬಲ್ಲೆ! ಸೀತೆಯ ವಿಷಯದಲ್ಲಿ ಹೆಚ್ಚೇನಿದೆ?

೩೭. ನನಗೆ ಪವಿತ್ರವಾದ ಕೀರ್ತಿಯು ಹೇಗೆ ಪ್ರಿಯವೋ ಹಾಗೆ ಸೋದರರಾಗಲಿ ಹೆಂಡಿರಾಗಲಿ ಬಂಧುಗಳಾಗಲಿ ಪ್ರೀತಿಪಾತ್ರರಲ್ಲ.

೩೮. ಈಗ ಅಗಸನನ್ನೇನೂ ಕೇಳಬೇಕಾಗಿಲ್ಲ. ಕಾಲಕ್ಕನುಗುಣವಾಗಿ ಲೋಕದ ಜನಗಳ ಮನಸ್ಸನ್ನು ರಂಜಿಸಬೇಕು.

೩೯. ಆಮದಿಂದುಂಟಾಗುವ ರೋಗವಲ್ಲಿ ಆಮ (ಕೀವನ್ನು) ವನ್ನು ಲೋಕದಲ್ಲಿ ಹೆಚ್ಚುಕಡಿಮೆ ಮಾಡುವುದಿಲ್ಲ. ಅದು ಕಾಲಾಂತರದಲ್ಲಿ ಪಾಕರೂಪವಾದ ಔಷಧಿಯಿಂದ ನಾಶವಾಗುತ್ತದೆ. ರೋಗಬಂದರೆ ರೋಗಿಗೆ ಚಿಕಿತ್ಸೆಯೇ ಹೊರತು ರೋಗಕ್ಕಲ್ಲ. ರೋಗವು ಕಾಲಕ್ರಮದಿಂದ ನಾಶವಾಗುತ್ತದೆ. ಅದರಂತೆ ಅಪವಾದಿನಿಯಾದ ಸೀತೆಗೆ ಚಿಕಿತ್ಸೆಯೇ ಹೊರತು ಅಪವಾದಕ್ಕಲ್ಲ.

೪೦. ಅದರಂತೆ ಕಾಲಪರ್ವದಿಂದ ಆಗತಕ್ಕದ್ದು. ಈಗ ಮೀರಬೇಡ. ಈ ಸೀತೆಯನ್ನು ಕಾಡಿನಲ್ಲಿ ಬಿಡು ಇಲ್ಲವೇ ನನ್ನನ್ನು ಕತ್ತಿಯಿಂದ ಕತ್ತರಿಸಿ ಹಾಕು.

ಇತ್ಯುಕ್ತಂ ವಾಕ್ಯಮಾಕರ್ಣ್ಯ ದುಃಖಿತೋಽಭೂತ್ಕ್ಷಣಂ ತದಾ ।
ಚಿಂತಯಾಮಾಸ ಚ ಸ್ವಾಂತೇ ಲಕ್ಷ್ಮಣಶ್ಶೋಕಕರ್ಷಿತಃ ॥ ೪೧ ॥

ಪಿತ್ರಾಜ್ಞಾತೋ ಜಾಮದಗ್ನ್ಯೋ ಮಾತರಂ ಘಾತಯನ್ನಭೂತ್ ।
ಗುರೋರಾಜ್ಞಾ ನ ವೈ ಲಂಘ್ಯಾ ಯುಕ್ತಾಯುಕ್ತಾಪಿ ಸರ್ವಥಾ ॥ ೪೨ ॥

ತಸ್ಮಾದೇನಾಂ ತ್ಯಜಾಮ್ಯೇವ ರಾಮಸ್ಯ ಪ್ರಿಯಕಾಮ್ಯಯಾ ।
ಇತಿ ಸಂಚಿಂತ್ಯ ಮನಸಿ ಭ್ರಾತರಂ ಪ್ರತ್ಯುವಾಚ ಸಃ ॥ ೪೩ ॥

॥ ಲಕ್ಷ್ಮಣ ಉವಾಚ ॥

ಅಕೃತ್ಯಮಪಿ ಕಾರ್ಯಂ ವೈ ಗುರ್ವಾಜ್ಞಾಂ ನೈವ ಲಂಘಯೇತ್ ।
ತಸ್ಮಾತ್ಕುರ್ವೇ ಭವದ್ವಾಕ್ಯಂ ಯತ್ತ್ವಂ ವದಸಿ ಸುವ್ರತ ॥ ೪೪ ॥

ಇತ್ಯೇವಂ ಭಾಷಮಾಣಂ ಚ ಲಕ್ಷ್ಮಣಂ ಪ್ರತ್ಯುವಾಚ ಸಃ ।
ಸಾಧು ಸಾಧು ಮಹಾಪ್ರಾಜ್ಞ ತ್ವಯಾ ಮೇ ತೋಷಿತಂ ಮನಃ ॥ ೪೫ ॥

ಅದ್ಯೈವ ರಾತ್ರೌ ಜಾನಕ್ಯಾ ದೋಹದಸ್ತಾಪಸೀಕ್ಷಣೇ ।
ತನ್ಮಿಷೇಣ ರಥೇ ಸ್ಥಾಪ್ಯ ಮೋಚಯೈನಾಂ ಮಹಾಮತೇ ॥ ೪೬ ॥

---

೪೧. ಹೀಗೆ ಹೇಳಿದುದನ್ನು ಕೇಳಿ ಲಕ್ಷ್ಮಣನು ಕ್ಷಣ ಕಾಲ ದುಃಖಿಸಿದನು. ಶೋಕಹೊಂದಿದ ಲಕ್ಷ್ಮಣನು ಮನಸ್ಸಿನಲ್ಲಿ ಕ್ಷಣಕಾಲ ಚಿಂತಿಸಿದನು.

೪೨. ತಂದೆಯಿಂದ ಆಜ್ಞಪ್ತನಾದ ಪರಶುರಾಮನು ತಾಯಿಯನ್ನು ಕೊಂದನು. ಗುರುವಿನ ಆಜ್ಞೆಯು ಯುಕ್ತವಾಗಲಿ ಅಯುಕ್ತವಾಗಲಿ ಸರ್ವಥಾ ಮಾಡಬೇಕು.

೪೩. ರಾಮನಿಗೆ ಪ್ರೀತಿಯನ್ನುಂಟುಮಾಡಬೇಕಾದುದರಿಂದ ಈಕೆಯನ್ನು ಬಿಟ್ಟೇಬಿಡುತ್ತೇನೆ. ಹೀಗೆಂದು ಯೋಚಿಸಿ ರಾಮನನ್ನು ಕುರಿತು ಇಂತೆಂದನು.

೪೪. ಅಕಾರ್ಯವಾದರೂ ಮಾಡಬೇಕು. ಗುರುವಿನ ಅಪ್ಪಣೆಯನ್ನು ಮೀರ ಬಾರದು. ಆದ್ದರಿಂದ ನೀನು ಹೇಳಿದ ಕೆಲಸವನ್ನು ಮಾಡುತ್ತೇನೆ.

೪೫. ಹೀಗೆ ಲಕ್ಷ್ಮಣನು ಹೇಳಲು ಸಾಧು- ಸಾಧು ಲಕ್ಷ್ಮಣ ನನ್ನ ಮನಸ್ಸನ್ನು ಸಂತೋಷಪಡಿಸಿದೆ ಎಂದನು.

೪೬. ನಿನ್ನೆ ರಾತ್ರಿ ಜಾನಕಿಯು ತಾಪಸಿಯರನ್ನು ನೋಡಬೇಕೆಂದು ಬಯಸಿದ್ದಾಳೆ. ಆದರ ನೆವದಿಂದ ರಥದಲ್ಲಿ ಕೂರಿಸಿ ಕರೆದುಕೊಂಡು ಹೋಗಿ ಕಾಡಿನಲ್ಲಿ ಬಿಟ್ಟುಬಿಡು.

ಇತ್ಥಂ ಭಾಷಿತಮಾಕರ್ಣ್ಯ ವಿಶುಷ್ಯದ್ವದನೋಽಭಿತಃ ।
ರುದನ್ಬಾಷ್ಪಕಲಾ ಮುಂಚರ್ ಜಗಾಮ ಸ್ವನಿವೇಶನಂ ॥ ೪೭ ॥

ಸುಮಂತ್ರಂ ತು ಸಮಾಹೂಯ ವಚನಂ ತಮುವಾಚಾಬ್ರವೀತ್ ।
ರಥಂ ಮೇ ಕುರು ಸಜ್ಜಂ ವೈ ಸದಶ್ವಾಂಬರಭೂಷಿತಂ ॥ ೪೮ ॥

ಸ ತದ್ವಾಕ್ಯಂ ಸಮಾಕರ್ಣ್ಯ ರಥಮಾನೀತವಾಂಸ್ತದಾ ।
ಆನೀತಂ ತು ರಥಂ ದೃಷ್ಟ್ವಾ ಲಕ್ಷ್ಮಣಶ್ಶೋಕಕರ್ಷಿತಃ । ॥ ೪೯ ॥

ಪರಮಂ ದುಃಖಮಾಪನ್ನಃ ಸಂರುಹ್ಯ ಸ್ಯಂದನಂ ವರಂ ।
ನಿಶ್ವಸರ್ ಜಾನಕೀಗೇಹಂ ಪ್ರತಸ್ಥೇ ಭ್ರಾತೃಸೇವಕಃ ॥ ೫೦ ॥

ಗತ್ವಾ ಚಾಂತಃಪುರೇ ಭ್ರಾತಾ ರಾಮಸ್ಯ ಮಿಥಿಲಾತ್ಮಜಾಂ ।
ಪ್ರತ್ಯುವಾಚೇ ನಿಶ್ವಸನ್ವಾಕ್ಯಂ ದುಃಖಪೂರಪರಿಪ್ಲುತಃ ॥ ೫೧ ॥

॥ ಲಕ್ಷ್ಮಣ ಉವಾಚ ॥

ಮಾತರ್ಜಾನಕಿ ರಾಮೇಣ ಪ್ರೇಷಿತೋ ಭವನಂ ತವ ।
ತಾಪಸೀಃ ಪ್ರತಿ ಯಾಹಿ ತ್ವಂ ದೋಹದಪ್ರಾಪ್ತಿಹೇತವೇ ॥ ೫೨ ॥

---

೪೭. ಹೀಗೆ ಹೇಳಿದುದನ್ನು ಕೇಳಿ ಬಾಯಿಲ್ಲಾ ಒಣಗಳು ಅಳುತ್ತ, ಕಣ್ಣೀರು ಸುರಿಸುತ್ತಾ ತನ್ನ ಮನೆಗೆ ಹೋದನು.

೪೮. ಸುಮಂತ್ರನನ್ನು ಕರೆದು ಒಳ್ಳೆಯ ಕುದುರೆಗಳನ್ನು ಕಟ್ಟಿ ಅಲಂಕರಿಸಿ ರಥವನ್ನು ಸಿದ್ಧಪಡಿಸೆಂದನು.

೪೯-೫೦. ಸುಮಂತ್ರನು ಅವನ ಮಾತಿನಂತೆ ರಥವನ್ನು ತಂದನು. ರಥವನ್ನು ತಂದುದನ್ನು ನೋಡಿ ಲಕ್ಷ್ಮಣನು ದುಃಖದಿಂದ ರಥವನ್ನು ಹತ್ತಿ ನಿಟ್ಟುಸಿರು ಬಿಡುತ್ತಾ ಜಾನಕಿಯ ಮನೆಗೆ ಹೋದನು.

೫೧. ಲಕ್ಷ್ಮಣನು ರಾಮನ ಅಂತಃಪುರಕ್ಕೆ ಹೋಗಿ ನಿಟ್ಟುಸಿರುಬಿಡುತ್ತಾ ಶೋಕದಿಂದ ಜಾನಕಿಯನ್ನು ಕುರಿತು ಇಂತೆಂದನು.

೫೨. ಲಕ್ಷ್ಮಣನು ಹೇಳಿದನು :—ಅಮ್ಮ ಜಾನಕಿಯೇ! ರಾಮನು ನಿನ್ನ ಬಳಿಗೆ ಕಳುಹಿಸಿದ್ದಾನೆ. ತಾಪಸಿಯರನ್ನು ನೋಡಲು ಹೊರಡು. ನಿನ್ನ ಬಯಕೆಯನ್ನು ಪೂರ್ತಿಮಾಡಿಕೋ.

ಇತಿ ವಾಕ್ಯಂ ಸಮಾಕರ್ಣ್ಯ ಲಕ್ಷ್ಮಣಸ್ಯ ನಿದೇಹಜಾ ।
ಪರಮಂ ಹರ್ಷಮಾಪನ್ನಾ ಲಕ್ಷ್ಮಣಂ ಪ್ರತ್ಯಭಾಷತ ॥ ೫೩ ॥

॥ ಜಾನಕ್ಯುವಾಚ ॥

ಧನ್ಯಾಹಂ ಮೈಥಿಲೀ ರಾಜ್ಞೀ ರಾಮಸ್ಯ ಚರಣಸ್ಮರಾ
ಯಸ್ಯಾ ದೋಹದಪೂರ್ತ್ಯರ್ಥಂ ಪ್ರೇಷಯಾಮಾಸ ಲಕ್ಷ್ಮಣಂ ॥ ೫೪ ॥

ಅದ್ಯಾಹಂ ತಾ ವನಚರೀಸ್ತಾಪಸೀಃ ಪತಿದೇವತಾಃ ।
ನಮಸ್ಕುರ್ಯಾಂ ಚ ವಾಸೋಭಿಃ ಪೂಜಯಾನಿ ಮನೋಹರಾಃ ॥ ೫೫ ॥

ಇತ್ಯುಕ್ತ್ವಾ ರಮ್ಯವಸ್ತ್ರಾಣಿ ಮಹಾರ್ಹಾಭರಾಣಿ ಚ ।
ಮಣೀನ್ನಿಮಲಮುಕ್ತಾಶ್ಚ ಕರ್ಪೂರಾದಿ ಸುಗಂಧವತ್ ॥ ೫೬ ॥

ಚಂದನಾದಿಕವಸ್ತೂನಿ ವಿಚಿತ್ರಾಣಿ ಸಹಸ್ರಧಾ ।
ಜಗ್ರಾಹ ರಘುನಾಥಸ್ಯ ಪತ್ನೀ ಪ್ರಿಯಕರೀ ವರಾ ॥ ೫೭ ॥

ಸೀತಾ ಗೃಹೀತ್ವಾ ಸರ್ವಾಣಿ ದಾಸೀನಾಂ ಕರಯೋರ್ಮುಹುಃ ।
ಲಕ್ಷ್ಮಣಂ ಪ್ರತಿಗಚ್ಛಂತೀ ದೇಹಲ್ಯಾಂ ಚಾಸ್ಖಲತ್ತದಾ ॥ ೫೮ ॥

---

೫೩. ಲಕ್ಷ್ಮಣನ ಈ ಮಾತನ್ನು ಕೇಳಿ ಸೀತೆಯು ಸಂತೋಷವಡುತ್ತಾ ಲಕ್ಷ್ಮಣನನ್ನು ಕುರಿತು ಇಂತೆಂದಳು.

೫೪. ಜಾನಕಿಯು ಹೇಳಿದಳು :—ನನ್ನ ಬಯಕೆಯನ್ನು ತೀರಿಸಲು ತನ್ನ ತಮ್ಮನಾದ ಲಕ್ಷ್ಮಣನನ್ನು ಕಳುಹಿಸಿದುದರಿಂದ ರಾಮನ ಚರಣಗಳನ್ನು ಸ್ಮರಿಸುವ ರಾಣಿಯಾದ ಮೈಥಿಲಿಯು ನಾನೇ ಧನ್ಯಳು.

೫೫. ಇಂದು ನಾನು ಪತಿವ್ರತೆಯರಾದ ಆ ತಾಪಸಿಯರನ್ನು ನಮಸ್ಕರಿಸಿ ಅವರಿಗೆ ಬಟ್ಟೆಗಳನ್ನು ಕೊಟ್ಟು ಸಂತೋಷಪಡಿಸುತ್ತೇನೆ.

೫೬-೫೭. ಹೀಗೆಂದು ಒಳ್ಳೆಯ ಬಟ್ಟೆಗಳನ್ನೂ, ಒಡವೆಗಳನ್ನೂ, ಒಳ್ಳೆಯ ಮಣಿಗಳನ್ನೂ ಪಚ್ಚಕರ್ಪೂರವೇ ಮುಂತಾದ ವಾಸನಾದ್ರವ್ಯಗಳನ್ನೂ ಚಂದನವನ್ನೂ ಇನ್ನೂ ನಾನಾಬಗೆಯಾದ ಪದಾರ್ಥಗಳನ್ನೂ ರಾಮನ ಹೆಂಡತಿಯು ತೆಗೆದುಕೊಂಡಳು.

೫೮. ದಾಸಿಯರ ಕೈಯ್ಯಿಂದ ಇವನ್ನೆಲ್ಲಾ ಸೀತೆಯು ತೆಗೆಸಿಕೊಂಡು ಲಕ್ಷ್ಮಣನೊಡನೆ ಹೋಗಲು ಹೊರಟು, ಹೊಸಲನ್ನು ಎಡವಿದಳು.

ಅವಿಚಾರ್ಯ ತದೌತ್ಸುಕ್ಯಾಲ್ಲಕ್ಷ್ಮಣಂ ಪ್ರಿಯಕಾರಿಣಂ ।
ಉವಾಚ ಕುತ್ರ ಸ ರಥೋ ಯೇನ ಮಾಂ ಪ್ರಾಪಯಿಷ್ಯಸಿ ॥ ೫೯ ॥

ಸ ನಿಶ್ವಸನ್ರಥಂ ಹೈಮಂ ಜಾನಕ್ಯಾ ಸಹ ನಿರ್ಭರಃ ।
ಸುಮಂತ್ರಂ ಪ್ರತ್ಯುವಾಚಾಸೌ ಚಾಲಯಾಶ್ವಾನ್ಮನೋಹರಾನ್ ॥ ೬೦ ॥

ಆಹತಾಸ್ತೇನ ಕಶಯಾ ವಾಹಾಸ್ತಸ್ಯಾಪತನ್ಪಥಿ ।
ನ ಚಲಂತಿ ಯದಾ ವಾಹಾಸ್ತದಾ ಲಕ್ಷ್ಮಣಮಬ್ರವೀತ್ ॥ ೬೧ ॥

॥ ಸುಮಂತ್ರ ಉವಾಚ ॥

ಸ್ವಾಮಿಂಶ್ಚಲಂತಿ ನೋ ವಾಹಾ ಯತ್ನೇನ ಪರಿಚಾಲಿತಾಃ ।
ಕಿಂ ಕರೋಮಿ ನ ಜಾನೇಽತ್ರ ಕಾರಣಂ ವಾಹಪಾತನೇ ॥ ೬೨ ॥

ಏವಂ ಬ್ರುವಂತಂ ಪ್ರತ್ಯೂಚೇ ಲಕ್ಷ್ಮಣೋ ಗದ್ಗದಸ್ವರಃ ।
ಸಾರಥಿಂ ಧೈರ್ಯಮಾಸ್ಥಾಯ ತಾಡಯೈತಾನ್ಕಶಾದಿಭಿಃ ॥ ೬೩ ॥

ಏತಚ್ಛ್ರುತ್ವೋದಿತಂ ಯನ್ತಾ ಕಥಂಚಿಚ್ಚಾಲಯನ್ನಭೂತ್ ।
ತದಾಸ್ಫುರದ್ದಕ್ಷನೇತ್ರಂ ಜಾನಕ್ಯಾ ದುಃಖಶಂಸಕಂ ॥ ೬೪ ॥

---

೫೯. ಆತುರದಿಂದ ಅದನ್ನು ಗಮನಿಸದೆ, ಲಕ್ಷ್ಮಣನನ್ನು ಕುರಿತು ನಾವು ಹೋಗುವ ರಥವೆಲ್ಲಿ? ಎಂದಳು.

೬೦. ಸೀತೆಯು ರಥವನ್ನು ಕಂಡು ಅವುಗಳನ್ನೆಲ್ಲಾ ಇಟ್ಟಳು. ಲಕ್ಷ್ಮಣನು ರಥದಲ್ಲಿ ಆ ಚಿನ್ನದ ಪದಾರ್ಥಗಳನ್ನೂ, ಆಕೆಯನ್ನೂ ನೋಡುತ್ತ ನಿಟ್ಟುಸಿರುಬಿಡುತ್ತಾ ಸುಮಂತ್ರನನ್ನು ಕುದುರೆಗಳನ್ನು ಹೊಡಿ ಎಂದನು.

೬೧. ಸುಮಂತ್ರನು ಚಾವಟಿಯಿಂದ ಹೊಡೆಯಲು ಕುದುರೆಗಳು ದಾರಿಯಲ್ಲಿ ಬಿದ್ದುಬಿಟ್ಟವು. ಮುಂದೆ ಹೋಗಲೂ ಒಲ್ಲವು. ಆಗ ಸುಮಂತ್ರನು ಲಕ್ಷ್ಮಣನಿಗೆ ಹೇಳಿದನು.

೬೨. ಸುಮಂತ್ರನು ಹೇಳಿದನು :—ಸ್ವಾಮಿ ಪ್ರಯತ್ನಪಟ್ಟು ಹೊಡೆದರೂ ಕುದುರೆಗಳು ಹೋಗಲೊಲ್ಲವು. ಏನು ಮಾಡಲಿ? ಕುದುರೆಗಳು ಬೀಳಲು ಕಾರಣ ವೇನೆಂದು ಗೊತ್ತಾಗಲಿಲ್ಲ.

೬೩. ಹೀಗೆ ಸಾರಥಿಯು ಹೇಳಲು ಗದ್ಗದ ಸ್ವರದಿಂದ ಧೈರ್ಯವನ್ನು ಹೊಂದಿ ಚಾವಟಿ ಕೋಲು ಮುಂತಾದುವುಗಳಿಂದ ಕುದುರೆಯನ್ನು ಹೊಡಿ ಎಂದನು.

೬೪. ಇದನ್ನು ಕೇಳಿ ಸಾರಥಿಯು ಕಷ್ಟಪಟ್ಟು ನಡೆಸಿದನು. ಆಗ ಜಾನಕಿಯ ಬಲಗಣ್ಣು ಅದುರುತ್ತ ದುಃಖವನ್ನು ಸೂಚಿಸಿತು.

ತದೈವ ಹೃದಯೇ ಶೋಕಃ ಸಮುಭೂದ್ದುಃಖಶಂಸಕಃ ।
ತದೈವ ಪಕ್ಷಿಣಃ ಪುಣ್ಯಾಃ ಕುರ್ವಂತಿ ಪರಿವರ್ತನಂ ॥ ೬೫ ॥

ಏವಂ ವೀಕ್ಷ್ಯೈವ ವೈದೇಹೀ ಪ್ರತ್ಯುವಾಚಾಥ ದೇವರಂ ।
ಕಥಂ ಮೇ ತಾಪಸೀಕ್ಷಾಂ ವೈ ಯಾತುಮಿಚ್ಛೋರಘಂಕರಂ ॥ ೬೬ ॥

ರಾಮೋ ಭೂಯಾದ್ಧಿ ಕಲ್ಯಾಣಂ ಭರತೋ ವಾ ತವಾನುಜಃ ।
ತತ್ಪ್ರಜಾಸು ಚ ಸರ್ವತ್ರ ಮಾ ಭವಂತು ವಿಪರ್ಯಯಾಃ ॥ ೬೭ ॥

ಏವಂ ಬ್ರುವಂತೀಂ ಸಂವೀಕ್ಷ್ಯ ಜಾನಕೀಂ ಸ ತು ಲಕ್ಷ್ಮಣಃ ।
ನ ಕಿಂಚಿದುಕ್ತವಾನ್ರುದ್ಧಕಂಠೋ ಬಾಷ್ಪಪ್ರಪೂರಿತಃ ॥ ೬೮ ॥

ಸಾ ಗಚ್ಛಂತೀ ಮೃಗಾನ್ವಾಮಪರಿವರ್ತನಕಾರಕಾನ್ ।
ಅಪಶ್ಯದ್ದುಃಖಸಂಘಾತಕಾರಕಾನ್ ಸಮಭಾಷತ ॥ ೬೯ ॥

॥ ಜಾನಕ್ಯುವಾಚ ॥

ಅದ್ಯ ಯನ್ಮೇ ಮೃಗಾ ವಾಮಂ ವರ್ತಯನ್ತಿ ತದೀಕ್ಷತೇ ।
ಶ್ರೀರಾಮಚರಣೌ ಮುಕ್ತ್ವಾ ಗಚ್ಛನ್ತ್ಯಾ ಯುಕ್ತಮೇವ ತತ್ ॥ ೭೦ ॥

---

೬೫. ಆಗಲೇ ದುಃಖವನ್ನು ತಿಳಿಸುವ ಶೋಕವು ಹೃದಯದಲ್ಲಿ ಹುಟ್ಟಿತು. ಗರುಡನೇ ಮುಂತಾದ ಪುಣ್ಯಪಕ್ಷಿಗಳೆಲ್ಲವೂ ಅಪ್ರದಕ್ಷಿಣವಾಗಿ ಸುತ್ತಿ ಕೆಟ್ಟುದನ್ನು ಕೂಗಿದುವು.

೬೬. ಇದೆಲ್ಲವನ್ನೂ ಸೀತೆಯು ನೋಡಿ ಮೈದುನನನ್ನು ಕುರಿತು ತಾಪಸಿಯರನ್ನು ನೋಡಲು ಹೋಗುವ ನನಗೆ ಇವೆಲ್ಲವೂ ಪಾಪವನ್ನು ಹೊಗಳುತ್ತಿವೆಯಲ್ಲ? ಎಂದಳು.

೬೭. ರಾಮ, ಭರತ, ಶತ್ರುಘ್ನರಿಗೂ ಇವನ ಪ್ರಜೆಗಳಿಗೂ ಎಲ್ಲಾ ವಿಷಯದಲ್ಲಿಯೂ ಒಳ್ಳೆಯದಾಗಲಿ, ಕೆಡಕಾಗಬೇಡ.

೬೮. ಹೀಗೆ ಹೇಳುತ್ತಿರುವ ಜಾನಕಿಯನ್ನು ನೋಡಿ ಲಕ್ಷ್ಮಣನು ಕಣ್ಣೀರು ತುಂಬಿದವನಾಗಿ ಗಂಟಲು ತಡೆದುಕೊಂಡು ಏನನ್ನೂ ಹೇಳಲಾರದವನಾದನು.

೬೯. ಅವಳು ಹೋಗುತ್ತಿರುವಾಗ ಮೃಗಗಳು ಅಪಸವ್ಯವಾಗಿ ಹೋಗುತ್ತಿರುವುದನ್ನು ನೋಡಿ ಇವು ದುಃಖಸೂಚಕಗಳೆಂದು ತಿಳಿದು ಇಂತೆಂದಳು.

೭೦. ಜಾನಕಿಯು ಹೇಳಿದಳು :—ಈಗ ಮೃಗಗಳು ನನಗೆ ಅಪ್ರದಕ್ಷಿಣವಾಗಿ ಹೋಗುವುದು ಸರಿಯೇ ಶ್ರೀರಾಮನ ಚರಣಗಳನ್ನು ಬಿಟ್ಟು ಹೋಗುತ್ತಿರುವುದು ನನಗೆ ಅಯುಕ್ತವೇ ಆದ್ದರಿಂದ ಅವು ಮಾಡುವುದು ಸರಿ.

**ಮಹಿಳಾನಾಂ ಪರೋ ಧರ್ಮಃ ಸ್ವಭರ್ತೃಚರಣಾರ್ಚನಂ ।**
**ತನ್ಮುಕ್ತ್ವಾನ್ಯತ್ರ ಯಾನ್ತ್ಯಾ ಮೇ ಯುದ್ಭವೇದ್ಯುಕ್ತಮೇವ ತತ್** ॥ ೭೧ ॥

**ಏವಂ ಪಥಿ ವಿಚಾರಂ ಸಾ ಕೃತ್ವಾ ತು ಪರಮಾರ್ಥತಃ ।**
**ಜಾಹ್ನವೀ ದದೃಶೇ ದೇವ್ಯಾ ಮುನಿವೃಂದೈಕಸೇವಿತಾ** ॥ ೭೨ ॥

**ಯಸ್ಯಾಂ ಜಲಸ್ಯ ಕಲ್ಲೋಲಾ ದೃಶ್ಯಂತೇ ದುಗ್ಧಸನ್ನಿಭಾಃ ।**
**ತದಂಗೋ ದೃಶ್ಯತೇ ಯತ್ರ ಸ್ವರ್ಗಸೋಪಾನಮೂರ್ತಿಭೃತ್** ॥ ೭೩ ॥

**ಯಸ್ಯಾ ವಾರಿಕಣಸ್ಪರ್ಶಾನ್ಮಹಾಪಾತಕಸಂಚಯಃ ।**
**ಪಲಾಯತೇ ನ ಕುತ್ರಾಪಿ ಸ್ಥಾನಮೀಕ್ಷನ್ಸಮನ್ತತಃ** ॥ ೭೪ ॥

**ಗಂಗಾಂ ಪ್ರಾಪ್ಯಾಥ ಸೌಮಿತ್ರಿರ್ಜಾನಕೀಂ ಸ್ಯಂದನಸ್ಥಿತಾಂ ।**
**ಉವಾಚ ನಿರ್ಗಳದ್ಬಾಷ್ಪಸ್ಸೀತೇ ಗಚ್ಛ ತರೋರ್ಮಿಳಾಂ** ॥ ೭೫ ॥

---

೭೧. ಹೆಂಗಸರಿಗೆ ತಮ್ಮ ಪತಿಯ ಚರಣಸೇವೆಯು ಉತ್ತಮವಾದ ಧರ್ಮವು ಅದನ್ನು ಬಿಟ್ಟು ಬೇರೆ ಕಡೆ ಹೋಗುತ್ತಿರುವ ನನಗೆ ಈ ಅಪಶಕುನವು ಯುಕ್ತವೇ.

೭೨. ಈರೀತಿ ದಾರಿಯಲ್ಲಿ ಸತ್ಯವಾದ ವಿಚಾರವನ್ನು ಯೋಚಿಸುತ್ತಿರುವ ಈ ಸೀತೆಗೆ ಮುನಿಗಳಿಂದ ಸೇವಿತವಾದ ಗಂಗಾನದಿಯು ಕಂಡಿತು.

೭೩. ಅದರ ನೀರಿನಲ್ಲಿ ಪ್ರವಾಹವು ಹಾಲಿನಂತೆ ಕಾಣುತ್ತಿದ್ದಿತು. ಅಲೆಗಳು ಮೂರ್ತಿಮತ್ತಾದ ಸ್ವರ್ಗದ ಸೋಪಾನದಂತೆ ಕಾಣುತ್ತಿದ್ದುವು.

೭೪. ಆ ಜಾಹ್ನವಿಯ ನೀರಿನ ತುಂತುರುಗಳು ತಗುಲಿದರೆ ಮಹಾಪಾಪಗಳೂ ಕೂಡ ಎಲ್ಲೂ ಜಾಗ ಸಿಕ್ಕದೇ ಓಡಿ ಹೋಗುತ್ತವೆ.

೭೫. ಗಂಗೆಯು ಸಿಕ್ಕಲು ಲಕ್ಷ್ಮಣನು ರಥದಲ್ಲಿರುವ ಜಾನಕಿಯನ್ನು ಕುರಿತು ದುಃಖದಿಂದ ಸೀತೆ ಬಾ ಗಂಗೆಯನ್ನು ದಾಟು ಎಂದನು.

ಸೀತಾ ತದ್ವಾಕ್ಯಮಾಕರ್ಣ್ಯ ಕ್ಷಣಾದವತತಾರ ಸಾ ।
ಲಕ್ಷ್ಮಣೇನ ಧೃತಾ ಬಾಹೌ ಸ್ಖಲಂತೀ ಪಥಿ ಕಂಟಕೈಃ ॥ ೭೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ
ಜಾನಕ್ಯಾ ಗಂಗಾದರ್ಶನಂ ನಾಮ
ಅಷ್ಟಪಂಚಾಶತ್ತಮೋಽಧ್ಯಾಯಃ.

---

೭೬. ಸೀತೆಯು ಅವನ ಮಾತನ್ನು ಕೇಳಿ ರಥದಿಂದ ಇಳಿದಳು. ಮತ್ತು ಲಕ್ಷ್ಮಣನು ತೋಳುಗಳನ್ನು ಹಿಡಿದುಕೊಳ್ಳಲು, ಮುಗ್ಗುರಿಸುತ್ತಾ, ಕುಂಟುತ ಹೊರಟಳು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಜಾನಕಿಯು ಗಂಗೆಯನ್ನು
ನೋಡಿದಳು ಎಂಬಲ್ಲಿಗೆ ಐವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕೋನಷಷ್ಟಿತಮೋಽಧ್ಯಾಯಃ

---

॥ ಶೇಷ ಉವಾಚ ॥

ಅಥ ನಾವಾ ಸಮುತ್ತೀರ್ಯ ಜಾಹ್ನವೀಂ ಲಕ್ಷ್ಮಣಸ್ತದಾ ।
ಜಾನಕೀಂ ಪರತಸ್ತೀರೇ ಹಸ್ತೇ ಧೃತ್ವಾ ಯಯೌ ವನಂ ॥ ೧ ॥

ಸಾ ಚಲಂತೀ ಪಥಿ ತದಾ ಶುಷ್ಯದ್ವದನಲಕ್ಷಿತಾ ।
ಕಂಟಕಕ್ಷತಸತ್ಪಾದಾ ಸ್ಖಲಂತೀ ಚ ಪದೇ ಪದೇ ॥ ೨ ॥

ಲಕ್ಷ್ಮಣಸ್ತಾಂ ಮಹಾಘೋರೇ ವಿಪಿನೇ ದುಃಖದಾಯಿನಿ ।
ಪ್ರವೇಶಯಾಮಾಸ ತದಾ ರಾಘವಾಜ್ಞಾವಿಶಾರದಃ ॥ ೩ ॥

---

## ಐವತ್ತೊಂಭತ್ತನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಅನಂತರ ದೋಣಿಯಿಂದ ಲಕ್ಷ್ಮಣ ಸೀತೆಯರು ಗಂಗೆಯನ್ನು ದಾಟಿ ಆ ಕಡೆಯ ತೀರದಲ್ಲಿ ಸೀತೆಯನ್ನು ಕೈಹಿಡಿದುಕೊಂಡು ಕಾಡಿಗೆ ಹೋದನು.

೨. ಆ ಸೀತೆಯು ದಾರಿಯಲ್ಲಿ ನಡೆಯುತ್ತಾ ಒಣಗಿದ ಮುಖವುಳ್ಳವಳಾಗಿ ಕಾಣುತ್ತಿದ್ದಳು. ಮುಳ್ಳುಗಳು ಚುಚ್ಚುತ್ತಿರಲು ಹೆಜ್ಜೆ ಹೆಜ್ಜೆಗೂ ಕುಂಟುತ್ತ ಎಡವುತ್ತ ಹೋಗುತ್ತಿದ್ದಳು.

೩. ರಾಘವನ ಅಪ್ಪಣೆಯಲ್ಲಿ ನಿರತನಾದ ಆ ಲಕ್ಷ್ಮಣನು ಆಕೆಯನ್ನು ಘೋರವಾದ ಕಾಡಿನಲ್ಲಿ ಕರೆದುಕೊಂಡು ಹೋದನು.

ಯತ್ರ ವೃಕ್ಷಾ ಮಹಾಘೋರಾ ಬರ್ಬೂರಾಃ ಖದಿರಾಭವಾಃ ।
ಶ್ಲೇಷ್ಮಾತಕಾಶ್ಶಿಣೀಕಾಶ್ಚ ಶುಷ್ಕಾ ದಾವೇನ ವಹ್ನಿನಾ ॥ ೪ ॥

ಕೋಟರಸ್ಥಾ ಮಹಾಸರ್ಪಾಃ ಫೂತ್ಕುರ್ವಂತಿ ಸುಕೋಪಿತಾಃ ।
ಘೂಕಾ ಘೂತ್ಕುರ್ವತೇ ಯತ್ರ ಲೋಕಚಿತ್ತಭಯಂಕರಾಃ ॥ ೫ ॥

ವ್ಯಾಘ್ರಾಸ್ಸಿಂಹಾಃ ಸೃಗಲಾಶ್ಚ ದ್ವೀಪಿನೋಽತಿಭಯಂಕರಾಃ ।
ದೃಶ್ಯಂತೇ ಯತ್ರಾಸಹನಾ ಮನುಷ್ಯಾದಾಃ ಸುಕೋಪನಾಃ ॥ ೬ ॥

ಮಹಿಷಾಸ್ಸೂಕರಾ ದೃಷ್ಟ್ವಾ ದಂಷ್ಟ್ರಾದ್ವಯವಿಲಕ್ಷಿತಾಃ ।
ಕುರ್ವಂತಿ ಪ್ರಾಣಿನಾಂ ತಾಪಂ ಮಾನಸಸ್ಸಮದೋದ್ಧತಾಃ ॥ ೭ ॥

ತದ್ವೃಗ್ವನಂ ಪ್ರಪಶ್ಯಂತೀ ಭಯೇನೋಪಗತಜ್ವರಾ ।
ಕಂಟಕಾದಷ್ಟಚರಣಾ ಲಕ್ಷ್ಮಣಂ ವಾಕ್ಯಮಬ್ರವೀತ್ ॥ ೮ ॥

॥ ಜಾನಕ್ಯುವಾಚ ॥

ವರರ್ಷಿಮುನಿಸಂಸೇವ್ಯಾನಾಶ್ರಮಾನ್ನೇತ್ರಸೌಖ್ಯದಾನ್ ।
ನಾಹಂ ಪಶ್ಯಾಮಿ ನೋ ತೇಷಾಂ ಪತ್ನೀಶ್ಚ ಸುತಪೋಧನಾಃ ॥ ೯ ॥

---

೪. ಗೊಬ್ಬಳಿ, ಕಗ್ಗಲಿ, ಬೂರಗ, ಚೊಳ್ಳೆ, ಮೊದಲಾದ ಮರಗಳು ಇದ್ದ ಕಾಡುಕಿಚ್ಚಿನಿಂದ ಬೆಂದಕಾಡಿಗೆ ಕರೆದುಕೊಂಡು ಹೋದನು.

೫. ಪೊಟರೆಗಳಲ್ಲಿರುವ ಸರ್ಪಗಳು ಕೋಪಗೊಂಡು ಬುಸ್ಸೆನ್ನುತ್ತಿದ್ದವು. ಗೂಬೆಗಳು ಜನರಿಗೆ ಭಯಂಕರವಾಗಿ ಘೂ ಎನ್ನುತ್ತಿದ್ದುವು.

೬. ಹುಲಿ, ಸಿಂಹ, ನರಿ, ಆನೆಗಳು, ಆ ಜಾಗದಲ್ಲಿ ಭಯಂಕರವಾಗಿಯೂ ಮನುಷ್ಯರನ್ನು ತಿನ್ನುವುಗಳಾಗಿಯೂ, ಕಾಣುತ್ತಿದ್ದುವು.

೭. ಎಮ್ಮೆ, ಹಂದಿಗಳು, ಕೋರೆಹಲ್ಲುಗಳಿಂದ ಕೂಡಿ ಪ್ರಾಣಿಗಳಿಗೆ ಮನಸ್ಸಿಗೆ ದುಃಖವನ್ನುಂಟುಮಾಡುತ್ತಿರುತ್ತವೆ.

೮. ಈ ಕಾಡನ್ನು ನೋಡುತ್ತಾ ಭಯದಿಂದ ಜ್ವರಬಂದವಳಾಗಿ ಮುಳ್ಳು ಚುಚ್ಚಿಕೊಂಡು ದುಃಖಪಡುತ್ತಾ ಲಕ್ಷ್ಮಣನನ್ನು ಕುರಿತು ಇಂತೆಂದಳು.

೯. ಜಾನಕಿಯು ಹೇಳಿದಳು :—ಎಲೈ ಲಕ್ಷ್ಮಣನೇ ! ಋಷಿಗಳು ಸೇವಿಸುತ್ತಿರುವ ಆಶ್ರಮವೊಂದೂ ಕಾಣುವುದಿಲ್ಲ. ಅಲ್ಲಿರುವ ತಪೋಧನರಾಗಲಿ ಅವರ ಪತ್ನಿಯರಾಗಲಿ, ಕಾಣಿಸುವುದಿಲ್ಲವಲ್ಲ.

ಪಶ್ಯಾಮಿ ಕೇವಲಂ ಘೋರಾನ್ಪಕ್ಷಿಣಃ ಶುಷ್ಕವೃಕ್ಷಕಾನ್ ।
ದಾವಾನಲೇನ ಸರ್ವತ್ರ ದಗ್ಧ್ಯಸ್ಥಾನಮಿದಂ ವನಂ ॥ ೧೦ ॥

ತ್ವಾಂ ಚ ಪಶ್ಯಾಮಿ ದುಃಖಾರ್ತಮಶ್ರುಪೂರ್ಣಾಕುಲೇಕ್ಷಣಂ ।
ಶಕುನೇತರಸಾಹಸ್ರಂ ಭವೇನ್ಮಮ ಪದೇ ಪದೇ ॥ ೧೧ ॥

ತನ್ಮೇ ಕಥಯ ವೀರಾಗ್ರ್ಯ ಕಥಂ ಮುಕ್ತಾ ಮಹಾತ್ಮನಾ ।
ರಾಮೇಣ ದುಷ್ಟಹೃದಯಾ ಕ್ಷಿಪ್ರಂ ಕಥಯ ಮೇ ಹಿ ತತ್ ॥ ೧೨ ॥

ಇತಿ ವಾಕ್ಯಂ ಸಮಾಕರ್ಣ್ಯ ಲಕ್ಷ್ಮಣೋಽಶ್ರುಕೇಕಲಿತಃ ।
ಸಂರುದ್ಧಬಾಷ್ಪನಯನೋ ನ ಕಿಂಚಿತ್ಪ್ರೋಕ್ತವಾನ್ತದಾ ॥ ೧೩ ॥

ತದೈವಂ ವಿಪಿನಂ ಘೋರಂ ಗಚ್ಛಂತೀ ಲಕ್ಷ್ಮಣಾನ್ವಿತಾ ।
ಪುನರಪ್ಯಾಹ ತಂ ವೀರಂ ದುಃಖಾರ್ತಂ ಪಶ್ಯತೀ ಮುಖಂ ॥ ೧೪ ॥

ತದಾಪಿ ನ ಸ ತಾಂ ವಕ್ತಿ ಕಿಮಪಿ ಪ್ರೇಕ್ಷಯನ್ ಸ್ಥಿತಃ ।
ತದಾಸಾವತಿನಿರ್ಬಂಧಂ ಚಕಾರ ಪರಿಪೃಚ್ಛತೀ ॥ ೧೫ ॥

---

೧೦. ಘೋರವಾದ ಪಕ್ಷಿಗಳೂ, ಒಣಕಲು ಮರಗಳೂ, ಬೆಂಕಿಯಿಂದ ಸುಟ್ಟು ಕರಿಯಾಗಿರುವ ಪೋಟುಗಳು ಮಾತ್ರ ಇವೆ.

೧೧. ನೀನು ದುಃಖಿಸುತ್ತಿರುವಂತೆ ಕಾಣುತ್ತಿದೆ. ಕಣ್ಣುತುಂಬ ನೀರು ತುಂಬಿದೆ. ಅನೇಕ ಅಪಶಕುನಗಳು ಬಾರಿಬಾರಿಗೂ ಆಗುತ್ತಿವೆ.

೧೨. ಎಲೈ ವೀರನೇ, ಇದೇನು ಹೇಳು. ರಾಮನು ನನ್ನನ್ನು ಹೇಗೆ ಬಿಟ್ಟನು? ಅಲ್ಲೇನು ನಡೆಯಿತು. ಶೀಘ್ರವಾಗಿ ಹೇಳು.

೧೩. ಈ ಮಾತನ್ನು ಕೇಳಿ ಲಕ್ಷ್ಮಣನು ದುಃಖಗೊಂಡು ಕಣ್ಣೀರನ್ನು ತಡೆಯುತ್ತಾ ಏನೂ ಹೇಳಲಾರದೆ ಹೋದನು.

೧೪. ಲಕ್ಷ್ಮಣನ ಜೊತೆಯಲ್ಲಿ ಘೋರವಾದ ಅರಣ್ಯಕ್ಕೆ ಹೋಗುತ್ತಾ ದುಃಖದಿಂದ ಕೂಡಿದ ಲಕ್ಷ್ಮಣನ ಮುಖವನ್ನು ನೋಡುತ್ತಾ ಪುನಃ ಇಂತೆಂದಳು.

೧೫. ಆಗಲೂ ಏನೋ ನೋಡುತ್ತಿರುವವನಂತೆ ನಿಂತುಕೊಂಡು ಹೇಳದೇ ಹೋದನು. ಆಗ ಆಕೆಯು ನಿರ್ಬಂಧಮಾಡುತ್ತಾ ಕೇಳಿದಳು.

ಅಗ್ರಹೇಣ ಯದಾ ಪೃಷ್ಟೋ ಲಕ್ಷ್ಮಣಸ್ಸೀತಯಾ ತದಾ ।
ರುದ್ಧಕಂಠೋ ಮುಹುಃ ಶೋಚನ್ ಅವದತ್ತ್ಯಾಗಸಂಭವಂ ॥ ೧೬ ॥

ತದ್ವಾಕ್ಯಂ ಪವಿನಾ ತುಲ್ಯಂ ನಿಶಮ್ಯ ಮುನಿಸತ್ತಮ ।
ಸುಲತಾ ಕೃತ್ತಮೂಲೇವ ಬಭೂವಾಕಲ್ಪವರ್ಜಿತಾ ॥ ೧೭ ॥

ತತ್ರೈವ ಪೃಥಿವೀ ತಾಂ ನ ಜಗ್ರಾಹ ತನಯಾಮಿಮಾಂ ।
ರಾಮೋ ವಿಪಾಪಿನೀಂ ಸೀತಾಂ ನ ಜಹ್ಯಾದಿತಿ ಶಂಕಿನೀ ॥ ೧೮ ॥

ಪತಿತಾಂ ತಾಂ ತು ವೈದೇಹೀಂ ದೃಷ್ಟ್ವಾ ಸೌಮಿತ್ರಿರುತ್ಸುಕಃ ।
ಪಲ್ಲವಾಗ್ರಸಮೀರೇಣ ಸಂಜ್ಞಿತಾಂ ತು ಚಕಾರ ಸಃ ॥ ೧೯ ॥

ಸಂಜ್ಞಾಂ ಪ್ರಾಪ್ತಾ ಪ್ರತ್ಯುವಾಚ ಮಾ ಹಾಸ್ಯಂ ಕುರು ದೇವರ ।
ಕಥಂ ಮಾಂ ಪಾಪರಹಿತಾಂ ತ್ಯಜತೇ ಸ ರಘೂದ್ವಹಃ ॥ ೨೦ ॥

ಏವಂ ಬಹುವಿಲಪ್ಯಾಥ ಲಕ್ಷ್ಮಣಂ ದುಃಖಸಂಯುತಂ ।
ಸಂವೀಕ್ಷ್ಯ ಮೂರ್ಛಿತಾ ಭೂಮೌ ಪಪಾತ ಪರಿದುಃಖಿತಾ ॥ ೨೧ ॥

---

೧೬. ಬಲಾತ್ಕಾರದಿಂದ ಕೇಳಲು ಆಗ ಬಿಕ್ಕಳಿಸುತ್ತಾ ರಾಮನು ಬಿಟ್ಟಿರುವ ವಿಷಯವನ್ನು ಹೇಳಿದನು.

೧೭. ಆ ವಾಕ್ಯವು ವಜ್ರಾಯುಧಕ್ಕೆ ಸಮಾನವಾಗಿರಲು ಬುಡವನ್ನು ಕಿತ್ತಬಳ್ಳಿ ಯಂತೆ ಕಾಂತಿಹೀನಳಾದಳು.

೧೮. ರಾಮನು ಪಾಪರಹಿತಳಾದ ಸೀತೆಯನ್ನು ಬಿಡಲಾರನೆಂದು ಆಗಲೇ ಭೂಮಿಯು ಸೀತೆಯನ್ನು ಕರೆದುಕೊಳ್ಳಲಿಲ್ಲ.

೧೯. ವೈದೇಹಿಯು ಮೂರ್ಛೆಬೀಳಲು ಲಕ್ಷ್ಮಣನು ಚಿಗುರಿನಿಂದ ಬೀಸಿ ಜ್ಞಾನ ಬರುವಂತೆ ಮಾಡಿದನು.

೨೦. ಜ್ಞಾನಬಂದನಂತರ ಎಲೈ ಮೈದುನನೇ! ಹಾಸ್ಯಮಾಡಬೇಡ ನಿಷ್ಪಾಪ ಳಾದ ನನ್ನನ್ನು ರಾಮನು ಹೇಗೆ ಬಿಡುವನು ? ಎಂದಳು.

೨೧. ಹೀಗೆ ಬಹುವಾಗಿ ಅತ್ತುಗೊಂಡಿರುವ ಲಕ್ಷ್ಮಣನನ್ನು ನೋಡಿ ಪುನಃ ದುಃಖದಿಂದ ಕೆಳಗೆ ಬಿದ್ದಳು.

ಮುಹೂರ್ತೇನಾಪಿ ಸಂಜ್ಞಾಂ ಸಾ ಪ್ರಾಪ್ಯ ದುಃಖಪರಿಪ್ಲುತಾ ।
ಜಗಾದ ರಾಮಚರಣೌ ಸ್ಮರಂತೀ ಶೋಕವಿಹ್ವಲಾ ॥ ೨೨ ॥

॥ ಜಾನಕ್ಯುವಾಚ ॥

ರಘುನಾಥೋ ಮಹಾಬುದ್ಧಿಸ್ತ್ಯಜತೇ ಮಾಂ ಕಥಂ ಮಹಾನ್ ।
ಯೋ ಮದರ್ಥೇ ಪಯೋರಾಶಿಂ ತೀರ್ಣವಾನ್ವಾನರೈಸ್ಸಹ ॥ ೨೩ ॥

ಸ ಕಥಂ ಮಾಂ ಮಹಾವೀರೋ ನಿಷ್ಪಾಪಾಂ ರಜಕೋಕ್ತಿತಃ ।
ತ್ಯಜಿಷ್ಯತಿ ಮನ್ಯೇವಾತ್ರ ದೈವಂ ತು ಪ್ರತಿಕೂಲಿತಂ ॥ ೨೪ ॥

ಏವಂ ವದಂತೀ ಪುನರಪಿ ಮೂರ್ಛಾಂ ಪ್ರಾಪ್ತಾ ವಿದೇಹಜಾ ।
ಮೂರ್ಛಿತಾಂ ತಾಂ ಸಮೀಕ್ಷ್ಯಾಯಂ ರುರೋದ ವಿಕೃತಸ್ವರಃ ॥ ೨೫ ॥

ಪುನಸ್ಸಂಜ್ಞಾಮವಾಪ್ಯೈವಂ ಸೌಮಿತ್ರಿಂ ನಿಜಗಾದ ಸಾ ।
ದುಃಖಾತುರಂ ವೀಕ್ಷ್ಯಮಾಣಾ ರುದ್ಧಕಂಠಂ ಸುದುಃಖಿತಾ ॥ ೨೬ ॥

ಸೌಮಿತ್ರೇ ಗಚ್ಛ ರಾಮಂ ತ್ವಂ ಧರ್ಮಮೂರ್ತಿಂ ಯಶೋನಿಧಿಂ ।
ಮದ್ವಾಕ್ಯಮೇಕಮಾಬ್ರೂಯಾಃ ಸಮಕ್ಷಂ ತಪಸಾಂ ನಿಧೇಃ ॥ ೨೭ ॥

---

೨೨. ಕೊಂಚಹೊತ್ತಿನಮೇಲೆ ಜ್ಞಾನವನ್ನು ಹೊಂದಿ ರಾಮನ ಚರಣಗಳನ್ನು ಸ್ಮರಿಸುತ್ತ ದುಃಖದಿಂದ ಇಂತೆಂದಳು.

೨೩. ರಾಮನು ಮಹಾಬುದ್ಧಿವಂತನು. ನನ್ನನ್ನು ಬಿಡುವುದಿಲ್ಲ. ನನಗೋಸ್ಕರವೇ ಕಪಿಸೈನ್ಯಗಳನ್ನು ಕಟ್ಟಿಕೊಂಡು ಸಮುದ್ರವನ್ನು ದಾಟಿರುವನಲ್ಲ.

೨೪. ಅಂತಹವನು ಒಬ್ಬ ರಜಕನ (ಅಗಸನ) ಮಾತಿನಿಂದ ನನ್ನನ್ನು ಬಿಡುವುದಿಲ್ಲ. ಒಂದು ವೇಳೆ ಬಿಟ್ಟಿದ್ದರೆ ದೈವವು ನನ್ನ ವಿಷಯದಲ್ಲಿ ಪ್ರತಿಕೂಲವಾಗಿದೆ.

೨೫. ಹೀಗೆ ಹೇಳುತ್ತಾ ಮತ್ತೆ ಮೂರ್ಛಿತಳಾದಳು. ಈಕೆಯು ಮೂರ್ಛೆ ಹೊಂದಿದುದನ್ನು ನೋಡಿ ಲಕ್ಷ್ಮಣನು ಗಟ್ಟಿಯಾಗಿ ಅತ್ತನು.

೨೬. ಪುನಃ ಜ್ಞಾನಹೊಂದಿ ಲಕ್ಷ್ಮಣನು ದುಃಖಗೊಂಡಿರುವುದನ್ನು ನೋಡಿ ದುಃಖದಿಂದ ಇಂತೆಂದಳು.

೨೭. ಎಲೈ ಸೌಮಿತ್ರಿಯೇ ಧರ್ಮಮೂರ್ತಿಯೂ, ಯಶಸ್ವಿಯೂ ಆದ ರಾಮನ ಬಳಿಗೆ ಹೋಗು. ತಪಸ್ವಿಗಳೆದುರಿಗೆ ನನ್ನ ಒಂದು ಮಾತನ್ನು ಹೇಳು.

ಮಾಂ ತತ್ಯಾಜ ಭವಾನ್ ಯದ್ವೈ ಜಾನನ್ನಪಿ ವಿಪಾಪಿನೀಂ ।
ಕುಲಸ್ಯ ಸದೃಶಂ ಕಿಂ ವಾ ಶಾಸ್ತ್ರಜ್ಞಾನಸ್ಯ ತತ್ಫಲಂ ॥ ೨೮ ॥

ನಿತ್ಯಂ ತವ ಪದೇ ರಕ್ತಾಂ ತದುಚ್ಛಿಷ್ಟಭುಜಂ ಹಿ ಮಾಂ ।
ಭವಾಂಸ್ತತ್ಯಾಜ ತತ್ಸರ್ವಂ ಮಮ ದೈವಂ ತು ಕಾರಣಂ ॥ ೨೯ ॥

ಕಲ್ಯಾಣಂ ತವ ಸರ್ವತ್ರ ಭೂಯಾದ್ವೀರವರೋತ್ತಮ ।
ಅಹಂ ತಾವದ್ವನೇ ತ್ವಾಂ ಹಿ ಸ್ಮರಂತೀ ಪ್ರಾಣಧಾರಿಕಾ ॥ ೩೦ ॥

ಮನಸಾ ಕರ್ಮಣಾ ವಾಚಾ ಭವಾನೇವ ಮಮೋತ್ತಮಃ ।
ಅನ್ಯೇ ತುಚ್ಛೀಕೃತಾಸ್ಸರ್ವೇ ಮನಸಾ ರಘುವಂಶಜ ॥ ೩೧ ॥

ಭವೇ ಭವೇ ಭವಾನೇವ ಪತಿರ್ಭೂಯಾನ್ಮಹೇಶ್ವರ ।
ತ್ವತ್ಪಾದಸ್ಮರಣಾನೇಕಹತಪಾಪಾ ಸತೀಶ್ವರೀ ॥ ೩೨ ॥

ಶ್ವಶ್ರೂಜನಂ ವದೇತ್ಸರ್ವಂ ಮತ್ಸಂದೇಶಂ ರಘೂತ್ತಮ ।
ತ್ಯಕ್ತ್ವಾ ವನೇ ಮಹಾಘೋರೇ ರಾಮೇಣ ನಿರಘಾ ಸತೀ ॥ ೩೩ ॥

---

೨೮. ಪಾಪರಹಿತಳಾದ ನನ್ನನ್ನು ಬಿಟ್ಟೆಯಲ್ಲ. ನಿನ್ನ ಕುಲಕ್ಕೆ ಯೋಗ್ಯ ವಾದುದೇ ? ನೀನು ಅಧ್ಯಯನಮಾಡಿದ ಶಾಸ್ತ್ರಜ್ಞಾನಕ್ಕೆ ಇದು ಫಲವೇ ?

೨೯. ನಾನು ಯಾವಾಗಲೂ ನಿನ್ನ ಪಾದಗಳಲ್ಲಿಯೇ ಆಸೆಯುಳ್ಳವಳು. ನೀನು ಉಂಡ ಮಿಕ್ಕ ಎಂಜಲನ್ನು ತಿನ್ನುವವಳು. ಅಂತಹವರಲ್ಲೂ ಬಿಟ್ಟಿರುವೆಯಲ್ಲ. ಇದಕ್ಕೆ ನನ್ನ ದುರದೃಷ್ಟವೇ ಕಾರಣವು.

೩೦. ಎಲೈ ವೀರನೇ! ನಿನಗೆ ಎಲ್ಲಾ ವಿಷಯದಲ್ಲಿಯೂ ಒಳ್ಳೆಯದಾಗಲಿ ನಾನು ನಿನ್ನನ್ನು ವನದಲ್ಲಿಯೂ ಕೂಡ ಸ್ಮರಿಸುತ್ತಾ ಪ್ರಾಣದಿಂದಿರುತ್ತೇನೆ.

೩೧. ಮನೋವಾಕ್ಕಾಯಗಳಿಂದ ನೀನೇ ನನಗೆ ಉತ್ತಮನು. ಇತರರು ತುಚ್ಛರು.

೩೨. ಜನ್ಮಜನ್ಮಕ್ಕೂ ಎಲೈ ರಾಮನೇ ನೀನೇ ಗಂಡನಾಗು. ನಿನ್ನ ಪಾದ ಸ್ಮರಣದಿಂದ ಸರ್ವ ಪಾಪಗಳನ್ನೂ ಹಾಳುಮಾಡಿಕೊಳ್ಳುತ್ತೇನೆ. ಮತ್ತು ಪತಿವ್ರತೆಯ ರಲ್ಲಿ ಉತ್ತಮಳಾಗುತ್ತೇನೆ.

೩೩-೩೪. ಅತ್ತೆಯರಿಗೆ ಎಲ್ಲವನ್ನೂ ಹೇಳು. ಪಾಪವಿಲ್ಲದಿದ್ದರೂ ರಾಮನು ಕಾಡಿನಲ್ಲಿ ಬಿಟ್ಟಿರುತ್ತಾನೆ. ಈ ದುಷ್ಟಮೃಗಗಳಿರುವ ಕಾಡಿನಲ್ಲಿಯೇ ನಿಮ್ಮ ಪಾದ

ಸ್ಮರಾಮಿ ಚರಣೌ ಯುಷ್ಮದ್ವನೇ ಮೃಗಗಣೈರ್ಯುತೇ ।
ಅಂತರ್ವತ್ನೀ ವನೇ ತ್ಯಕ್ತ್ವಾ ರಾಮೇಣ ಸುಮಹಾತ್ಮನಾ ॥ ೩೪ ॥

ಸೌಮಿತ್ರೇ ಶೃಣು ಮದ್ವಾಕ್ಯಂ ಭದ್ರಂ ಭೂಯಾದ್ರಘೂತ್ತಮೇ ।
ಇದಾನೀಂ ಸಂತ್ಯಜೇ ಪ್ರಾಣಾನ್ರಾಮವೀರ್ಯಂ ಸುರಕ್ಷತೀ ॥ ೩೫ ॥

ತ್ವಂ ರಾಮವಚನಂ ತಥ್ಯಂ ಯತ್ಕರೋಷಿ ಶುಭಂ ತವ ।
ಪರತಂತ್ರೇಣ ತತ್ಕಾರ್ಯಂ ರಾಮಪಾದಾಬ್ಜಸೇವಿನಾ ॥ ೩೬ ॥

ಗಚ್ಛ ತ್ವಂ ರಾಮಸವಿಧೇ ಶಿವಾಃ ಪಂಥಾನ ಏವ ತೇ ।
ಮಮೋಪರಿ ಕೃಪಾ ಕಾರ್ಯಾ ಸ್ಮರ್ತವ್ಯಾಹಂ ಕದಾ ಕದಾ ॥ ೩೭ ॥

ಇತ್ಯುಕ್ತ್ವಾ ಮೂರ್ಛಿತಾ ಭೂಮೌ ಪಪಾತ ಪುರತಸ್ತತಃ ।
ಲಕ್ಷ್ಮಣೋ ದುಃಖಮಾಪೇದೇ ವೀಕ್ಷ್ಯ ಮೂರ್ಛಿತಜಾನಕೀಂ ॥ ೩೮ ॥

---

ಗಳನ್ನು ಸ್ಮರಿಸುತ್ತಿರುತ್ತೇನೆ. ಆದರೆ ನಾನು ಗರ್ಭಿಣಿಯಾಗಿದ್ದರೂ ಕನಿಕರಕ್ಕೆ ಪಾತ್ರಳಾದರೂ ರಾಮನು ಈಗ ಕಾಡಿನಲ್ಲಿ ಬಿಟ್ಟಿದ್ದಾನೆ.

೩೫. ಎಲೈ ಲಕ್ಷ್ಮಣನೇ, ನನ್ನ ಮಾತನ್ನು ಕೇಳು. ರಾಮನಿಗೆ ಮಂಗಳವಾಗಲಿ. ರಾಮನ ವೀರ್ಯವು ನನ್ನಲ್ಲಿರುವುದರಿಂದ ಪ್ರಾಣಗಳನ್ನು ಈಗ ಬಿಡುವುದಿಲ್ಲ.

೩೬. ನೀನು ರಾಮನ ಆಜ್ಞೆಯನ್ನು ಮಾಡಿದುದು ಯುಕ್ತವಾಗಿದೆ ಒಳ್ಳೆಯದು. ರಾಮಪಾದಸೇವಕನಾಗಿ ನೀನು ಪರಾಧೀನನಾಗಿದ್ದೀಯೆ. ಆದ್ದರಿಂದ ಹೀಗೆ ಮಾಡಬೇಕು.

೩೭. ನೀನು ರಾಮನ ಬಳಿಗೆ ಹೋಗು. ನಿನಗೆ ದಾರಿಯಲ್ಲಿ ಒಳ್ಳೆಯದಾಗಲಿ ನನ್ನ ಮೇಲೆ ಕೃಪೆಯಿರಲಿ. ಆಗಾಗ್ಗೆ ನನ್ನನ್ನು ಜ್ಞಾಪಿಸಿಕೋ.

೩೮. ಇಂತೆಂದು ಹೇಳಿ ಜಾನಕಿಯು ಮೂರ್ಛಿತಳಾಗಿ ಕೆಳಗೆ ಬಿದ್ದಳು. ಹೀಗೆ ಮೂರ್ಛೆಹೊಂದಿ ನೆಲದಲ್ಲಿ ಬಿದ್ದಿರುವ ಜಾನಕಿಯನ್ನು ನೋಡಿ ಲಕ್ಷ್ಮಣನು ದುಃಖಪಟ್ಟನು.

ನೀಜಯಾಮಾಸ ವಾಸೋಗ್ರೈಃ ಸಂಜ್ಞಾಂ ಪ್ರಾಪ್ತಾಂ ಪ್ರಣಮ್ಯ ಚ ।
ಸೌಮಿತ್ರಿಸ್ತಾಂತ್ವಯಾಮಾಸ ವಚನೈರ್ಮಧುರೈರ್ಮೃದುಃ ॥ ೩೯ ॥

॥ ಲಕ್ಷ್ಮಣ ಉವಾಚ ॥

ಏಷ ಗಚ್ಛಾಮಿ ರಾಮಂ ವೈ ಗತ್ವಾ ಶಂಸಾಮಿ ಸರ್ವಶಃ ।
ಸಮೀಪೇ ತೇ ಮುನೇರಸ್ತಿ ವಾಲ್ಮೀಕೇರಾಶ್ರಮೋ ಮಹಾನ್ ॥ ೪೦ ॥

ಇತ್ಯುಕ್ತ್ವಾ ತಾಂ ಪರಿಕ್ರಮ್ಯ ದುಃಖಿತೋ ಬಾಷ್ಪಪೂರಿತಃ ।
ಮುಂಚನ್ನಶ್ರುಕಲಾ ದುಃಖಾದ್ಯಯೌ ರಾಮಂ ಮಹೀಪತಿಂ ॥ ೪೧ ॥

ಜಾನಕೀ ದೇವರಂ ಯಾತಂ ವೀಕ್ಷ್ಯ ವಿಸ್ಮಿತಲೋಚನಾ ।
ಹಸತ್ಯಯಂ ಮಹಾಭಾಗೋ ಲಕ್ಷ್ಮಣೋ ದೇವರೋ ಮಮ ॥ ೪೨ ॥

ಕಥಂ ಮಾಂ ಪ್ರಾಣತಶ್ರೇಷ್ಠಾಂ ವಿಪಾಪಾಂ ರಾಘವಸ್ತ್ಯಜೇತ್ ।
ಇತಿ ಸಂಚಿಂತಯಂತೀ ಸಾ ತಮ್ಮೈಕ್ಷದನಿಮೇಕ್ಷಣಾ ॥ ೪೩ ॥

ಜಾಹ್ನವೀಂ ಸರ್ವಥೋತ್ತೀರ್ಣಾಂ ಜ್ಞಾತ್ವಾ ಸತ್ಯಂ ಸ್ವಹಾಪನಂ ।
ಪತಿತಾ ಪ್ರಾಣಸಂದೇಹಂ ಪ್ರಾಪ್ತಾ ಮೂರ್ಛಾಪಿ ತಾಂ ತದಾ ॥ ೪೪ ॥

---

೩೯. ಆಗ ಲಕ್ಷ್ಮಣನು ಬಟ್ಟೆ ಸೆರಗಿನಿಂದ ಬೀಸಲು ಜ್ಞಾನಬಂದಿತು. ಆಗ ಲಕ್ಷ್ಮಣನು ನಮಸ್ಕರಿಸಿ ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿದನು.

೪೦. ಇಗೋ, ಈಗ ನಾನು ರಾಮನ ಬಳಿಗೆ ಹೋಗುತ್ತೇನೆ. ಹೋಗಿ ಎಲ್ಲವನ್ನೂ ಹೇಳುತ್ತೇನೆ. ಇಲ್ಲಿ ಹತ್ತಿರದಲ್ಲಿಯೇ ವಾಲ್ಮೀಕಿಯ ಆಶ್ರಮವಿದೆ.

೪೧. ಹೀಗೆಂದು ಹೇಳಿ ಆಕೆಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ದುಃಖದಿಂದ ಕಣ್ಣೀರು ಸುರಿಸುತ್ತಾ ರಾಮನ ಬಳಿಗೆ ಹೊರಟನು.

೪೨-೪೩. ಮೈದುನನು ಹೋಗುತ್ತಲೂ ಸೀತೆಯು ಆಶ್ಚರ್ಯಗೊಂಡು ಈ ಲಕ್ಷ್ಮಣನು ನನ್ನನ್ನು ಹಾಸ್ಯಮಾಡುತ್ತಿರಬಹುದೇ? ಪಾಪರಹಿತಳಾದ ನನ್ನನ್ನು ರಾಮನು ಬಿಡುವುದೆಂದರೇನು ? ಎನ್ನುತ್ತ ಲಕ್ಷ್ಮಣನನ್ನೇ ಬರುತ್ತಾನೆಂದ ನಿರೀಕ್ಷಿಸುತ್ತಿದ್ದಳು.

೪೪. ಲಕ್ಷ್ಮಣನು ಗಂಗಾನದಿಯನ್ನು ದಾಟಿದ ಮೇಲೆ ನಿಶ್ಚಯವಾಗಿಯೂ ನನ್ನನ್ನು ಬಿಟ್ಟುಬಿಟ್ಟನು ಎಂದು ತಿಳಿದು ಪ್ರಾಣಸಂದೇಹವನ್ನು ಹೊಂದಿ ಮೂರ್ಛೆ ಹೊಂದಿದಳು.

ತದಾ ಹಂಸಾಃ ಸ್ವಪಕ್ಷಾಭ್ಯಾಂ ಜಲಮಾನೀಯ ಸರ್ವತಃ ।
ಸಿಷುಚುರ್ಮಧುರೋ ವಾಯುರ್ವವೌ ಪುಷ್ಪಸುಗಂಧವಾನ್ ॥ ೪೫ ॥

ಕರಿಣಃ ಪುಷ್ಕರೈಸ್ಸ್ವೀಯೈರ್ಜಲಪೂರ್ಣೈಸ್ಸಮಸ್ತತಃ ।
ವ್ಯಾಪ್ತಂ ಶರೀರಂ ರಜಸಾ ಕ್ಷಾಳಯಂತ ಇವಾಗತಾಃ ॥ ೪೬ ॥

ಮೃಗಾಸ್ತದಂತಿಕೇ ಪ್ರಾಪ್ಯ ಸಂತಸ್ಥುರ್ವಿಸ್ಮಿತೇಕ್ಷಣಾಃ ।
ನಗಾಃ ಪುಷ್ಪಯಿತಾ ಆಸನ್ ತತ್ಕಾಲಂ ಮಧುನಾ ವಿನಾ ॥ ೪೭ ॥

ಏತಸ್ಮಿನ್ಸಮಯೇ ವೃತ್ತೇ ಸಂಜ್ಞಾಂ ಪ್ರಾಪ್ಯ ತದಾ ಸತೀ ।
ವಿಲಲಾಪ ಮುಹುರ್ದುಃಖಾದ್ರಾಮ ರಾಮೇತಿ ಜಲ್ಪತೀ ॥ ೪೮ ॥

ಹಾ ನಾಥ ದೀನಬಂಧೋ ಹೇ ಕರುಣಾಪಯಸಾಂ ನಿಧೇ ।
ಅಪರಾಧಾದೃತೇ ಮಾಂ ತ್ವಂ ಕಥಂ ತ್ಯಜಸಿ ವೈ ವನೇ ॥ ೪೯ ॥

ಇತ್ಯೇವಮಾದಿ ಭಾಷಂತೀ ವಿಲಪಂತೀ ಮುಹುರ್ಮುಹುಃ ।
ಇತಸ್ತತಃ ಪ್ರಪಶ್ಯಂತೀ ಸಂಮೂರ್ಛಂತೀ ಪುನಃ ಪುನಃ ॥ ೫೦ ॥

---

೪೫. ಆಗ ಹಂಸಗಳು ತಮ್ಮ ರೆಕ್ಕೆಗಳಿಂದ ಬೀಸಿದುವು. ನೀರನ್ನು ತಂದು ಚುಮುಕಿಸಿದುವು. ಗಾಳಿಯು ತಣ್ಣಗೆ ಬೀಸಿತು. ಅದು ಸುವಾಸನೆಯಿಂದ ಕೂಡಿದ್ದಿತು.

೪೬. ಆನೆಗಳು ಸೊಂಡಲಿನ ತುದಿಯಿಂದ ನೀರನ್ನು ತುಂಬಿತಂದು ಧೂಳಿನಿಂದ ಕೂಡಿರುವ ಶರೀರವನ್ನು ತೊಳೆಯಲೋ ಎಂಬಂತೆ ಬಂದವು.

೪೭. ಮೃಗಗಳು ಬಂದು ಆಶ್ಚರ್ಯಗೊಂಡು ಆಕೆಯ ಸುತ್ತಲೂ ಆಶ್ಚರ್ಯದಿಂದ ನಿಂತುವು. ವಸಂತಋತುವಲ್ಲದಿದ್ದರೂ ಮರಗಳು ಹೂಬಿಟ್ಟುವು.

೪೮. ಈ ಸಮಯದಲ್ಲಿ ಜ್ಞಾನ ಬಂದು ಆಕೆಯು ರಾಮ ರಾಮ ಎಂದು ಹೇಳುತ್ತಾ ದುಃಖಿಸುತ್ತಿದ್ದಳು.

೪೯. ಹಾ ನಾಥನೇ! ದೀನಬಂಧುವೇ, ಕರುಣಾನಿಧಿಯೇ, ತಪ್ಪಿಲ್ಲದೇ ನನ್ನನ್ನು ಕಾಡಿನಲ್ಲೇಕೆ ಬಿಟ್ಟೆ?

೫೦ ಇದೇ ಮುಂತಾಗಿ ಇನ್ನೂ ಹೇಳುತ್ತಾ ಇತ್ತಲಾಗಿ ಅತ್ತಲಾಗಿ ನೋಡುತ್ತಾ ಬಾರಿ ಬಾರಿಗೂ ಮೂರ್ಛೆಹೋದಳು.

ತದಾ ಸ್ವಶಿಷ್ಯೈರ್ಭಗವಾನ್ವಾಲ್ಮೀಕಿಸ್ಸಂಗತೋ ವನಂ ।
ಶುಶ್ರಾವ ರುದಿತಂ ತತ್ರ ಕರುಣಾಸ್ವರಭಾಷಿತಂ ॥ ೫೧ ॥

ಶಿಷ್ಯಾನ್ಪ್ರತಿ ಜಗಾದಾಥ ಪಶ್ಯಂತು ವನಮಧ್ಯತಃ ।
ಕೋ ರೋದಿತಿ ಮಹಾಘೋರೇ ವಿಪಿನೇ ದುಃಖಿತಸ್ಸ್ವರಃ ॥ ೫೨ ॥

ತೇ ಪ್ರಯುಕ್ತಾಸ್ತು ಮುನಿನಾ ಸಂಜಗ್ಮುರ್ಯತ್ರ ಜಾನಕೀ ।
ರಾಮ ರಾಮೇತಿ ಭಾಷಂತೀ ಬಾಷ್ಪಪ್ಲಾವಪರಿಪ್ಲುತಾ ॥ ೫೩ ॥

ತಾಂ ದೃಷ್ಟ್ವಾ ಸ್ತ್ರಿಯಮೌತ್ಸುಕ್ಯಾದ್ವಾಲ್ಮೀಕಿಂ ಪ್ರತ್ಯಗುರ್ಮುನಿಂ ।
ಶ್ರುತ್ವಾ ತದೀರಿತಂ ವಾಕ್ಯಂ ಜಗಾಮಾಸೌ ತತೋ ಮುನಿಂ ॥ ೫೪ ॥

ದೃಷ್ಟ್ವಾಸೌ ತಪಸಾಂ ರಾಶಿಂ ಜಾನಕೀ ಪತಿದೇವತಾ ।
ನಮೋಽಸ್ತು ಮುನಯೇ ವೇದಮೂರ್ತಯೇ ವ್ರತವಾರ್ಧಯೇ ॥ ೫೫ ॥

ಇತ್ಯುಕ್ತವತೀಂ ವೈ ಸೀತಾಮಾಶೀರ್ಭಿರಭ್ಯನಂದಯತ್ ।
ಭರ್ತ್ರಾ ಸಹ ಚಿರಂ ಜೀವ ಪುತ್ರೌ ಪ್ರಾಪ್ನುಹಿ ಶೋಭನೌ ॥ ೫೬ ॥

---

೫೧. ಆಗ ಶಿಷ್ಯರೊಡನೆ ವಾಲ್ಮೀಕಿಯು ಈ ಅಳುವಿಕೆಯ ಶಬ್ದವನ್ನು ಕೇಳಿದನು.

೫೨. ಆಗ ಆ ವಾಲ್ಮೀಕಿ ಅಲ್ಲಿಗೆ ಬಂದು ಕಾಡಿನ ಮಧ್ಯದಲ್ಲಿ ಯಾರು ಅಳುತ್ತಿದ್ದಾರೆ. ನೋಡಿರಿ ಎಂದು ಶಿಷ್ಯರಿಗೆ ಹೇಳಿದನು.

೫೩. ಅನಂತರ ಶಿಷ್ಯರು ರಾಮನನ್ನು ಸ್ಮರಿಸುತ್ತಾ ದುಃಖಿಸುತ್ತಿರುವ ಜಾನಕಿಯ ಬಳಿಗೆ ಹೋದರು.

೫೪. ಆ ಹೆಂಗಸನ್ನು ಶಿಷ್ಯರು ನೋಡಿ, ಅವಳು ಆಡುತ್ತಿರುವ ಮಾತುಗಳನ್ನು ಕೇಳಿ ಋಷಿಗೆ ಹೇಳಲು, ಆ ವಾಲ್ಮೀಕಿಯು ಅಲ್ಲಿಗೆ ಹೋದನು.

೫೫. ಪತಿದೇವತೆಯಾದ ಜಾನಕಿಯು ತಪೋರಾಶಿಯಾದ ಈತನನ್ನು ನೋಡಿ ವೇದಮೂರ್ತಿಯೂ, ವ್ರತಸಾಗರನೂ ಆದ ಮುನಿಗೆ ನಮಸ್ಕಾರವೆಂದಳು.

೫೬. ಸೀತೆಯು ಹೀಗೆನ್ನಲು ಗಂಡನೊಡನೆ ಬಹುಕಾಲ ಬಾಳು. ಇಬ್ಬರು ಉತ್ತಮರಾದ ಮಕ್ಕಳನ್ನು ಪಡೆ ಎಂದು ಆಶೀರ್ವದಿಸಿದನು.

ಕಾಸಿ ತ್ವಂ ಕಿಂ ವನೇ ಘೋರೇ ಸಂಗತಾಸಿ ಕಿಮೀದೃಶೀ ।
ಸರ್ವಂ ಮೇ ಶಂಸ ಜಾನೀಯಾಂಸ್ತವ ದುಃಖಸ್ಯ ಕಾರಣಂ ॥ ೫೭ ॥

ತದಾ ಸಾ ಪ್ರತ್ಯುವಾಚೇಮಂ ರಾಮಸ್ಯ ಮಹಿಳಾ ಮುನಿಂ ।
ನಿಶ್ವಸಂತೀ ಕರುಣಯಾ ಗಿರಾ ಸಂಜಾತವೇಪಥುಃ ॥ ೫೮ ॥

ಶೃಣು ಮೇ ವಾಕ್ಯಮರ್ಥೋಕ್ತಂ ಸರ್ವದುಃಖಸ್ಯ ಕಾರಣಂ ।
ಜಾನೀಹಿ ಮಾಂ ಭೂಮಿಪತೇ ರಘುನಾಥಸ್ಯ ಸೇವಿಕಾಂ ॥ ೫೯ ॥

ಅಪರಾಧಂ ವಿನಾ ತ್ಯಕ್ತಾಂ ನ ಜಾನೇ ತತ್ರ ಕಾರಣಂ ।
ಲಕ್ಷ್ಮಣೋ ಮಾಂ ವಿಮುಚ್ಯಾತ್ರ ಗತವಾನ್ರಾಘವಾಜ್ಞಯಾ ॥ ೬೦ ॥

ಇತ್ಯುಕ್ತ್ವಾಶ್ರುಕಳಾಪೂರ್ಣಾಂ ಬಿಭ್ರತೀಂ ಮುಖಪಂಕಜಂ ।
ವಾಲ್ಮೀಕಿಃ ಸಾಂತ್ವಯನ್ಪ್ರಾಹ ಜಾನಕೀಂ ಕಮಲೇಕ್ಷಣಾಂ ॥ ೬೧ ॥

॥ ವಾಲ್ಮೀಕಿರುವಾಚ ॥

ವಾಲ್ಮೀಕಿಂ ಮಾಂ ವಿಜಾನೀಹಿ ಪಿತುಸ್ತವ ಗುರುಂ ಮುನಿಂ ।
ದುಃಖಂ ಮಾ ಕುರು ವೈದೇಹೀ ಹ್ಯಾಗಚ್ಛ ಮಮ ಚಾಶ್ರಮಂ ॥ ೬೨ ॥

---

೫೭. ನೀನಾರು? ಈ ಕಾಡಿನಲ್ಲಿ ಹೀಗೇಕೆ ಅಳುತ್ತಿದ್ದೀಯೆ? ಎಲ್ಲವನ್ನೂ ಹೇಳು. ನಿನ್ನ ದುಃಖಕ್ಕೆ ಕಾರಣವೇನೆಂಬುದನ್ನು ತಿಳಿಯುತ್ತೇನೆ.

೫೮. ಆಗ ಸೀತೆಯು ದುಃಖದಿಂದ ನಡುಗುತ್ತಾ ಹೇಳಿದಳು.

೫೯. ನನ್ನ ಮಾತನ್ನು ಕೇಳು ನನ್ನ ದುಃಖಕ್ಕೆ ಕಾರಣವನ್ನು ಹೇಳುತ್ತೇನೆ. ನನ್ನನ್ನು ಶ್ರೀರಾಮಚಂದ್ರನ ಸೇವಕಳೆಂದು ತಿಳಿ.

೬೦. ತಪ್ಪಿಲ್ಲದೇ ನನ್ನನ್ನು ಬಿಟ್ಟಿದ್ದಾನೆ. ನನಗೆ ಕಾರಣವು ಗೊತ್ತಿಲ್ಲ. ಲಕ್ಷ್ಮಣನು ನನ್ನನ್ನು ಇಲ್ಲಿ ಬಿಟ್ಟು ರಾಮನ ಆಜ್ಞೆಯಂತೆ ಹೊರಟುಹೋದನು.

೬೧. ಹೀಗೆಂದು ಹೇಳಿ ಅಳಲು ಮೊದಲಿಟ್ಟಳು. ವಾಲ್ಮೀಕಿಯು ಆಕೆಯನ್ನು ಸಂತೈಸಿದನು.

೬೨. ವಾಲ್ಮೀಕಿಯು ಹೇಳಿದನು:—ನಾನು ವಾಲ್ಮೀಕಿಯೆಂಬ ಋಷಿಯು. ನಾನು ನಿನ್ನ ತಂದೆಯಾದ ಜನಕನಿಗೆ ಗುರುವು. ದುಃಖಿಸಬೇಡ. ನನ್ನ ಆಶ್ರಮಕ್ಕೆ ಬಾ.

ಭಿನ್ನಸ್ಥಾನೇ ಪಿತುರ್ಗೇಹಂ ಜಾನೀಹಿ ಪತಿದೇವತೇ ।
ಈದೃಶೇ ಕರ್ಮಣಿ ಮಮ ರೋಷೋಽಸ್ತ್ಯೇವ ಮಹೀಪತೇಃ ॥ ೬೩ ॥

ಏವಂ ವಚನಮಾಕರ್ಣ್ಯ ಜಾನಕೀ ಪತಿದೇವತಾ ।
ದುಃಖಪೂರ್ಣಾಶ್ರುವದನಾ ಕಿಂಚಿತ್ಸುಖಮವಾಪ ಸಾ ॥ ೬೪ ॥

॥ ಶೇಷ ಉವಾಚ ॥

ವಾಲ್ಮೀಕಿಸ್ಸಾಂತ್ವಯಿತ್ವೈನಾಂ ದುಃಖಿಪೂರ್ಣಾಕುಲೇಕ್ಷಣಾಂ ।
ನಿನಾಯ ಚಾಶ್ರಮಂ ಪುಣ್ಯಂ ತಾಪಸೀವೃಂದಪೂರಿತಂ ॥ ೬೫ ॥

ಸಾ ಗಚ್ಛನ್ತೀ ಪೃಷ್ಠತೋಽಸ್ಯ ವಾಲ್ಮೀಕೇಸ್ತಪಸಾಂ ನಿಧೇಃ ।
ರರಾಜೇಂದೋಃ ಪೃಷ್ಠತೋ ವೈ ತಾರೇವ ಸುಮನೋಹರಾ ॥ ೬೬ ॥

ವಾಲ್ಮೀಕಿಃ ಪ್ರಾಪ್ಯ ಚ ಸ್ವೀಯಮಾಶ್ರಮಂ ಮುನಿಪೂರಿತಂ ।
ತಾಪಸೀಃ ಪ್ರತಿಸಂಚಖ್ಯೌ ಜಾನಕೀಂ ಸ್ವಾಶ್ರಮಂ ಗತಾಂ ॥ ೬೭ ॥

---

೬೩. ಎಲೈ ಪತಿವ್ರತೆಯೇ ಇದು ತಂದೆಯ ಮನೆಯೆಂದೇ ತಿಳಿ. ಆದರೆ ಇದು ಆಶ್ರಮವೆಂಬುದೇ ಭೇದ. ಈ ಕೆಲಸಮಾಡಿದ ವಿಷಯದಲ್ಲಿ ರಾಜನ ಮೇಲೆ ನನಗೂ ಕೋಪ ಬರುತ್ತದೆ.

೬೪. ಪತಿವ್ರತೆಯಾದ ಆ ಸೀತೆಗೆ ಈ ಮಾತು ಕೇಳಿ ಅಳುತ್ತಿದ್ದರೂ ಕೊಂಚ ಸಂತೋಷವಾಯಿತು.

೬೫. ಶೇಷನು ಹೇಳಿದನು :—ವಾಲ್ಮೀಕಿಯು ಈ ಸೀತೆಯನ್ನು ಸಮಾಧಾನಪಡಿಸಿ ತಾಪಸಿಯರಿಂದ ಕೂಡಿದ ಆಶ್ರಮಕ್ಕೆ ಕರೆದುಕೊಂಡು ಹೋದನು.

೬೬. ಆಕೆಯು ವಾಲ್ಮೀಕಿಯ ಹಿಂದೆ ಹೋಗುತ್ತಿದ್ದರೆ ಚಂದ್ರನ ಹಿಂದೆ ಹೋಗುತ್ತಿರುವ ನಕ್ಷತ್ರದಂತಿದ್ದಳು.

೬೭. ವಾಲ್ಮೀಕಿಯು ತನ್ನ ಆಶ್ರಮಕ್ಕೆ ಹೋಗಿ ತಾಪಸಿಯರಿಗೆ ತನ್ನ ಆಶ್ರಮಕ್ಕೆ ಬಂದಿರುವವಳು ಜಾನಕಿಯೆಂದು ತಿಳಿಸಿದನು.

**ವೈದೇಹೀ ತಾಪಸೀಸ್ಸರ್ವಾ ನಮಶ್ಚಕ್ರೇ ಮಹಾಮನಾಃ ।**
**ಪರಸ್ಪರಂ ಪ್ರಹೃಷ್ಯಂತ್ಯಃ ಪರಿರಂಭಂ ಸಮಾಚರನ್ ॥ ೧೮ ॥**

**ವಾಲ್ಮೀಕಿರ್ನಿಜಶಿಷ್ಯಾಂಸ್ತು ಪ್ರತ್ಯುವಾಚ ತಪೋನಿಧಿಃ ।**
**ರಚ್ಯತಾಂ ಬತ ಜಾನಕ್ಯಾಃ ಪರ್ಣಶಾಲಾ ಮನೋರಮಾ ॥ ೧೯ ॥**

**ಇತ್ಯುಕ್ತಂ ವಾಕ್ಯಮಾಕರ್ಣ್ಯ ವಾಲ್ಮೀಕೇಸ್ಸುಮನೋರಮಂ ।**
**ವ್ಯರಚಸ್ಪತ್ರಕೈಶ್ಶಾಲಾಂ ದಾರುಭಿಸ್ಸುಮನೋರಮಾಂ ॥ ೨೦ ॥**

**ತತ್ರಾವಸದ್ವಿದೇಹೋದ್ಭೂಃ ಪತಿವ್ರತಪರಾಯಣಾ ।**
**ವಾಲ್ಮೀಕೇಃ ಪರಿಚರ್ಯಾಂ ಚ ಕುರ್ವಂತೀ ಫಲಭಕ್ಷಿತಾ ॥ ೨೧ ॥**

**ರಾಮ ರಾಮ ಜಪನ್ತ್ಯೇಷು ಮನಸಾ ವಚಸಾ ಸ್ವಯಂ ।**
**ನಿನಾಯ ದಿವಸಾಂಸ್ತತ್ರ ಜಾನಕೀ ಪತಿದೇವತಾ ॥ ೨೨ ॥**

**ಕಾಲೇ ಸ್ವಾಸೂತ ಪುತ್ರೌ ದ್ವೌ ಮನೋಹರವಪುರ್ಧರೌ ।**
**ರಾಮಚಂದ್ರಪ್ರತಿನಿಧೀ ಹ್ಯಶ್ವಿನಾವಿವ ಜಾನಕೀ ॥ ೨೩ ॥**

---

೧೮. ಸೀತೆಯು ಅವರೆಲ್ಲರಿಗೂ ನಮಸ್ಕರಿಸಲು ಅವರು ಸಂತೋಷಗೊಂಡು ಆಲಿಂಗಿಸಿಕೊಂಡರು.

೧೯. ವಾಲ್ಮೀಕಿಯು ಶಿಷ್ಯರಿಗೆ ಈ ವೈದೇಹಿಗೊಂದು ಪರ್ಣಶಾಲೆಯನ್ನು ಮಾಡಿಕೊಡಿರೆಂದನು.

೨೦. ವಾಲ್ಮೀಕಿಯು ಹೀಗೆ ಹೇಳಲು ಶಿಷ್ಯರು ಮರಗಳಿಂದಲೂ ಸೋಗೆಗಳಿಂದಲೂ ಒಂದು ಮನೋಹರವಾದ ಗುಡಿಸಿಲನ್ನು ಕಟ್ಟಿದರು.

೨೧. ಪತಿವ್ರತೆಯಾದ ಸೀತೆಯು ಹಣ್ಣುಹಂಪಲುಗಳನ್ನು ತಿಂದುಕೊಂಡು ವಾಲ್ಮೀಕಿಯ ಶುಶ್ರೂಷೆಮಾಡಿಕೊಂಡಿದ್ದಳು.

೨೨. ಮನೋವಾಕ್ಕಾಯಗಳಿಂದ ರಾಮ ರಾಮ ಎಂದು ಜಪಿಸುತ್ತಾ ಜಾನಕಿಯು ಕಾಲವನ್ನು ಕಳೆಯುತ್ತಿದ್ದಳು.

೨೩. ತಿಂಗಳುಗಳು ತುಂಬುತ್ತಲೂ ಮನೋಹರವಾಗಿ ಅಶ್ವಿನೀದೇವತೆಗಳಂತೆ ಸುಂದರವಾಗಿರುವ ರಾಮಚಂದ್ರನಂತಿರುವ ಇಬ್ಬರು ಮಕ್ಕಳನ್ನು ಹೆತ್ತಳು.

ತಚ್ಛ್ರುತ್ವಾ ತು ಮುನಿರ್ಹೃಷ್ಟಸ್ತ್ವಜಾನಕ್ಯಾಃ ಪುತ್ರಸಂಭವಂ ।
ಚಕಾರ ಜಾತಕರ್ಮಾದಿಸಂಸ್ಕಾರಾನ್ಮಂತ್ರವಿತ್ತಮಃ ॥ ೭೪ ॥

ಕುಶೈರ್ಲವೈಶ್ಚ ವಾಲ್ಮೀಕಿರ್ಮುನಿಃ ಕರ್ಮಾಣಿ ಚಾಚರತ್ ।
ತನ್ನಾಮಾ ಪುತ್ರಯೋರಾಖ್ಯಾ ಕುಶೋಲವ ಇತಿ ಸ್ಫುಟಾ ॥ ೭೫ ॥

ವಾಲ್ಮೀಕಿರ್ಯತ್ರ ವಿರಜಾ ಮಂಗಳಂ ತದಥಾಚರತ್ ।
ಅತ್ಯಂತಹೃಷ್ಟಚೇತಸ್ಕಾ ಬಭೂವ ಸುಮುಖೀಕ್ಷಣಾ ॥ ೭೬ ॥

ತದ್ದಿನೇ ಲವಣಂ ಹತ್ವಾ ಶತ್ರುಘ್ನಸ್ಸ್ವಲ್ಪಸೈನಿಕಃ ।
ಆಗಮಚ್ಚಾಶ್ರಮೇ ಚಾಸ್ಯ ವಾಲ್ಮೀಕೇರ್ನಿಶಿ ಶೋಭನೇ ॥ ೭೭ ॥

ತದಾ ವಾಲ್ಮೀಕಿನಾ ಶಿಷ್ಟಃ ಶತ್ರುಘ್ನೋ ರಘುನಾಯಕಂ ।
ಮಾ ಶಂಸ ಜಾನಕೀಪುತ್ರೌ ಕಥಯಿಷ್ಯಾಮ್ಯಹಂ ಪುರಃ ॥ ೭೮ ॥

---

೭೪. ಜಾನಕಿಗೆ ಮಕ್ಕಳಾದ ವಿಷಯವನ್ನು ವಾಲ್ಮೀಕಿಯು ಕೇಳಿ ಸಂತೋಷಪಟ್ಟು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು.

೭೫. ಕುಶ, ಲವಗಳೆಂಬ ಹುಲ್ಲುಗಳಿಂದ ಅವರಿಗೆ ಕರ್ಮವನ್ನು ಮಾಡಿ ಆ ಮಕ್ಕಳಿಗೆ ಕುಶ ಲವ ಎಂದು ಹೆಸರಿಟ್ಟು ನಾಮಕರಣಮಾಡಿದನು.

೭೬. ವಾಲ್ಮೀಕಿಯು ಮಂಗಳಸ್ನಾನಮಾಡಿಸಿದನು. ಸೀತೆಯು ಸಂತೋಷಗೊಂಡಳು.

೭೭. ಅದಿನ ಲವಣಾಸುರನನ್ನು ಕೊಂದು ಶತ್ರುಘ್ನನು ಮಿತಪರಿವಾರದೊಡನೆ ಆರಾತ್ರಿ ಆಶ್ರಮಕ್ಕೆ ಬಂದಿದ್ದನು.

೭೮. ಆಗ ಆ ವಿಷಯವು ಶತ್ರುಘ್ನನಿಗೆ ತಿಳಿಯಿತು. ವಾಲ್ಮೀಕಿಯು ಈ ಮಕ್ಕಳು ಹುಟ್ಟಿದ ವಿಷಯವನ್ನು ರಾಮನಿಗೆ ಹೇಳಬೇಡ ಮುಂದೆ ನಾನು ಹೇಳುತ್ತೇನೆ ಎಂದಪ್ಪಣೆಮಾಡಿದನು.

ಜಾನಕೀಪುತ್ರಕೌ ತತ್ರ ವವೃಧಾತೇ ಮನೋರಮೌ ।
ಕಂದಮೂಲಫಲ್ಯೈಃ ಪುಷ್ಟೌ ವ್ಯದಧಾದುನ್ಮದೌ ವರೌ ॥ ೭೯ ॥

ಶುಕ್ಲಪ್ರತಿಪದಾಯಾಶ್ಚ ಶಶೀವ ಸುಮನೋಹರೌ ।
ಕಾಲೇನ ಸಂಸ್ಕೃತೌ ಜಾತಾವುಪನೀತೌ ಮನೋಹರೌ ॥ ೮೦ ॥

ಉಪನೀಯ ಮುನಿರ್ವೇದಂ ಸಾಂಗಮಧ್ಯಾಪಯತ್ಸುತೌ ।
ಸರಹಸ್ಯಂ ಧನುರ್ವೇದಂ ರಾಮಾಯಣಮಪಾಠಯತ್ ॥ ೮೧ ॥

ವಾಲ್ಮೀಕಿನಾ ಚ ಧನುಷೀ ದತ್ತೇ ಸ್ವರ್ಣೇ ಸುಭೂಷಿತೇ ।
ಅಭೇದ್ಯೇ ಸುಗುಣೇ ಶ್ರೇಷ್ಠೆ ವೈರಿವೃಂದಸುದಾರುಣೇ ॥ ೮೨ ॥

ಇಷುಧೀ ಬಾಣಸಂಪೂರ್ಣೇ ಅಕ್ಷಯೇ ಕರವಾಲಕೇ ।
ಚರ್ಮಾಣ್ಯಭೇದ್ಯಾನಿ ದದೌ ಜಾನಕ್ಯಾತ್ಮಜಯೋಸ್ತದಾ ॥ ೮೩ ॥

---

೭೯. ಜಾನಕಿಯ ಮಕ್ಕಳಿಬ್ಬರೂ ಆ ವಾಲ್ಮೀಕಿಯ ಆಶ್ರಮದಲ್ಲಿ ಗೆಡ್ಡೆ ಗೆಣಸುಗಳನ್ನು ತಿಂದು ಪುಷ್ಟರಾಗಿಯೂ ಮನೋಹರರಾಗಿಯೂ ಬೆಳೆಯುವಂತೆ ನೋಡಿಕೊಂಡನು.

೮೦. ಶುಕ್ಲಪಕ್ಷದ ಚಂದ್ರನಂತೆ ಮನೋಹರವಾಗಿ ಬೆಳೆಯಲು ಸಕಾಲದಲ್ಲಿ ಉಪನಯನವನ್ನು ಮಾಡಿದನು.

೮೧. ಉಪನಯನವಾದ ಮೇಲೆ ಅವರಿಗೆ ಸಾಂಗವೇದಾಧ್ಯಯನವಮಾಡಿ ಸಿದನು. ಧನುರ್ವೇದವನ್ನು ಗುಟ್ಟುಗಳೊಡನೆ ಹೇಳಿಕೊಟ್ಟು ರಾಮಾಯಣವನ್ನೂ ಕಲಿಸಿದನು.

೮೨. ವಾಲ್ಮೀಕಿಯು ಅವರಿಬ್ಬರಿಗೂ ಗಟ್ಟಿಯಾದ ಮೌರ್ವಿಯಿಂದ ಕೂಡಿದ, ಶತ್ರುಗಳನ್ನು ಗೆಲ್ಲಲು ಸಾಧ್ಯವಾದ ಎರಡು ಬಿಲ್ಲುಗಳನ್ನು ಕೊಟ್ಟನು.

೮೩. ಅಕ್ಷಯವಾದ ಬಾಣಗಳಿಂದ ತುಂಬಿದ ಬತ್ತಳಿಕೆಗಳನ್ನೂ, ಒಂದೊಂದು ಕತ್ತಿಗಳನ್ನೂ ಕೊಟ್ಟನು. ಕತ್ತರಿಸಲಸಾಧ್ಯವಾದ ಚರ್ಮಗಳನ್ನೂ (ಗುರಾಣಿಗಳನ್ನೂ) ಆ ಮಕ್ಕಳಿಗೆ ಕೊಟ್ಟನು.

ಧನುರ್ಧರೌ ಧನುರ್ವೇದಪಾರಗಾವಾಶ್ರಮೇ ಮುದಾ ।
ಚರಂತೌ ತತ್ರ ರೇಜಾತೇ ಹ್ಯಶ್ವಿನಾವಿವ ಶೋಭನೌ ॥ ೮೪ ॥

ಜಾನಕೀ ವೀಕ್ಷ್ಯ ಪುತ್ರೌ ದ್ವೌ ಖಡ್ಗಚರ್ಮಧರೌ ವರೌ ।
ಪರಮಂ ಹರ್ಷಮಾಪನ್ನಾ ವಿರಹೋದ್ಭವಮತ್ಯಜತ್ ॥ ೮೫ ॥

ಏಷ ತೇ ಕಥಿತೋ ವಿಪ್ರ ಜಾನಕ್ಯಾಃ ಪುತ್ರಸಂಭವಃ ।
ಅತಶ್ಶೃಣುಷ್ವ ಯದ್ವೃತ್ತಂ ವೀರಬಾಹುನಿಕೃಂತನಾತ್ ॥ ೮೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ
ಕುಶಲವೋತ್ಪತ್ತಿರ್ನಾಮ ಏಕೋನ
ಷಷ್ಟಿತಮೋಽಧ್ಯಾಯಃ

---

೮೪. ಧನುರ್ವೇದಪಾರಗರಾದ ಅವರು ಧನುಸ್ಸನ್ನು ಧರಿಸಿ ಅಲ್ಲಲ್ಲಿ ಸಂಚರಿಸುತ್ತಾ ಅಶ್ವಿನೀದೇವತೆಗಳಂತೆ ಕಾಣುತ್ತಿದ್ದರು.

೮೫. ಕತ್ತಿ, ಚರ್ಮ, ಧನುಸ್ಸನ್ನು ಧರಿಸಿರುವ ಆ ಮಕ್ಕಳನ್ನು ನೋಡಿ ಜಾನಕಿಯು ಸಂತೋಷಗೊಂಡು ರಾಮನ ವಿರಹವನ್ನು ಮರೆತಳು.

೮೬. ಈರೀತಿ ಜಾನಕಿಗೆ ಮಕ್ಕಳು ಹುಟ್ಟಿದುದನು ಹೇಳಿದೆನು. ಅನಂತರ ಲವನು ವೀರಬಾಹುವಿನ ಕೈಯನ್ನು ಕತ್ತರಿಸಿದುದರಿಂದ ಮುಂದಕ್ಕೆ ಕೇಳು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಕುಶಲವೋತ್ಪತ್ತಿ ಕಥನವೆಂಬ
ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದದು.

---

ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಷ್ಟಿತಮೋಽಧ್ಯಾಯಃ

॥ ಶೇಷ ಉವಾಚ ॥

ಶತ್ರುಘ್ನೋ ನಿಜವೀರಾಣಾಂ ಭುಜಾಃ ಕೃತ್ತಾನ್ನಿರೀಕ್ಷ್ಯರ್ಯ ।
ಉವಾಚ ತಾನ್ಸುಕುಪಿತೋ ರೋಷಸಂದಂಶಿತಾಧರಃ ॥ ೧ ॥

ಕೇನ ವೀರೇಣ ವೋ ಬಾಹುಕೃಂತನಂ ಸಮಕಾರಿ ಭೋಃ ।
ತಸ್ಯಾಹಂ ಬಾಹೂ ಕೃಂತಾಮಿ ದೇವಗುಪ್ತಸ್ಯ ವೈ ಭಟಾಃ ॥ ೨ ॥

ನ ಜಾನಾತಿ ಮಹಾಮೂಢೋ ರಾಮಚಂದ್ರಬಲಂ ಮಹತ್ ।
ಇದಾನೀಂ ದರ್ಶಯಿಷ್ಯಾಮಿ ಪರಾಕ್ರಾಂತ್ಯಾ ಬಲಂ ಸ್ವಕಂ ॥ ೩ ॥

---

## ಅರವತ್ತನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಶತ್ರುಘ್ನನು ತನ್ನ ವೀರರ ಭುಜಗಳನ್ನು ಕತ್ತರಿಸಿರುವುದನ್ನು ನೋಡಿ ಕೋಪದಿಂದ ಹಲ್ಲುಕಡಿಯುತ್ತಾ ತನ್ನ ವೀರರಿಗೆ ಹೇಳಿದನು.

೨. ಎಲೈ ವೀರರಿರಾ! ನಿಮಗೆ ಯಾವ ವೀರನು ತೋಳನ್ನು ಕಡಿದಿರುವನೋ, ದೇವತೆಗಳ ಮರೆಹೊಕ್ಕರೂ ಅವನ ಎರಡು ತೋಳುಗಳನ್ನೂ ಕಡಿದು ಹಾಕುತ್ತೇನೆ.

೩. ರಾಮಚಂದ್ರನ ಮಹಾಬಲವನ್ನು ಆ ಮೂಢನು ಕಾಣನು. ಅವನವೇಲೆ ಬೀಳುವುದರಿಂದ ನನ್ನ ಬಲವನ್ನು ಈಗ ತೋರಿಸುತ್ತೇನೆ.

ಸ ಕುತ್ರ ವರ್ತತೇ ವೀರೋ ಹಯಃ ಕುತ್ರ ಮನೋರಮಃ ।
ಕೋ ವ್ಯಾಘ್ರಹಸ್ತಾತ್ಸುಪ್ತಸರ್ಪಾನ್ಮೂಢೋ ಜ್ಞಾತ್ವಾ ಪರಾಕ್ರಮಂ ॥ ೪ ॥

ಇತಿ ತೇ ಕಥಿತಾ ವೀರಾ ವಿಸ್ಮಿತಾ ದುಃಖಿತಾ ಭೃಶಂ ।
ರಾಮಚಂದ್ರಪ್ರತಿನಿಧಿಂ ಬಾಲಕಂ ಸಮಶಂಸತ ॥ ೫ ॥

ಸ ಶ್ರುತ್ವಾ ರೋಷತಾಮ್ರಾಕ್ಷೋ ಬಾಲಕೇನ ಹಯಂ ಹೃತಂ ।
ಸೇನಾನ್ಯಂ ವೈ ಕಾಲಜಿತಮಾಜ್ಞಾಪಯದ್ಯುಯುತ್ಸುಕಃ ॥ ೬ ॥

॥ ಶತ್ರುಘ್ನ ಉವಾಚ ॥

**ಸೇನಾನೀಸ್ಸಕಲಾಂ ಸೇನಾಂ ವ್ಯೂಹಯಸ್ವ ಮಮಾಜ್ಞಯಾ ।**
**ರಿಪುಸ್ಸಂಪ್ರತಿ ಗಂತವ್ಯೋ ಮಹಾಬಲಪರಾಕ್ರಮಃ ॥ ೭ ॥**

**ನಾಯಂ ಬಾಲಂ ಹರಿರ್ನೂನಂ ಭವಿಷ್ಯತಿ ಹಯಂಧರಃ ।**
**ಅಥವಾ ತ್ರಿಪುರಾರಿಸ್ಸ್ಯಾನ್ನಾನ್ಯಥಾ ಮದ್ಧಯಾಪಹೃತ್ ॥ ೮ ॥**

---

೪. ಆ ವೀರನೆಲ್ಲಿದ್ದಾನೆ ? ಕುದುರೆಯೆಲ್ಲಿದೆ ? ಯಾವ ಮೂಢನು ಪರಾಕ್ರಮವನ್ನು ತಿಳಿಯದೆ ಮಲಗಿರುವ ಹಾವನ್ನು ಹಿಡಿದಿದ್ದಾನೆ ?

೫. ಆಗ ಆ ವೀರರು ದುಃಖದಿಂದಲೂ, ಆಶ್ಚರ್ಯದಿಂದಲೂ ರಾಮಚಂದ್ರನಂತಿರುವ ಬಾಲಕರನ್ನು ಹೊಗಳಿ ಹೇಳಿದರು.

೬. ಅದನ್ನು ಕೇಳಿ ಕೋಪಗೊಂಡು ಕಾಲಜಿತ್ತೆಂಬ ಸೇನಾಪತಿಗೆ ಯುದ್ಧಕ್ಕೆ ಅಪ್ಪಣೆಕೊಟ್ಟನು.

೭. ಎಲೈ ಸೇನಾಪತಿಯೇ ನನ್ನ ಅಪ್ಪಣೆಯಂತೆ ಸೇನೆಯನ್ನು ವ್ಯೂಹವಾಗಿ ರಚಿಸು. ಶತ್ರುವು ಪರಾಕ್ರಮಶಾಲಿಯು. ಅವನ ಮೇಲೆ ಹೋಗಬೇಕು.

೮. ನನ್ನ ಕುದುರೆಯನ್ನು ಹಿಡಿದಿರುವವನು ಹುಡುಗನಲ್ಲ. ಅವನು ಹರಿಯಿರಬಹುದು. ಅಥವಾ ಈಶ್ವರನಾಗಿರಬೇಕು. ಇಲ್ಲದಿದ್ದರೆ ನನ್ನ ಸೈನಿಕರನ್ನು ಜಯಿಸುತ್ತಿರಲಿಲ್ಲ.

**ಅವಶ್ಯಂ ಕದನಂ ಭಾವಿ ಸೈನ್ಯಸ್ಯ ಬಲಿನೋ ಮಹತ್ ।**
**ಸ್ವಚ್ಛಂದಚರಿತೈಃ ಖೇಲನ್ನಾಸ್ತೇ ನಿರ್ಭಯಧೀಸ್ತ್ವಿಶುಃ ॥ ೯ ॥**

**ತತ್ರ ಗಂತವ್ಯಮಸ್ಮಾಭಿಸ್ಸನ್ನದ್ಧೈ ರಿಪುದುರ್ಜಯೈಃ ।**
**ಏತನ್ನಿಶಮ್ಯ ವಚನಂ ಶತ್ರುಘ್ನಸ್ಯ ಸ ಸೈನ್ಯಪಃ ॥ ೧೦ ॥**

**ಸಜ್ಜೀಚಕಾರ ಸೇನಾಂ ತು ದುರ್ವ್ಯೂರ್ಹಾಂ ಚತುರಂಗಿಣೀಂ ।**
**ಸಜ್ಜಾಂ ಚ ಶತ್ರುಜಿದ್ದೃಷ್ಟ್ವಾ ಚತುರಂಗಯುತಾಂ ವರಾಂ ॥ ೧೧ ॥**

**ಆಜ್ಞಾಪಯತ್ತತೋ ಗಂತುಂ ಯತ್ರ ಬಾಲೋ ಹಯಂಧರಃ ।**
**ಸಾ ಚಚಾಲ ತದಾ ಸೇನಾ ಚತುರಂಗಸಮನ್ವಿತಾ ॥ ೧೨ ॥**

**ಕಂಪಯಂತೀ ಮಹೀಭಾಗಂ ತ್ರಾಸಯಂತೀ ರಿಪೂನ್ಬಲಾತ್ ।**
**ಸೇನಾನೀಸ್ತಂ ದದರ್ಶಾಥ ಬಾಲಕಂ ರಾಮರೂಪಿಣಂ ॥ ೧೩ ॥**

**ವಿಚಾರ್ಯ ರಾಮಪ್ರತಿಮಮಬ್ರವೀದ್ವಚನಂ ಹಿತಂ ।**
**ಬಾಲ ಮುಂಚ ಹಯಶ್ರೇಷ್ಠಂ ರಾಮಸ್ಯ ಬಲಶಾಲಿನಃ ॥ ೧೪ ॥**

---

೯. ಖಂಡಿತವಾಗಿಯೂ ನಮ್ಮ ಸೈನ್ಯವು ಒಬ್ಬ ಬಲಿಷ್ಠನೊಡನೆ ಯುದ್ಧ ಮಾಡಬೇಕಾಗಿದೆ. ಆ ಹುಡುಗನು ಮನಸ್ಸಬಂದಂತೆ ಆಟವಾಡುತ್ತಿರುವವನಲ್ಲ.

೧೦. ಶತ್ರುಗಳಿಗೆ ಜಯಿಸಲಸಾಧ್ಯವಾಗುವ ರೀತಿಯಲ್ಲಿ ನಾವು ಅಲ್ಲಿಗೆ ಹೋಗ ಬೇಕು ಎನ್ನಲು, ಸೇನಾಧಿಪತಿಯು ಇದನ್ನು ಕೇಳಿ ಇತರರಿಗೆ ಭೇದಿಸಲಸಾಧ್ಯವಾಗು ವಂತೆ ಸೇನೆಯನ್ನು ಸಿದ್ಧಪಡಿಸಿದನು.

೧೧. ಶತ್ರುಘ್ನನು ಸೈನ್ಯವು ಸಿದ್ಧವಾಗಿರುವುದನ್ನು ನೋಡಿ ಆ ಕುದುರೆ ಕಟ್ಟಿ ರುವ ಹುಡುಗನಿರುವಲ್ಲಿಗೆ ಹೋಗಲು ಅಪ್ಪಣೆಮಾಡಿದನು.

೧೨. ಆ ಚತುರಂಗಸೇನೆಯೂ ಭೂಮಿಯನ್ನು ನಡುಗಿಸುತ್ತಲೂ ಶತ್ರುವನ್ನು ಹೆದರಿಸುತ್ತಲೂ ಹೊರಟಿತು.

೧೩. ಸೇನಾಪತಿಯು ಆ ಬಾಲಕನು ರಾಮನಂತಿರುವುದನ್ನು ನೋಡಿ ಯೋಚಿಸಿ ಆ ಹುಡುಗನನ್ನು ಕುರಿತಿಂತೆಂದನು.

೧೪-೧೫. ಎಲೈ ಬಾಲನೇ, ಬಲಿಷ್ಠನಾದ ರಾಮನ ಕುದುರೆಯನ್ನು ಬಿಟ್ಟು ಬಿಡು. ನಾನು ಕಾಲಜಿತ್ತೆಂಬ ಹೆಸರುಳ್ಳ ಆ ರಾಜನ ಸೇನಾಪತಿಯು. ಜಯಿಸಲ

ಸೇನಾನೀಃ ಕಾಲಜಿನ್ನಾಮ ತಸ್ಯ ಭೂಪಸ್ಯ ದುರ್ಮದಃ ।
ತ್ವಾಂ ರಾಮಪ್ರತಿಮಂ ದೃಷ್ಟ್ವಾ ಕೃಪಾ ಮೇ ಜಾಯತೇ ಹೃದಿ ॥ ೧೫ ॥

ಅನ್ಯಥಾ ತವ ಮೇ ದೌಷ್ಟ್ಯಾಜ್ಜೀವಿತಂ ನ ಭವಿಷ್ಯತಿ ।
ಏತದ್ವಾಕ್ಯಂ ಸಮಾಕರ್ಣ್ಯ ಶತ್ರುಘ್ನಸ್ಯ ಭಟೆಸ್ಯ ಹಿ ॥ ೧೬ ॥

ಜಹಾಸ ಕಿಂಚಿದಾಕೋಪಾದುವಾಚ ಚ ವಚೋಽದ್ಭುತಂ ।
ಗಚ್ಛ ಮುಕ್ತೋಽಸಿ ತಂ ರಾಮಂ ಕಥ ... ಹಯಗ್ರಹಂ ॥ ೧೭ ॥

ತ್ವತ್ತೋ ಬಿಭೇಮಿ ನೋ ಶೂರ ವಾಕ್ಯೇನ ನಯಶಾಲಿನಾ ।
ಮಮಾತ್ರ ಗಣನಾ ನಾಸ್ತಿ ತ್ವಾದೃಶಾಃ ಕೋಟಿಯೋ ಯದಿ ॥ ೧೮ ॥

ಮಾತೃಪಾದಪ್ರಸಾದೇನ ತೂಲೀಭೂತಾ ನ ಸಂಶಯಃ ।
ಕಾಲಜಿತ್ತ್ವವ ಯನ್ನಾಮ ಮಾತ್ರಾಕಾರಿ ಮನೋಜ್ಞಕಂ ॥ ೧೯ ॥

---

ಸಾಧ್ಯನು. ಆದರೆ ನೀನು ನಮ್ಮ ರಾಮನಂತಿರುವುದನ್ನು ನೋಡಿ ನನ್ನ ಮನಸ್ಸಿನಲ್ಲಿ ದಯೆಹುಟ್ಟುತ್ತದೆ. ಹಾಗೆ ನೀನು ಬಿಡದಿದ್ದರೆ ನಿನ್ನ ದುಷ್ಟತನದಿಂದ ನನಗೆ ಕೋಪಬಂದು ನಿನ್ನ ಪ್ರಾಣವು ಉಳಿಯುವುದಿಲ್ಲ.

೧೬. ಶತ್ರುಘ್ನನ ಸೇನಾಪತಿಯು ಈ ಮಾತನ್ನು ಕೇಳಿ ಸ್ವಲ್ಪ ನಕ್ಕು ಕೋಪದಿಂದ ಇಂತೆಂದನು.

೧೭-೧೮. ಹೋಗು ಬಿಟ್ಟಿದ್ದೇನೆ. ಆ ರಾಮನಿಗೆ ಕುದುರೆ ಹಿಡಿದಿರುವುದನ್ನು ತಿಳಿಸು. ನಿನಗಾಗಲಿ ನಿನ್ನ ಒಳ್ಳೆಯ ಮಾತಿಗಾಗಲಿ ಹೆದರುವುದಿಲ್ಲ. ನಿನ್ನಂತಹವರು ಕೋಟಿ ಜನ ಬಂದರೂ ಲೆಕ್ಕವಿಲ್ಲ. ತಾಯಿಯ ಪಾದದ ಕೃಪೆಯಿಂದ ಧೂಳು ಮಾಡುತ್ತೇನೆ.

೧೯. ನಿನ್ನ ತಾಯಿಯು ನಿನಗೆ ಕಾಲಜಿತ್ತೆಂಬ ಹೆಸರನ್ನು ನಿನ್ನ ಪರಾಕ್ರಮವನ್ನು ನೋಡಿ ಇಟ್ಟಿದ್ದಲ್ಲ, ಜಾತ್ಯನುಗುಣವಾಗಿಟ್ಟಿದು, ಅಥವಾ ಬಣ್ಣಕ್ಕನುಗುಣವಾಗಿಟ್ಟಿದ್ದಾಳೆ. ತೊಂಡೆಯಹಣ್ಣಿಗೆ ಬಿಂಬಫಲವೆಂಬ ಹೆಸರು, ವರ್ಣವನ್ನು ನೋಡಿ ಅದರಲ್ಲಿ ಮುಖ ಕಾಣುವಷ್ಟು ಚೆನ್ನಾಗಿರುವುದರಿಂದ ಅದಕ್ಕೆ ಬಿಂಬಫಲವೆಂದು ಹೆಸರುಬಂದಿದೆ. ಅದರಲ್ಲಿ ಸಾರಮಾತ್ರ ಏನೂ ಇಲ್ಲ. ಹಿಸುಕಿದರೆ ಸ್ವಲ್ಪವೂ ತಡೆಯುವುದೇ ಇಲ್ಲ. ಅದರಂತೆ ನಿನಗೆ ಕಾಲಜಿತ್ತೆಂಬ ಹೆಸರು ಬಂದಿದೆಯೇ ಹೊರತು ನಿನ್ನಲ್ಲಿ ಸಾರವೇನೂ ಇಲ್ಲ.

**ಪಕ್ವಬಿಂಬಫಲಸ್ಯೇವ ವರ್ಣಕೋ ನ ಚ ವೀಕ್ಷ್ಯತೇ ।**
**ದರ್ಶಯಸ್ವಾಧುನಾ ವೀರ್ಯಂ ಸ್ವನಾಮಾನುಬಲಚಿಹ್ನಿತಃ**
**ಮಾಂ ಕಾಲಂ ತವ ಸಂಜಿತ್ಯ ಸತ್ಯನಾಮಾ ಭವಿಷ್ಯಸಿ** ॥ ೨೦ ॥

॥ ಶೇಷ ಉವಾಚ ॥

**ಸ ವಾಕ್ಯೈಃ ಪವಿನಾ ತುಲ್ಯೈರ್ಭಿನ್ನಃ ಸುಭಟಶೇಖರಃ ।**
**ಚುಕೋಪ ಹೃದಯೇತ್ಯಂತಂ ಜಗಾದ ವಚನಂ ಪುನಃ** ॥ ೨೧ ॥

॥ ಕಾಲಜಿದುವಾಚ ॥

**ಕಸ್ಮಿನ್ಕುಲೇ ಸಮುತ್ಪತ್ತಿಃ ಕಿಂ ನಾಮಾಸಿ ಚ ಬಾಲಕ ।**
**ತ್ವನ್ನಾಮ ನಾಭಿಜಾನಾಮಿ ಕುಲಂ ಶೀಲಂ ವಯಸ್ತಥಾ** ॥ ೨೨ ॥

**ಪಾದಚಾರಂ ರಥಸ್ಥೋಽಹಮಧರ್ಮೇಣ ಕಥಂ ಜಯೇ ।**
**ತದಾತ್ಯಂತಂ ಪ್ರಕುಪಿತೋ ಜಗಾದ ವಚನಂ ಪುನಃ** ॥ ೨೩ ॥

॥ ಲವ ಉವಾಚ ॥

**ಕುಲೇನ ಕಿಂ ಚ ಶೀಲೇನ ನಾಮ್ನಾ ಚ ವಯಸಾ ಭಟ ।**
**ಲವೋಽಹಂ ಲವತಸ್ಸರ್ವಾನ್ ಜೇಷ್ಯಾಮಿ ರಿಪುಸೈನಿಕಾನ್** ॥ ೨೪ ॥

---

೨೦. ನಿನ್ನ ಹೆಸರಿಗೆ ಅನುಗುಣವಾದ ಬಲವನ್ನು ತೋರಿಸು. ಕಾಲನಂತಿರುವ ನನ್ನನ್ನು ನೀನು ಜಯಿಸಿದರೆ ನಿನ್ನ ಹೆಸರು ಸಾರ್ಥಕವಾಗುತ್ತದೆ.

೨೧. ಶೇಷನು ಹೇಳಿದನು :—ಆ ಸೇನಾಪತಿಯು ಕ್ರೂರವಾದ ಮಾತುಗಳಿಂದ ನೊಂದು ಕೋಪಗೊಂಡು ಪುನಃ ಇಂತೆಂದನು.

೨೨. ಕಾಲಜಿತ್ತು ಹೇಳಿದನು :—ನಿನ್ನ ವಂಶವಾವುದು ? ನಿನ್ನ ಹೆಸರೇನು ? ಕುಲ, ಶೀಲ, ವಯಸ್ಸುಗಳು ಗೊತ್ತಿಲ್ಲವಲ್ಲ ?

೨೩. ನೀನು ಪಾದಚಾರಿಯಾಗಿ ಕೆಳಗಿದ್ದೀಯೆ. ನಾನು ರಥದಲ್ಲಿದ್ದೇನೆ. ಅಧರ್ಮದಿಂದ ನಿನ್ನನ್ನು ಹೇಗೆ ಜಯಿಸಲಿ. ? ಆಗ ಲವನು ಕೋಪಗೊಂಡು ಮತ್ತೆ ಇಂತೆಂದನು.

೨೪. ಕುಲ, ಶೀಲ, ಹೆಸರು, ವಯಸ್ಸುಗಳನ್ನು ಕಟ್ಟಿಕೊಂಡು ನಿನಗೇನು ? ನಿಮ್ಮ ಸೈನಿಕರೆಲ್ಲರನ್ನೂ ಲವತಃ ಎಂದರೆ ಚೂರುಚೂರಾಗಿ ಮಾಡಿ ಜಯಿಸುವುದರಿಂದ ನಾನು ಲವನು.

ಇದಾನೀಂ ತ್ವಾಮಪಿ ಭಟಂ ಕರಿಷ್ಯೇ ಪಾದಚಾರಿಣಂ ।
ಇತ್ಥಮುಕ್ತ್ವಾ ಧನುಸ್ಸಜ್ಜಂ ಚಕಾರ ಸ ಲವೋ ಬಲೀ ॥ ೨೫ ॥

ಟಂಕಾರಯಾಮಾಸ ತದಾ ವೀರಾನಾಕಂಪಯನ್ ಹೃದಿ ।
ವಾಲ್ಮೀಕಿಂ ಪ್ರಥಮಂ ಸ್ಮೃತ್ವಾ ಜಾನಕೀಂ ಮಾತರಂ ಲವಃ ॥ ೨೬ ॥

ಮುಮೋಚ ಬಾಣಾನ್ನಿಶಿತಾನ್ಸದ್ಯಃ ಪ್ರಾಣಾಪಹಾರಿಣಃ ।
ಕಾಲಜಿತ್ಸ್ವಧನುಃ ಕೃತ್ವಾ ಸಜ್ಜಂ ಕೋಪಸಮನ್ವಿತಃ ॥ ೨೭ ॥

ತಾಡಯಾಮಾಸ ಜವನೋ ಲವಂ ರಣವಿಶಾರದಃ ।
ತದ್ಬಾಣಾನ್ ಶತಧಾ ಛಿತ್ವಾ ಕ್ಷಣಾದ್ವೇಗಾತ್ಕುಶಾನುಗಃ ॥ ೨೮ ॥

ಸೇನಾನ್ಯಂ ವಿರಥಂ ಚಕ್ರೇ ವಸುಭಿರ್ಬಾಣಸಂಚಯೈಃ ।
ವಿರಥೋ ಗಜಮಾನೀತಮಾರುರೋಹ ನಿಜೈರ್ಭಟೈಃ ॥ ೨೯ ॥

ಮದೋನ್ಮತ್ತಂ ಮಹಾವೇಗಂ ಸಪ್ತಧಾ ಪ್ರಸ್ರವಾನ್ವಿತಂ ।
ಗಜಾರೂಢಂ ತು ತಂ ದೃಷ್ಟ್ವಾ ದಶಭಿರ್ಧನುಷೋ ಗತೈಃ ॥ ೩೦ ॥

---

೨೫. ಈಗ ಭಟನಾದ ನಿನ್ನನ್ನೂ ಕ್ಷಣಕಾಲದಲ್ಲಿ ಪಾದಚಾರಿಯನ್ನಾಗಿಮಾಡುತ್ತೇನೆ. ಹೀಗೆಂದು ಹೇಳಿ ಧನುಸ್ಸನ್ನು ಆ ವೀರನು ಸಿದ್ಧಮಾಡಿಕೊಂಡನು.

೨೬. ವೀರರು ಹೃದಯದಲ್ಲಿ ನಡುಗುವಂತೆ ಧನುಸ್ಸನ್ನು ಠಂ ಎಂದೆನ್ನಿಸಿದನು. ಲವನು ವಾಲ್ಮೀಕಿಯನ್ನೂ, ತಾಯಿಯನ್ನೂ ಸ್ಮರಿಸಿ, ಪ್ರಾಣಗಳನ್ನು ಅಪಹರಿಸುವ ಹರಿತವಾದ ಬಾಣಗಳನ್ನು ಬಿಟ್ಟನು.

೨೭. ಕಾಲಜಿತ್ತು ತಾನೂ ಕೋಪದಿಂದ ಧನುಸ್ಸನ್ನು ಸಿದ್ಧಮಾಡಿಕೊಂಡು ಲವನನ್ನು ಹೊಡೆದನು.

೨೮. ಲವನು ಆ ಬಾಣಗಳನ್ನು ಚೂರುಚೂರಾಗಿ ಕತ್ತರಿಸಿ, ಹದಿನೆಂಟು ಬಾಣಗಳನ್ನು ಬಿಟ್ಟು, ಆ ಸೇನಾಪತಿಯ ರಥವನ್ನು ನಾಶಮಾಡಿದನು.

೨೯. ರಥವು ನಾಶವಾಗುತ್ತಲೂ ಅವನ ಭಟರು ಆನೆಯನ್ನು ತರಲು ಅದನ್ನು ಹತ್ತಿದನು.

೩೦. ಆ ಆನೆಯು ಮದಿಸಿ ಏಳು ರೀತಿಯಾಗಿ ಮದೋದಕವನ್ನು ಸುರಿಸುತ್ತಿತ್ತು. ಅದರ ಮೇಲೆ ಆ ಕಾಲಜಿತ್ತು ಹತ್ತಿಬರಲು, ಹತ್ತು ಬಾಣಗಳಿಂದ ಅದನ್ನು ಹೊಡೆದು ಆ ವೀರನನ್ನೂ ಹೊಡೆದನು.

**ಬಾಣೈರ್ವಿವ್ಯಾಧ ವಿಹರ್ಸ ಸರ್ವಾನ್ರಿಪುಗಣಾನ್ಲಯೀ ।
ಕಾಲಜಿತ್ತಸ್ಯ ವೀರ್ಯಂ ತು ದೃಷ್ಟ್ವಾ ವಿಸ್ಮಿತಮಾನಸಃ** ॥ ೩೧ ॥

**ಗದಾಂ ಮುಮೋಚ ಮಹತೀಂ ಮಹಾಯಸವಿನಿರ್ಮಿತಾಂ ।
ಆಪತಂತೀಂ ಗದಾಂ ವೇಗಾದ್ಭಾರಾಯುತವಿನಿರ್ಮಿತಾಂ** ॥ ೩೨ ॥

**ತ್ರಿಧಾ ಚಿಚ್ಛೇದ ತರಸಾ ಕ್ಷುರಪ್ರೈಸ್ಸ ಕುಶಾನುಗಃ ।
ಪರಿಘಂ ನಿಶಿತಂ ಘೋರಂ ವೈರಿಪ್ರಾಣಹರೋದಿತಂ** ॥ ೩೩ ॥

**ಮುಕ್ತಂ ಪುನಸ್ತೇನ ಲವಶ್ಚಿಚ್ಛೇದ ತರಸಾನ್ವಿತಃ ।
ಛಿತ್ವಾ ತತ್ಪರಿಘಂ ಘೋರಂ ಕೋಪಾದಾರಕ್ತಲೋಚನಃ** ॥ ೩೪ ॥

**ಗಜೋಪಸ್ಥೇ ಸಮಾರೂಢಂ ಮನ್ಯಮಾನಶ್ಚುಕೋಪ ಹ ।
ತತ್ಕ್ಷಣಾದಚ್ಛಿನತ್ತಸ್ಯ ಶುಂಡಾಂ ಖಡ್ಗೇನ ದಂತಿನಃ** ॥ ೩೫ ॥

**ದಂತಯೋಶ್ಚರಣೌ ಧೃತ್ವಾಽರುರೋಹ ಗಜಮಸ್ತಕೇ ।
ಮುಕುಟಂ ಶತಧಾ ಕೃತ್ವಾ ಕವಚಂ ತು ಸಹಸ್ರಧಾ** ॥ ೩೬ ॥

---

೩೧. ಕಾಲಜಿತ್ತು ಅವನ ಪರಾಕ್ರಮವನ್ನು ನೋಡಿ ಆಶ್ಚರ್ಯಪಟ್ಟು, ಒಳ್ಳೆಯ ಗದೆಯನ್ನು ತೆಗೆದು ಅವನ ಮೇಲೆ ಬಿಟ್ಟನು.

೩೨. ಹತ್ತು ಸಾವಿರ ಮಣಗಳಿಂದ ನಿರ್ಮಿಸಿರುವ ಆ ಭಾರವಾದ ಗದೆಯನ್ನು ಹರಿತವಾದ ಬಾಣಗಳಿಂದ ಮಧ್ಯದಲ್ಲಿಯೇ ಮೂರು ತುಂಡಾಗಿ ಕತ್ತರಿಸಿಬಿಟ್ಟನು.

೩೩. ಅವನು ಕತ್ತರಿಸಲು ಕಾಲಜಿತ್ತು ವೈರಿಯನ್ನು ಕೊಲ್ಲಲು ಒಂದು ಪರಿಘವನ್ನು ಬಿಟ್ಟನು. ಅದನ್ನು ಲವನು ಕತ್ತರಿಸಿದನು.

೩೪-೩೫. ಆ ಘೋರವಾದ ಪರಿಘವನ್ನು ಕತ್ತರಿಸಿ ಅವನು ಆನೆಯ ಮೇಲಿರುವುದನ್ನು ನೋಡಿ ಸಹಿಸದೆ ಆ ಆನೆಯ ಸೊಂಡಲನ್ನು ಕತ್ತಿಯಿಂದ ಕಡಿದನು.

೩೬. ದಂತಗಳ ಮೇಲೆ ಕಾಲಿಟ್ಟು ಹತ್ತಿ ಆನೆಯ ನೆತ್ತಿಯ ಮೇಲೆ ನಿಂತು, ಸೇನಾಪತಿಯ ಕಿರೀಟವನ್ನು ಚೂರುಮಾಡಿ, ಕವಚವನ್ನು ಪುಡಿಪುಡಿಮಾಡಿ, ಜುಟ್ಟನ್ನು ಹಿಡಿದೆಳೆದು ನೆಲಕ್ಕೆ ಬಿಸುಟನು.

ಕೇಶೇಷ್ವಾಕೃಷ್ಯ ಸೇನಾನ್ಯಂ ಪಾತಯಾಮಾಸ ಭೂತಲೇ ।
ಪಾತಿತಸ್ಸ ಗಣೋಽಪಸ್ಮಾತ್ಸೇನಾನೀಃ ಕುಪಿತಃ ಪುನಃ ॥ ೩೭ ॥

ಹೃದಯೇ ತಾಡಯಾಮಾಸ ಮುಷ್ಟಿನಾ ವಜ್ರಮುಷ್ಟಿನಾ ।
ಸ ಆಹತೋ ಮುಷ್ಟಿಭಿಸ್ತು ಕ್ಷುರಪ್ರಾನ್ನಿಶಿತಾನ್ ಶರಾನ್ ॥ ೩೮ ॥

ಮುಮೋಚ ಹೃದಯೇ ಕ್ಷಿಪ್ರಂ ಕುಂಡಲೀಕೃತಧನ್ವನಾನ್ ।
ಸ ರರಾಜ ರಣೋಪಾನ್ತೇ ಕುಂಡಲೀಕೃತಚಾಪವಾನ್ ॥ ೩೯ ॥

ಶಿರಸ್ತ್ರಂ ಕವಚಂ ಬಿಭ್ರದಭೇದ್ಯಂ ಶರಕೋಟಿಭಿಃ ।
ಸ ವಿದ್ಧಃ ಸಾಯಕೈಸ್ತೀಕ್ಷ್ಣೈಸ್ತಂ ಹಂತುಂ ಖಡ್ಗಮಾದದೇ ॥ ೪೦ ॥

ದಶನ್ರೋಷಾತ್ಸ್ವದಶನಾನ್ನಿಶ್ವಸನ್ನುಚ್ಛ್ವಸನ್ಮುಹುಃ ।
ಖಡ್ಗಹಸ್ತಂ ಸಮಾಯಾಂತಂ ಶೂರಂ ಸೇನಾಪತಿಂ ಲವಃ ॥ ೪೧ ॥

ಚಿಚ್ಛೇದ ಭುಜಮಧ್ಯಂ ಚ ಸಖಡ್ಗಃ ಪಾಣಿರಾಪತತ್ ।
ಛಿನ್ನಂ ಖಚ್ಗಧರಂ ಹಸ್ತಂ ವೀಕ್ಷ್ಯ ಕೋಪಾಚ್ಚಮೂಪತಿಃ ॥ ೪೨ ॥

---

೩೭. ಸೇನಾನಿಯು ಕೆಳಗೆ ಬೀಳಲು ಕೋಪಬಂದು ವಜ್ರಮುಷ್ಟಿಯಿಂದ ಲವನೆದೆಗೆ ಹೊಡೆದನು.

೩೮-೩೯. ಆ ಲವನು ಕೋಪಗೊಂಡು ಹರಿತವಾದ ಬಾಣಗಳನ್ನು ಬಿಟ್ಟನು. ಹೀಗಿಬ್ಬರೂ ಧನುಸ್ಸನ್ನು ಹಿಡಿದು ಯುದ್ಧಕ್ಕೆ ನಿಂತರು.

೪೦. ಅಭೇದ್ಯವಾದ ಟೊಪ್ಪಿಗೆಯೂ ಕವಚವೂ ಹೋದುದನ್ನು ನೋಡಿ ಆ ಸೇನಾಪತಿಯು ಲವನನ್ನು ಕೊಲ್ಲಲು ಖಡ್ಗವನ್ನು ಹಿಡಿದನು.

೪೧. ಕೋಪದಿಂದ ಹಲ್ಲುಗಳನ್ನು ಕಡಿಯುತ್ತಾ ಖಡ್ಗವನ್ನು ಹಿಡಿದು ಕೊಲ್ಲಲು ಬರುತ್ತಿರುವ ಸೇನಾಪತಿಯನ್ನು ನೋಡಿ ಲವನು ಭುಜಗಳ ಮಧ್ಯಕ್ಕೆ ಹೊಡೆಯಲು ಖಡ್ಗವನ್ನು ಹಿಡಿದಿರುವಂತೆಯೇ ಕೈಬಿದ್ದುಹೋಯಿತು.

೪೨-೪೩. ಸೇನಾಪತಿಯು ಬಲಗೈಕತ್ತರಿಸಿದ ಕೋಪದಿಂದ ಎಡಗೈಯಲ್ಲಿ

ವಾಮೇನ ಗದಯಾ ಹಂತುಂ ಪ್ರಚಕ್ರಾಮ ಭುಜೇನ ತಂ ।
ಸೋಽಪಿ ಚ್ಛಿನ್ನೋ ಭುಜಸ್ತಸ್ಯ ಸಾಂಗದಸ್ತೀಕ್ಷ್ಣಸಾಯಕೈಃ ॥ ೪೩ ॥

ತದಾ ಪ್ರಕುಪಿತೋ ವೀರಃ ಪಾದಾಭ್ಯಾಮಹನಲ್ಲವಂ ।
ಲವಃ ಪಾದಾಹತಸ್ತಸ್ಯ ನ ಚಚಾಲ ರಣಾಂಗಣೇ ॥ ೪೪ ॥

ಸ್ರಜಾ ಹತೋ ದ್ವಿಪ ಇವ ಚರಣಚ್ಛೇದನಂ ವ್ಯಧಾತ್ ।
ತದಾಪಿ ತಂ ಮೌಲಿನಾಸೌ ಪ್ರಹರ್ತುಂ ತು ಪ್ರಚಕ್ರಮೇ ॥ ೪೫ ॥

ತದಾ ಲವಶ್ಚ ಮಾನಾಘಂ ಮನ್ಯಮಾನೋಽಧಿಪೌರುಷಂ ।
ಕರವಾಲಂ ಸಮಾದಾಯ ಕರೇ ಕಾಲಾನಲೋಪಮಂ ॥ ೪೬ ॥

ಅಚ್ಛಿನಚ್ಛಿರ ಏತಸ್ಯ ಮಹಾಮುಕುಟಶೋಭಿತಂ ।
ಹಾಹಾಕಾರೋ ಮಹಾನಸೀಚ್ಚಮೂನಾಥೇ ನಿಪಾತಿತೇ ॥ ೪೭ ॥

ಸೈನಿಕಾಃ ಪರಮಂ ಕ್ರುದ್ಧಾಃ ಲವಂ ಹಂತುಮಗುಃ ಕ್ಷಣಾತ್ ।
ಲವಸ್ತಾಂಸ್ತ್ವಶರಾಘಾತೈಃ ಪಲಾಯನಪರಾನ್ವ್ಯಧಾತ್ ॥ ೪೮ ॥

---

ಹೊಡೆಯಲು ಗದೆಯನ್ನು ಹಿಡಿದುಬಂದನು. ಆಗ ಲವನು ಆ ಕೈಯನ್ನು ಭುಜ ಕೀರ್ತಿಯೊಡನೆ ಕತ್ತರಿಸಿದನು.

೪೪. ಆಗ ಆ ವೀರನಾದ ಸೇನಾಪತಿಯು ಲವನನ್ನು ಕಾಲುಗಳಿಂದ ಹೊಡೆಯಲುಪಕ್ರಮಿಸಿದನು. ಲವನು ಆ ಏಟಿಗೆ ಹೆದರದೆ ಹೂಮಾಲೆಯಿಂದ ಹೊಡೆದ ಆನೆಯಂತೆ ಅಲಕ್ಷ್ಯದಿಂದಿದ್ದು ಅವನ ಕಾಲುಗಳನ್ನೂ ಕಡಿದನು.

೪೫-೪೬. ಆದರೂ ಕೂಡ ತಲೆಯಿಂದಲೇ ಆತನು ಲವನನ್ನು ಹೊಡೆಯಲು ಹೋದನು. ಲವನು ಆ ಸೇನಾಪತಿಯು ಬಹು ಬಲಿಷ್ಠನೆಂದು ತಿಳಿದು ಕತ್ತಿಯನ್ನು ತೆಗೆದುಕೊಂಡು ಅವನ ತಲೆಯನ್ನು ಕತ್ತರಿಸಿದನು.

೪೭-೪೮. ಸೈನ್ಯಾಧಿಪತಿಯು ಸಾಯಲು ಹಾಹಾಕಾರವು ಸೈನ್ಯದಲ್ಲಿ ಎದ್ದಿತು. ಆಗ ಅವರೆಲ್ಲರೂ ಲವನ ಮೇಲೆ ಬೀಳಲು ಲವನು ಬಾಣದಿಂದ ಎಲ್ಲರೂ ಓಡಿಹೋಗುವಂತೆ ಮಾಡಿದನು.

ಭಿನ್ನಾ ಭಿನ್ನಾಂಗಕಾಃ ಕೇಚಿದ್ಗತಾಃ ಕೇಚಿದ್ರಣಾಂಗಣಾತ್ ।
ಸ ನಿವಾರ್ಯಾಖಿಲಾನ್ಯೋಧಾನ್ವಿಜಗಾಹ ಚಮೂಂ ಮುದಾ ॥ ೪೯ ॥

ನಾರಾಚ ನಿವ ನಿಶ್ವಸ್ಯ ಪ್ರಳಯೇಷು ಮಹಾರ್ಣವಂ ।
ಗಜಾ ಭಿನ್ನಾ ದ್ವಿಧಾ ಜಾತಾ ಮೌಕ್ತಿಕೈಃ ಪೂರಿತಾ ಮಹೀ ॥ ೫೦ ॥

ದುರ್ಗಮಾಭೂಧ್ವಟಾಗ್ರ್ಯಾಣಾಂ ಪರ್ವತೈರ್ನ್ಯಾಕ್ಪೃತಾ ಯಥಾ ।
ಅಶ್ವಾಃ ಕನಕಪಲ್ಯಾಣಾ ರುಚಿರಾ ರಕ್ತರಾಜಿತಾಃ ॥ ೫೧ ॥

ಅಪತನ್ರುಧಿರಪ್ಲುಷ್ಟೇ ಹ್ರದೇ ಬಲಸುಶೋಭಿತಾಃ ।
ರಥಿನಃ ಕರಮಧ್ಯಸ್ಥಧನುರ್ದಂಡಸುಶೋಭಿತಾಃ ॥ ೫೨ ॥

ರಥೋಪಸ್ಥೇ ನಿಪತಿತಾಃ ಸ್ವರ್ಗಗಾ ಇವ ವೈ ಸುರಾಃ ।
ಸಂದಷ್ಟೌಷ್ಠಪುಟಾ ವಕ್ತ್ರಭ್ರಮಲ್ಲಕ್ಷ್ಮೀವಿಲಕ್ಷಿತಾಃ ॥ ೫೩ ॥

---

೪೯. ಅನೇಕರು ಏಟುತಿಂದು ರಣರಂಗದಿಂದ ಓಡಿಹೋದರು. ಆ ಲವನು ಎಲ್ಲರನ್ನೂ ಸೋಲಿಸುತ್ತ ವ್ಯೂಹದೊಳಕ್ಕೆ ನುಗ್ಗಿದನು.

೫೦. ಸಲಗನು ನಿಟ್ಟುಸಿರುಬಿಡುವಂತೆ ಗುರ್ರೆನ್ನುತ್ತಾ ಪ್ರಳಯಕಾಲದ ಸಮುದ್ರದಂತೆ ನಾಶಮಾಡುತ್ತಿದ್ದನು. ಆಗ ಆನೆಗಳ ತಲೆಯನ್ನು ಸೀಳುತ್ತಿರಲು ಅವುಗಳ ತಲೆಯಲ್ಲಿದ್ದ ಮುತ್ತುಗಳಿಂದ ಭೂಮಿಯು ವ್ಯಾಪ್ತವಾಯಿತು.

೫೧. ಆನೆಗಳು ಹೀಗೆ ಸತ್ತುಬಿದ್ದುದರಿಂದ ಪರ್ವತಪ್ರದೇಶಗಳ ಸ್ಥಳಗಳಂತೆ ಯುದ್ಧರಂಗವು ಭಟರಿಗೆ ಸಂಚರಿಸಲು ಅಸಾಧ್ಯವಾಯಿತು. ಚಿನ್ನದ ಲಗಾಮಿನಿಂದ ಕೂಡಿದ ಕುದುರೆಗಳು ರಕ್ತದ ಮಡುವಿನಲ್ಲಿ ಬಿದ್ದಿದ್ದುವು.

೫೨. ರಥಿಕರು ಕೈಯಲ್ಲಿ ಧನುಸ್ಸನ್ನು ಹಿಡಿದು ಆ ರಥದ ಮಧ್ಯದಲ್ಲಿಯೇ ಬಿದ್ದುಬಿಟ್ಟರು. ಇದನ್ನು ನೋಡಿದರೆ ದೇವತೆಗಳು ರಥದಲ್ಲಿ ಮಲಗಿ ಸ್ವರ್ಗಕ್ಕೆ ಹೋಗುವಂತೆ ಕಾಣುತ್ತಿದ್ದಿತು.

೫೩. ರಣದಲ್ಲಿ ಏಟುತಿಂದು ಸತ್ತವೀರರು ಹಲ್ಲುಮುಡಿ ಕಚ್ಚಿಕೊಂಡಿದ್ದರು.

**ಪತಿತಾಸ್ತತ್ರ ದೃಶ್ಯಂತೇ ವೀರಾ ರಣವಿಶಾರದಾಃ ।**
**ಸುಸ್ರಾವ ಶೋಣಿತಸರಿದ್ಧ್ವದಂಪುಸ್ತಕಕಚ್ಛಪಾ ॥ ೫೪ ॥**

**ಮಹಾಪ್ರವಾಹಲಸಿತಾ ವೈರಿಣಾಂ ಭಯಕಾರಿಣೀ ।**
**ಕೇಷಾಂಚಿದ್ಬಾಹವಶ್ಛಿನ್ನಾಃ ಕೇಷಾಂ ಪಾದಾ ನಿಕರ್ತಿತಾಃ ॥ ೫೫ ॥**

**ಕೇಷಾಂ ಕರ್ಣಶ್ಚ ನಾಸಾಶ್ಚ ಕೇಷಾಂ ಕವಚಕುಂಡಲೇ ।**
**ಏವಂ ತು ಕದನಂ ಜಾತಂ ಸೇನಾನ್ಯಾಂ ಪತಿತೇ ರಣೇ ॥ ೫೬ ॥**

**ಸರ್ವೇಽಪಿ ಪತಿತಾ ವೀರಾ ನ ಕೇಚಿಜ್ಜೀವಿತಾಸ್ತತಃ ।**
**ಲವೋ ರಣೇ ಜಯಂ ಪ್ರಾಪ್ಯ ವೈರಿವೃಂದಂ ವಿಜಿತ್ಯಚ ॥ ೫೭ ॥**

**ಅನ್ಯಾಗಮನಶಂಕಾಯಾಂ ಮನಃ ಕುರ್ವನ್ನವೈಕ್ಷತ ।**
**ಕೇಚಿದುರ್ವರಿತಾ ಯುದ್ಧಾದ್ಭಾಗ್ಯೇನ ನ ರಣೇ ಮೃತಾಃ ॥ ೫೮ ॥**

---

೫೪. ಕುದುರೆಗಳ ತಲೆಯೆಂಬ ಆಮೆಗಳುಳ್ಳ ರಕ್ತವಕೋಡಿಯು ಹರಿಯುತ್ತಿತ್ತು. ಇದು ವೈರಿಗಳಿಗೆ ಬಹು ಭಯವನ್ನುಂಟುಮಾಡುತ್ತಿತ್ತು.

೫೫. ಕೆಲವರಿಗೆ ತೋಳುಗಳೂ, ಕೆಲವರಿಗೆ ಕಾಲುಗಳೂ, ಕೆಲವರಿಗೆ ಕಿವಿಯೂ, ಮತ್ತೆ ಕೆಲವರಿಗೆ ಮೂಗೂ, ಮತ್ತೂ ಕೆಲವರಿಗೆ ಕವಚ ಕುಂಡಲಗಳೂ ಕತ್ತರಿಸಿಹೋಗಿದ್ದುವು.

೫೬. ಸೇನಾಪತಿಯು ಬಿದ್ದುಹೋಗಲು ಈರೀತಿ ಯುದ್ಧವು ನಡೆದು ಎಲ್ಲ ವೀರರೂ ಬಿದ್ದು ಮಡಿದರು. ಒಬ್ಬನೂ ಜೀವದಿಂದಿರಲಿಲ್ಲ.

೫೭. ಲವನು ಹೀಗೆ ಎಲ್ಲರನ್ನೂ ಜಯಿಸಿ, ಯುದ್ಧದಲ್ಲಿ ಜಯವನ್ನು ಹೊಂದಿ ಮತ್ತಾರಾದರೂ ಬರಬಹುದೆಂಬ ಶಂಕೆಯಿಂದ ನಿರೀಕ್ಷಿಸುತ್ತಿದ್ದನು.

೫೮. ಕೆಲವರು ಮಾತ್ರ ತಮ್ಮ ಭಾಗ್ಯವು ಅತ್ಯಧಿಕವಾಗಿರಲು ಯುದ್ಧದಲ್ಲಿ ಸಾಯಲಿಲ್ಲ. ಅವರು ಈ ಯುದ್ಧದ ಅದ್ಭುತವನ್ನು ಶತ್ರುಘ್ನನಿಗೆ ತಿಳಿಸಲು ಹೋದರು.

ಶತ್ರುಘ್ನಸಂನ್ನಿಧೌ ಜಗ್ಮುಃ ಶಂಸಿತುಂ ವೃತ್ತಮದ್ಭುತಂ ।
ಗತ್ವಾ ತೇ ಕಥಯಾಮಾಸುರ್ಯಥಾವೃತ್ತಂ ರಣಾಂಗಣೇ ॥ ೫೯ ॥

ಕಾಲಜಿನ್ನಿಧನಂ ಬಾಲಾಚ್ಛ್ರುತ್ವಾ ಶತ್ರುನಿಷೂದನಃ ।
ತಚ್ಛ್ರುತ್ವಾ ವಿಸ್ಮಯಂ ಪ್ರಾಪ್ತಃ ಶತ್ರುಘ್ನಸ್ತಾನುವಾಚ ಹ ॥ ೬೦ ॥

ಹಸನ್ರೋಷಾದ್ದಶನ್ದಂತಾನ್ಬಾಲಗ್ರಾಹಹಯಂ ಸ್ಮರನ್ ।
ಹೇ ವೀರಾಃ ಕಿಂ ಮದೋನ್ಮತ್ತಾ ಯೂಯಂ ಕಿಂ ವಾ ಛಲಗ್ರಹಾಃ ॥ ೬೧ ॥

ಕಿಂ ವಾ ವೈಕಲ್ಯಮಾಯಾತಂ ಕಾಲಜಿನ್ಮರಣಂ ಕಥಂ ।
ಯಃ ಸಂಖ್ಯೇ ವೈರಿವೃಂದಾನಾಂ ದಾರುಣಃ ಸಮಿತಿಂಜಯಃ ॥ ೬೨ ॥

ತಂ ಕಥಂ ಬಾಲಕೋ ಜೇಯಾದ್ಯಮಸ್ಯಾಪಿ ದುರಾಸದಂ ।
ಶತ್ರುಘ್ನವಾಕ್ಯಂ ಸಂಶ್ರುತ್ಯ ವೀರಾಃ ಪ್ರೋಚುರಸೃಕ್ಪ್ಲುತಾಃ ॥ ೬೩ ॥

ನಾಸ್ಮಾಕಂ ಮದಮತ್ತಾದಿ ನ ಛಲಂ ನ ಚ ದೇವನಂ ।
ಕಾಲಜಿನ್ಮರಣಂ ಸತ್ಯಂ ಲವಾಜ್ಜಾನೀಹಿ ಭೂಪತೇ ॥ ೬೪ ॥

---

೫೯-೬೦ ಅವರು ಹೋಗಿ ಶತ್ರುಘ್ನನಿಗೆ ಯುದ್ಧದಲ್ಲಿ ನಡೆದ ವಿಷಯಗಳೆಲ್ಲವನ್ನೂ ತಿಳಿಸಿದರು. ಬಾಲಕನಿಂದ ವೀರನಾದ ಕಾಲಜಿತ್ತಿನ ಸಾವನ್ನು ಕೇಳಿ ಅವನು ಆಶ್ಚರ್ಯಪಟ್ಟು ಅವರನ್ನು ಕುರಿತಿಂತೆಂದನು.

೬೧-೬೨ ನಗುತ್ತಾ, ಕೋಪದಿಂದ ಹಲ್ಲುಗಳನ್ನು ಕಡಿಯುತ್ತಾ, ಬಾಲಕನು ಕುದುರೆ ಕಟ್ಟಿರುವುದನ್ನು ಸ್ಮರಿಸುತ್ತಾ, ರಣದಲ್ಲಿ ಏನು ವ್ಯತ್ಯಾಸ ನಡೆಯಿತು? ಕಾಲಜಿತ್ತು ಸಾಯೋಣವೆಂದರೇನು ? ಯಾವನು ಯುದ್ಧದಲ್ಲಿ ಕ್ರೂರನಾಗಿ ವೈರಿಗಳನ್ನು ಗೆದ್ದು ರಣದಲ್ಲಿ ಜಯಶೀಲನಾಗಿ ಬರುತ್ತಿದ್ದನೋ, ಯಾವನು ಯಮನಿಗೂ ಜೈಯಿಸಲಸಾಧ್ಯನೋ, ಅವನನ್ನು ಬಾಲಕನು ಜಯಿಸುವುದೆಂದರೇನು ?

೬೩-೬೪. ಶತೃಘ್ನನ ಈ ಮಾತನ್ನು ಕೇಳಿ ರಕ್ತದಿಂದ ಕೂಡಿದ ಆ ವೀರರು ಹೇಳಿದರು. ನಾವೇನು ಮದಿಸಿರಲಿಲ್ಲ, ಕಪಟವೂ ಇಲ್ಲ, ಆಟ ಮೊದಲಾದುವುಗಳಲ್ಲಿ ಆಸಕ್ತರಾಗಿಯೂ ಇರಲಿಲ್ಲ. ಲವನು ಕಾಲಜಿತ್ತನ್ನು ಕೊಂದುದು ಸತ್ಯವು.

**ಬಲಂ ಚ ಕೃತ್ಸ್ನಂ ಮಥಿತಂ ಬಾಲೇನಾಕುಲಶೌಂಡಿನಾ ।**
**ಅತಃ ಪರಂ ತು ಯತ್ಕಾರ್ಯಂ ಯೇ ಪ್ರೇಷ್ಯಾ ನೃಪಸತ್ತಮಾಃ ॥ ೬೫ ॥**

**ಬಾಲಂ ಜ್ಞಾತ್ವಾ ಭವಾನ್ನಾತ್ರ ಕರೋತು ಬಲಸಾಹಸಂ ।**
**ಇತಿ ಶ್ರುತ್ವಾ ವಚಸ್ತೇಷಾಂ ವೀರಾಣಾಂ ಶತ್ರುಹಾ ತದಾ ।**
**ಸುಮತಿಂ ಚ ಮತಿಶ್ರೇಷ್ಠಮುವಾಚ ರಣಕಾರಣೇ ॥ ೬೬ ॥**

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಶತ್ರುಘ್ನಸ್ಯ ಕಾಲಜಿತ್ಸೇನಾನೀಮರಣಂ ನಾಮ
ಷಷ್ಟಿತಮೋಽಧ್ಯಾಯಃ.

— —

---

೬೫. ಬಹು ಬಲಿಷ್ಠನಾದ ಆ ಬಾಲನಿಂದ ನಮ್ಮ ಸೈನ್ಯವೆಲ್ಲವೂ ನಾಶಪಡಿಸಲ್ಪಟ್ಟಿತು. ಇನ್ನು ಮೇಲೆ ಏನು ಮಾಡಬೇಕು. ಯಾರನ್ನು ಕಳುಹಿಸಬೇಕೆಂಬುದು ನಿನಗೆ ಸೇರಿದುದು. ಆದರೆ ನೀನು ಬಾಲಕನೆಂದು ಭಾವಿಸಿ ಬಲ ಸಾಹಸಗಳನ್ನು ತೋರಿಸಲು ಹೊರಡದೆ ಯೋಚನೆಮಾಡು ಎಂದರು.

೬೬. ಶತ್ರುಘ್ನನು ವೀರರ ಈ ಮಾತನ್ನು ಕೇಳಿ ಬುದ್ಧಿವಂತನಾದ ಸುಮತಿಯೆಂಬ ಮಂತ್ರಿಯನ್ನು ಕರೆದು ಯುದ್ಧದ ಕಾರಣವನ್ನು ಯೋಚಿಸಿದನು.

ಇಲ್ಲಿಗೆ ಶ್ರೀ ಪದ್ಮಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ ಸಂವಾದದ
ರಾಮಾಶ್ವಮೇಧದಲ್ಲಿ ಶತ್ರುಘ್ನನ ಕಾಲಜಿತ್ತೆಂಬ ಸೇನಾಪತಿಯ
ಮರಣವೆಂಬ ಅರವತ್ತನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕಷಷ್ಟಿತಮೋಽಧ್ಯಾಯಃ

॥ ಶತ್ರುಘ್ನ ಉವಾಚ ॥

ಜಾನಾಸಿ ಕಿಂ ಮಹಾಮಂತ್ರಿನ್ಕೋ ಬಾಲೋ ಹಯಮಾಹರತ್ ।
ಯೇನ ಮೇ ಕ್ಷಪಿತಂ ಸರ್ವಂ ಬಲಂ ವಾರಿಧಿಸನ್ನಿಭಂ ॥ ೧ ॥

॥ ಸುಮತಿರುವಾಚ ॥

ಸ್ವಾಮಿನ್ನಯಂ ಮುನಿಶ್ರೇಷ್ಠವಾಲ್ಮೀಕೇರಾಶ್ರಮೋ ಮಹಾನ್ ।
ಕ್ಷತ್ರಿಯಾಣಾಮತ್ರ ವಾಸೋ ನಾಸ್ತ್ಯೇವ ಪರತಾಪನ ॥ ೨ ॥

ಇಂದ್ರೋ ಭವಿಷ್ಯತಿ ಪರಮಹರ್ಷಿಃ ಹಯಮಾಹರತ್ ।
ಪುರಾರಿರ್ವಾನ್ಯಥಾ ವಾಹಂ ತವ ಕಃ ಸಮುಪಾಹರೇತ್ ॥ ೩ ॥

---

## ಅರವತ್ತೊಂದನೆಯ ಅಧ್ಯಾಯವು.

೧. ಶತ್ರುಘ್ನನು ಹೇಳಿದನು :—ಎಲೈ ಮಂತ್ರಿಯೇ ಕುದುರೆಯನ್ನು ಕಟ್ಟಿದ ಆ ಬಾಲನಾರೆಂಬುಧನ್ನು ಬಲ್ಲೆಯಾ? ಅವನು ಸಮುದ್ರದಂತಿರುವ ನನ್ನ ಸೈನ್ಯವನ್ನು ನಾಶಪಡಿಸಿದ್ದಾನಲ್ಲ.

೨. ಸುಮತಿಯು ಹೇಳಿದನು :—ಸ್ವಾಮಿ, ಇವನು ಋಷಿಯಲ್ಲ, ಇದು ಉತ್ತಮವಾದ ವಾಲ್ಮೀಕಿಯ ಆಶ್ರಮವು, ಇಲ್ಲಿ ಕ್ಷತ್ರಿಯರು ಇರಲು ಕಾರಣವಿಲ್ಲ.

೩. ಇಲ್ಲಿ ಇಂದ್ರನಾಗಲಿ, ಶಿವನಾಗಲಿ ಹೊಟ್ಟೆಕಿಚ್ಚಿನಿಂದ ನಿನ್ನ ಕುದುರೆಯನ್ನು ಕಟ್ಟಿರಬಹುದು.

ಕಾಲಜಿದ್ಯೇನ ನಾಶಂ ವೈ ಪ್ರಾಪ್ತಃ ಪರಮದಾರುಣಃ ।
ತಂ ಪ್ರತಿ ಶ್ರೀಮಹಾರಾಜ ಗಂತಾ ಕಃ ಪುಷ್ಕಳಾನ್ಯತಃ ॥ ೪ ॥

ತ್ವಂ ಚ ವೀರೈರ್ಭಟೈಸ್ಸರ್ವೈ ರಾಜಿಭಿಃ ಪರಿವಾರಿತಃ ।
ತತ್ರ ಗಚ್ಛ ಸ್ವಸೈನ್ಯೇನ ಮಹತಾ ಶತ್ರುಕೃಂತನಃ ॥ ೫ ॥

ಗತ್ವಾ ಸಜೀವಿತಂ ವೀರಂ ಬಧ್ವಾ ತು ಕುತುಕಾರ್ಥಿನೇ ।
ದರ್ಶಯಿಷ್ಯಾಮಿ ರಾಮಾಯ ಮತಂ ಮೇ ತ್ವಿದಮಾದ್ಯತಂ ॥ ೬ ॥

ಇತಿ ವಾಕ್ಯಂ ಸಮಾಕರ್ಣ್ಯ ವೀರಾನ್ಸರ್ವಾನ್ಸಮಾದಿಶತ್ ।
ಸೈನ್ಯೇನ ಮಹತಾ ಯಾತ ಯೂಯಮಾಯಾಮಿ ಪೃಷ್ಠತಃ ॥ ೭ ॥

ನಿರ್ದಿಷ್ಟಾಸ್ತೇ ಕ್ಷಣಾದ್ವೀರಾ ಜಗ್ಮುರ್ಯತ್ರ ಲವೋ ಬಲೀ ।
ಸುವಿಸ್ಫಾರಯಂಸ್ತತ್ರ ಸುದೃಢಂ ಗುಣಪೂರಿತಂ ॥ ೮ ॥

ಆಯಾಂತಂ ತಂ ಸಮುದ್ದೃಷ್ಟ್ವಾ ಬಲಂ ವೀರಪ್ರಪೂರಿತಂ ।
ನ ಕಿಂಚಿನ್ಮನಸಾ ಬಿಭ್ಯೇ ಲವೇನ ಬಲಶಾಲಿನಾ ॥ ೯ ॥

---

೪. ವೀರನಾದ ಕಾಲಜಿತ್ತುವನ್ನೇ ಅವನು ಕೊಂದಿರುವಾಗ ಪುಷ್ಕಳನನ್ನೇ ಕಳುಹಿಸು. ಮತ್ತಾರ ಕೈಯಲ್ಲೂ ಅವನೊಡನೆ ನಿಲ್ಲಲು ಕೂಡ ಸಾಧ್ಯವಿಲ್ಲ.

೫. ನೀನು ಎಲ್ಲಾ ವೀರರಿಂದಲೂ ಕೂಡಿಕೊಂಡು ನಿನ್ನ ಸೈನ್ಯವನ್ನು ತೆಗೆದು ಕೊಂಡು ಹೋಗು, ಅವನನ್ನು ಎದುರಿಸು.

೬. ಆ ಹುಡುಗನನ್ನು ಕಟ್ಟಿ ಈ ಆಶ್ಚರ್ಯಕರವಾದ ಹುಡುಗನನ್ನು ರಾಮ ನಿಗೆ ತೋರಿಸಬೇಕು, ಇದು ನನ್ನ ಇಷ್ಟ.

೭. ಈ ಮಾತನ್ನು ಕೇಳಿ ಶತ್ರುಘ್ನನು ವೀರರೆಲ್ಲರನ್ನೂ ನೀವು ಸೈನ್ಯದೊಡನೆ ಹೋಗಿ ನಾನು ಹಿಂದಿನಿಂದ ಬರುತ್ತೇನೆ ಎಂದನು.

೮-೯. ರಾಜನು ಹೀಗೆ ಅಪ್ಪಣೆಮಾಡುತ್ತಲೂ ಎಲ್ಲರೂ ಒಡನೆಯೇ ಹೊರ ಟರು. ಆ ಲವನು ಅಲ್ಲಿ ಧನುಸ್ಸನ್ನು ಹೆದೆಯೇರಿಸಿಕೊಂಡು ಬರುತ್ತಿರುವ ಸೈನ್ಯವನ್ನು ನೋಡಿ ಧನುಸ್ಸನ್ನು ಠಣ್ಣೆಂದು ಶಬ್ದಮಾಡುತ್ತ ಮನಸ್ಸಿನಲ್ಲಿಯೂ ಸಹ ಭೀತಿಪಡದೇ ನಿಂತಿದ್ದನು.

ಲವಸ್ತಿಂಹ ಇವೋತ್ತಸ್ಥೌ ಮೃಗಾನ್ಮತ್ವಾಖಿಲಾನ್ಭಟಾನ್ ।
ಧನುರ್ವಿಸ್ಫಾರಯನ್ರೋಷಾಚ್ಚರಾನ್ಮುಂಚನ್ಸಹಸ್ರಶಃ ॥ ೧೦ ॥

ತೇ ಶರೈಃ ಪೀಡ್ಯಮಾನಾಸ್ತು ಮಹಾರೋಷಪ್ರಪೂರಿತಾಃ ।
ವೀರಂ ಬಾಲಂ ಮನ್ಯಮಾನಾಃ ಸಮ್ಮುಖಂ ಪ್ರಾದ್ರವಂಸ್ತದಾ ॥ ೧೧ ॥

ವೀರಾನ್ಸಹಸ್ರಶೋ ದೃಷ್ಟ್ವಾ ಭ್ರಮಿಭಿಃ ಪರ್ಯವಸ್ಥಿತಾನ್ ।
ಲವೋ ಜವೇನ ಸಂಧಾಯ ಶರಾನ್ರೋಷಪ್ರಪೂರಿತಃ ॥ ೧೨ ॥

ಭ್ರಮಿರಾದ್ಯಾ ಸಹಸ್ರೇಣ ದ್ವಿತೀಯಾಯುತಸಂಖ್ಯಯಾ ।
ತೃತೀಯಾಯುತಯುಗ್ಮೇನ ತುರೀಯಾಯುತಪಂಚಭಿಃ ॥ ೧೩ ॥

ಪಂಚಮೀ ಲಕ್ಷಯೋಧಾನಾಂ ಷಷ್ಠೀ ಯೋಧಾಯುತಾಧಿಕೈಃ ।
ಪಂಚಮೀ ಲಕ್ಷಯುಗ್ಮೇನ ಸಪ್ತಭಿರ್ಭ್ರಮಿಭಿರ್ಯುತಃ ॥ ೧೪ ॥

ಮಧ್ಯೇ ಲವೋ ಭ್ರಮಿವ್ಯಾಪ್ತಃ ಸಂಚರನ್ವಹ್ನಿವತ್ತದಾ ।
ದಾಹಯಾಮಾಸ ಸರ್ವಾನ್ವೈ ಸೈನಿಕಾನ್ಭ್ರಮಿಕಾರಕಾನ್ ॥ ೧೫ ॥

---

೧೦. ಲವನು ಎಲ್ಲಾ ಭಟರನ್ನೂ ಮೃಗಗಳೆಂದು ಭಾವಿಸಿ ಸಿಂಹದಂತೆ ಎದ್ದು. ನಾರಿಯನ್ನು ಧ್ವನಿಮಾಡುತ್ತ, ಕೋಪದಿಂದ ಸಾವಿರಗಟ್ಟಲೆ ಬಾಣಬಿಡಲು ಮೊದಲು ಮಾಡಿದನು.

೧೧. ಆ ಭಟರು ಲವನ ಬಾಣಗಳಿಂದ ನೊಂದು ಆ ಬಾಲಕನು ವೀರನೆಂದು ತಿಳಿದು ಕೋಪಾವೇಶದಿಂದ ಅವನ ಮೇಲೆ ಒಟ್ಟಾಗಿ ನುಗ್ಗಿಬಂದರು.

೧೨. ಆ ವೀರರೆಲ್ಲರೂ ಗುಂಪುಗುಂಪಾಗಿ ಬರುವುದನ್ನು ನೋಡಿ ಲವನು ಬಾಣಗಳನ್ನು ಹೂಡಿ ಹೊಡೆದನು.

೧೩-೧೪. ಒಂದನೆಯ ಸುತ್ತಿನ ಗುಂಪು ಸಾವಿರವೂ, ಹತ್ತು ಸಾವಿರದಿಂದ ಎರಡನೆಯದೂ, ಇಪ್ಪತ್ತುಸಾವಿರದಿಂದ ಮೂರನೆಯದೂ, ಐವತ್ತು ಸಾವಿರದಿಂದ ನಾಲ್ಕನೆಯದೂ, ಲಕ್ಷದಿಂದ ಐದನೆಯದೂ, ಒಂದು ಲಕ್ಷದ ಹತ್ತುಸಾವಿರದಿಂದ ಆರನೆಯದೂ, ಎರಡು ಲಕ್ಷದಿಂದ ಏಳನೆಯದೂ ಈ ರೀತಿ ಆ ಗುಂಪುಗಳು ಬೇರ್ಪಡಿಸಲ್ಪಟ್ಟಿದ್ದುವು.

೧೫. ಲವನು ಈ ಭ್ರಮಿಯ ಮಧ್ಯೇ ಸಿಕ್ಕಿಕೊಂಡು ಭ್ರಮಿಯಲ್ಲಿರುವ ಸೈನಿಕರನ್ನು ಬೆಂಕಿಯಂತೆ ಬಾಣದಿಂದ ಸುಡುತ್ತ ಹೊರಟನು.

ಕೇಚಿತ್ಖಡ್ಗೈಃ ಶರೈಃ ಕೇಚಿತ್ಕೇಚಿತ್ಪ್ರಾಸೈಶ್ಚ ಕುಂತಕೈಃ ।
ಪಟ್ಟಿಶೈಃ ಪರಿಘೈಸ್ಸರ್ವಾನ್ ಭ್ರಮಿಭಿರ್ಭಗ್ನಾ ಮಹಾತ್ಮನಾ ॥ ೧೬ ॥

ಸಪ್ತಭಿರ್ಭ್ರಮಿಭಿರ್ಮುಕ್ತೋ ರರಾಜ ಸ ಕುಶಾನುಜಃ ।
ಮೇಘವೃಂದವಿನಿರ್ಮುಕ್ತಃ ಶಶೀವ ಶರದಾಗಮೇ ॥ ೧೭ ॥

ಸ ಪ್ರಾಹರತ್ಸರ್ವಯೋಧಾನ್ ಭಿಂದನ್ಗಜಕರಾನ್ಬಹೂನ್ ।
ಛಿಂದಂಶ್ಶಿರಾಂಸಿ ವೀರಾಣಾಂ ಚಕ್ರೇಣಾತಿಮಹಾಂತಿ ಚ ॥ ೧೮ ॥

ಅನೇಕೇ ಪತಿತಾ ವೀರಾ ಲವಬಾಣಪ್ರಪೀಡಿತಾಃ ।
ಮುಮುಹುಃ ಸಮರೇಥಾನ್ಯೇ ನಷ್ಟಾ ಅನ್ಯೇ ಸುಕಾತರಾಃ ॥ ೧೯ ॥

ಪಲಾಯನಪರಂ ಸೈನ್ಯಂ ಲವಬಾಣಪ್ರಪೀಡಿತಂ ।
ವೀಕ್ಷ್ಯ ವೀರೋ ರಣೇ ಯೋದ್ಧುಂ ಪ್ರಾಯಾತ್ಪುಷ್ಕಲಸಂಜ್ಞಕಃ ॥ ೨೦ ॥

ತಿಷ್ಠ ತಿಷ್ಠೇತಿ ಚ ವದನ್ರೋಷಪೂರಿತಲೋಚನಃ ।
ರಥೇ ಸುಹಯಶೋಭಾಢ್ಯೇ ತಿಷ್ಠನ್ಪ್ರಾಯಾಲ್ಲವಂ ಬಲೀ ॥ ೨೧ ॥

---

೧೬. ಕೆಲವರನ್ನು ಖಡ್ಗದಿಂದಲೂ, ಕೆಲವರನ್ನು ಬಾಣದಿಂದಲೂ, ಕೆಲವರನ್ನು ಪ್ರಾಸದಿಂದಲೂ, ಕುಂತದಿಂದಲೂ, ಪಟ್ಟಿಶ ಪರಿಘಗಳಿಂದ ಕೆಲಕೆಲವರನ್ನೂ ಹೊಡೆದನು. ಈ ರೀತಿಯಾಗಿ ಎಲ್ಲಾ ಸುತ್ತುಗಳನ್ನೂ ನಾಶಮಾಡಿದನು.

೧೭. ಏಳು ಸುತ್ತುಗಳನ್ನೂ ಕತ್ತರಿಸಿ, ಮೇಘಮಧ್ಯದಿಂದ ಬಿಡಲ್ಪಟ್ಟ ಚಂದ್ರನಂತೆ ಪ್ರಕಾಶಿಸಿದನು.

೧೮. ಆ ಲವನು ಯೋಧರೆಲ್ಲರನ್ನೂ ಹೊಡೆಯುತ್ತ, ಆನೆಗಳ ಸೊಂಡಲನ್ನು ಕಡಿಯುತ್ತಾ, ವೀರರ ತಲೆಯನ್ನು ಚಕ್ರದಿಂದ ಕತ್ತರಿಸುತ್ತ ನಡೆದನು.

೧೯. ಲವನ ಬಾಣದ ಏಟಿನಿಂದ ಅನೇಕ ವೀರರು ಬಿದ್ದರು. ಕೆಲವರು ಮೂರ್ಛೆಹೋದರು. ಕೆಲವರು ಹೆದರಿ ಓಡಿಹೋದರು.

೨೦. ಲವನ ಬಾಣದ ಏಟಿನಿಂದ ಸೈನ್ಯವು ಓಡುತ್ತಿರುವುದನ್ನು ನೋಡಿ ಯುದ್ಧದಲ್ಲಿ ಎದುರಿಸಲು ಪುಷ್ಕಲನು ಹೊರಟನು.

೨೧. ಪುಷ್ಕಳನು ನಿಲ್ಲು ನಿಲ್ಲು ಎಂದೆನ್ನುತ್ತಾ ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಒಳ್ಳೆಯ ಕುದುರೆಗಳನ್ನು ಕಟ್ಟಿರುವ ರಥದಲ್ಲಿ ಕುಳಿತುಹೊರಟನು.

ಲವಂ ಪ್ರತಿ ಪ್ರತ್ಯುವಾಚ ಪುಷ್ಕಲಃ ಪರಮಾಸ್ತ್ರವಿತ್ ।
ತಿಷ್ಠ ದತ್ತೇ ಮಯಾ ಸಂಖ್ಯೇ ರಥೇ ಸುಹಯಶೋಭನೇ ॥ ೨೨ ॥

ಪದಾತಿನಾ ತ್ವಯಾ ಯುದ್ಧಂ ಕರೋಮಿ ಕಥಮಾಹವೇ ।
ತಸ್ಮಾತ್ತಿಷ್ಠ ರಥೇ ಪಶ್ಚಾದ್ಯೋತ್ಸ್ಯಾಮಿ ಭವತಾ ಸಹ ॥ ೨೩ ॥

ಏತದ್ವಾಕ್ಯಂ ನಿಶಮ್ಯಾಸೌ ಲವಃ ಪುಷ್ಕರಮಬ್ರವೀತ್ ।
ತ್ವಯಾ ದತ್ತೇ ರಥೇ ಸ್ಥಿತ್ವಾ ಯುದ್ಧಂ ಕುರ್ಯಾಮಹಂ ರಣೇ ॥ ೨೪ ॥

ತದಾ ಮೇ ಪಾಪಮೇವ ಸ್ಯಾಜ್ಜಯಸ್ಸಂದಿಗ್ಧ ಏವ ಹಿ ।
ನ ವಯಂ ಬ್ರಾಹ್ಮಣಾ ವೀರ ಪ್ರತಿಗ್ರಹಪರಾಯಣಾಃ ॥ ೨೫ ॥

ವಯಂ ತು ಕ್ಷತ್ರಿಯಾ ನಿತ್ಯಂ ದಾನಕರ್ಮಕ್ರಿಯಾರತಾಃ ।
ಇದಾನೀಂ ತ್ವದ್ರಥಂ ಕೋಪಾದ್ಭನಜ್ಮಿ ಪ್ರತ್ಯಹಂ ಭವಾನ್ ॥ ೨೬ ॥

---

೨೨. ಪುಷ್ಕಳನು ಲವನನ್ನು ಕುರಿತು ಸ್ವಲ್ಪ ನಿಲ್ಲು. ನಾನು ನಿನಗೊಂದು ರಥವನ್ನು ಕೊಡುತ್ತೇನೆ, ಅದರಲ್ಲಿ ಕುಳಿತುಕೊ.

೨೩. ಪದಾತಿಯಾಗಿರುವ ನಿನ್ನೊಡನೆ ನಾನು ರಥದಲ್ಲಿದ್ದು ಹೇಗೆ ಯುದ್ಧ ಮಾಡಲಿ ? ಆದ್ದರಿಂದ ನೀನು ರಥದಲ್ಲಿ ಕುಳಿತುಕೋ. ಅನಂತರ ನಿನ್ನೊಡನೆ ಯುದ್ಧ ಮಾಡುತ್ತೇನೆ.

೨೪. ಈ ಮಾತನ್ನು ಕೇಳಿ ಲವನು ಎಲೈ ಪುಷ್ಕಳನೇ, ನೀನು ಕೊಟ್ಟ ರಥದಲ್ಲಿ ಕುಳಿತು ನಾನು ಯುದ್ಧಮಾಡಿದರೆ ನನಗೆ ಪಾಪ ಬರುತ್ತದೆ. ಜಯವಂತೂ ಸಂಶಯವೇ.

೨೫-೨೬. ಎಲೈ ವೀರನೇ, ನಾವು ದಾನ ತೆಗೆದುಕೊಳ್ಳುವುದರಲ್ಲಿ ಶೂರರಾದ ಬ್ರಾಹ್ಮಣರಲ್ಲ. ನಿತ್ಯವೂ ದಾನಕೊಡುವುದರಲ್ಲಿ ಶೂರರಾದ ಕ್ಷತ್ರಿಯರು. ಈಗ ನಿನ್ನ ರಥವನ್ನು ನಾನು ಮುರಿದುಹಾಕಿದರೆ ನೀನೂ ನನ್ನಂತೆ ಪದಾತಿಯಾಗುತ್ತೀಯೆ. ಆಗ ನಾವಿಬ್ಬರೂ ಸರಿಯಾಗಿ ಯುದ್ಧಮಾಡಬಹುದು.

ಪಾದಚಾರೀ ಭವತ್ಯೇವ ಪಶ್ಚಾದ್ಯುದ್ಧಂ ಕರಿಷ್ಯತಿ ।
ಪುಷ್ಕಲೋ ವಾಕ್ಯಮಾಕರ್ಣ್ಯ ಧರ್ಮಧೈರ್ಯಸಮನ್ವಿತಂ ॥ ೨೭ ॥

ವಿಸಿಷ್ಮಿಯೇ ಚಿರಂ ಚಿತ್ತೇ ಧನುಸ್ಸಜ್ಯಮಥಾಕರೋತ್ ।
ತಮಾತ್ತಧನುಷಂ ದೃಷ್ಟ್ವಾ ಲವಃ ಕೋಪಸಮನ್ವಿತಃ ॥ ೨೮ ॥

ಚಾಪಂ ಚಿಚ್ಛೇದ ಪಾಣಿಸ್ಥಂ ಶರಸಂಧಾನಮಾಚರನ್ ।
ಸ ಯಾವತ್ಸಗುಣಂ ಚಾಪಂ ಕುರುತೇ ತಾವದುದ್ಧತಃ ॥ ೨೯ ॥

ರಥಭಂಗಂ ಚಕಾರಾಸ್ಯ ಸಮರೇ ಪ್ರಹಸನ್ಬಲೀ ।
ಭಗ್ನಂ ರಥಂ ಸ್ವಕಂ ವೀಕ್ಷ್ಯ ಧನುಶ್ಛಿನ್ನಂ ಮಹಾತ್ಮನಾ ॥ ೩೦ ॥

ಮಹಾವೀರಂ ಮನ್ಯಮಾನಃ ಪದಾತಿಃ ಪ್ರಾದ್ರವದ್ರಣೇ ।
ಉಭೌ ಧನುರ್ಧರೌ ವೀರಾವುಭಾವಪಿ ಶರೋದ್ಧತೌ ॥ ೩೧ ॥

---

೨೭. ಪುಷ್ಕಳನು ಧರ್ಮದಿಂದಲೂ, ಧೈರ್ಯದಿಂದಲೂ ಕೂಡಿದ ಈ ಮಾತನ್ನು ಕೇಳಿ ಮನಸ್ಸಿನಲ್ಲಿಯೇ ಆಶ್ಚರ್ಯಪಡುತ್ತಾ ಧನುಸ್ಸನ್ನು ಸಿದ್ಧಮಾಡಿಕೊಂಡನು.

೨೮. ಪುಷ್ಕಳನು ಧನುಸ್ಸನ್ನು ತೆಗೆದುಕೊಂಡುದನ್ನು ನೋಡಿ ಲವನು ಕೋಪಗೊಂಡು ಅವನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದನು. ಮತ್ತು ಶರವನ್ನೂ ಹೊಡೆದನು.

೨೯. ಅವನು ಧನುಸ್ಸನ್ನು ಸಿದ್ಧಮಾಡಿಕೊಳ್ಳುವಷ್ಟರಲ್ಲಿ ರಥವನ್ನು ಕತ್ತರಿಸಿದನು.

೩೦. ಧನುಸ್ಸನ್ನು ಕತ್ತರಿಸಿದುದನ್ನೂ, ರಥವನ್ನು ಕಡಿದುದನ್ನೂ ಪುಷ್ಕಳನು ನೋಡಿ, ಲವನು ಮಹಾವೀರನೆಂದು ತಿಳಿದು ಪದಾತಿಯಾಗಿಯೇ ಯುದ್ಧಕ್ಕೆ ಹೊರಟನು.

೩೧-೩೨. ಇಬ್ಬರೂ ಧನುರ್ಧಾರಿಗಳು. ಇಬ್ಬರೂ ಬಾಣದಲ್ಲಿ ಗಟ್ಟಿಗರು. ಹೀಗೆ ಇಬ್ಬರೂ ಯುದ್ಧಮಾಡುತ್ತಾ ರಕ್ತದಿಂದ ನೆನೆದುಹೋದರು. ಒಬ್ಬೊಬ್ಬರ

ಉಭೌ ಕ್ಷತಜವಿಪ್ರುಷ್ಟೌ ಭಿನ್ನಸಂನಾಹಿತಾವುಭೌ ।
ಪರಸ್ಪರಂ ಬಾಣಘಾತವಿಶೀರ್ಣವಪುಲಕ್ಷಿತೌ ॥ ೩೨ ॥

ಜಯಾಕಾಂಕ್ಷಾಂ ನಿಕುರ್ವಾಣೌ ಪರಸ್ಪರವಧೈಷಿಣೌ ।
ಜಯಂತಕಾರ್ತಿಕೇಯೌ ವಾ ಪುರಾರಿಃ ಮುರಭಿದ್ಯಥಾ ॥ ೩೩ ॥

ಏವಂ ಪರಸ್ಪರಂ ಯುದ್ಧಂ ಪ್ರಕುರ್ವಾಣೌ ರಣಾಂಗಣೇ ।
ಪುಷ್ಕಲಃ ಪ್ರತ್ಯುವಾಚಾಥ ಲವ ಶೂರಶಿರೋಮಣೇ ॥ ೩೪ ॥

ತ್ವಾದೃಶೋ ನ ಮಯಾ ದೃಷ್ಟಃ ಕಶ್ಚಿದ್ವೀರಶಿರೋಮಣೇ ।
ಶಿರಸ್ತೇ ಪಾತಯಾಮ್ಯದ್ಯ ಬಾಣೈಶ್ಶಿತಸುಪರ್ವಭಿಃ ॥ ೩೫ ॥

ಮಾ ಪಲಾಯಸ್ವ ಸಮರೇ ಪ್ರಾಣಾನ್ರಕ್ಷಸ್ವ ಸಂಯತಃ ।
ಏವಮುಕ್ತ್ವಾ ಲವಂ ವೀರಂ ಚಕಾರ ಶರಪಂಜರೇ ॥ ೩೬ ॥

ಪುಷ್ಕಲಸ್ಯ ಶರಾ ಭೂಮೌ ನಭಸಿ ವ್ಯಾಪ್ಯ ಸಂಸ್ಥಿತಾಃ ।
ಶರಪಂಜರಮಧ್ಯಸ್ಥೋ ಲವಃ ಪುಷ್ಕಲಮಬ್ರವೀತ್ ॥ ೩೭ ॥

---

ಸಿದ್ಧತೆಗಳನ್ನೇ ಮೊದಲೇ ನಾಶಮಾಡುತ್ತಿದ್ದರು. ಒಬ್ಬೊಬ್ಬರಿಗೆ ಬಾಣದ ಏಟಿನಿಂದ ದೇಹವು ಗಾಯಗಳಾಗಿದ್ದುದು ಕಂಡುಬಂದಿತ್ತು.

೩೩. ಒಬ್ಬೊಬ್ಬರಿಗೆ ಜಯವನ್ನಪೇಕ್ಷಿಸುತ್ತಾ ಒಬ್ಬರಿಗೊಬ್ಬರು ಕೊಲ್ಲಬೇಕೆಂದೆನ್ನುತ್ತಾ, ಇಂದ್ರನ ಮಗನಾದ ಜಯಂತ, ಕುಮಾರಸ್ವಾಮಿಯರಂತೆಯೂ ಶಿವ, ವಿಷ್ಣುಗಳಂತೆಯೂ ಹೋರಾಡುತ್ತ ಪ್ರಕಾಶಿಸುತ್ತಿದ್ದರು.

೩೪-೩೫. ಈ ರೀತಿಯಾಗಿ ಯುದ್ಧರಂಗದಲ್ಲಿ ಯುದ್ಧಮಾಡುತ್ತಿರಲು ಪುಷ್ಕಳನು ಶೂರಶಿರೋಮಣಿಯಾದ ಲವನೇ, ನಿನ್ನಂತಹ ಶೂರರನ್ನು ಒಬ್ಬನನ್ನೂ ನಾನು ನೋಡಲೇ ಇಲ್ಲ. ಈಗ ಚೂಪಾದ ಬಾಣಗಳಿಂದ ನಿನ್ನ ತಲೆಯನ್ನು ಕೆಡಹುತ್ತೇನೆ.

೩೬-೩೭. ಈರೀತಿ ಲವನಿಗೆ ಹೇಳಿ, ಪುಷ್ಕಳನು ಬಾಣಬಿಟ್ಟು ಭೂಮ್ಯಾಕಾಶಗಳನ್ನು ತುಂಬಿ ಲವನನ್ನು ಶರಪಂಜರದಲ್ಲಿ ಸಿಕ್ಕಿಸಿದನು. ಆಗ ಶರಪಂಜರಮಧ್ಯದಲ್ಲಿ ಸಿಕ್ಕಿಕೊಂಡ ಲವನು ಇಂತೆಂದನು.

॥ ಲವ ಉವಾಚ ॥

ಮಹತ್ಕರ್ಮ ಕೃತಂ ವೀರ ಯನ್ಮಾಂ ಬಾಣೈರಪೀಡಯಃ ।
ಇತ್ಯುಕ್ತ್ವಾ ಬಾಣಸಂಘಾತಂ ಪ್ರಚ್ಛಿದ್ಯ ವಚನಂ ಪುನಃ ॥ ೩೮ ॥

ಜಗಾದ ಪುಷ್ಕಲಂ ವೀರಂ ಶರಸಂಧಾನಕೋವಿದಃ ।
ಪಾಲಯಾತ್ಮಾನಮಾಜಿಸ್ಥಂ ಮಚ್ಛರಾಘಾತಪೀಡಿತಃ ॥ ೩೯ ॥

ಪತಿಷ್ಯಸಿ ಮಹೀಪೃಷ್ಠೇ ರುಧಿರೇಣ ಪರಿಪ್ಲುತಃ ।
ಏವಮುಕ್ತಂ ಸಮಾಕರ್ಣ್ಯ ಪುಷ್ಕಲಃ ಕೋಪಸಂಯುತಃ ॥ ೪೦ ॥

ರಣೇ ಸಂಯೋಧಯಾಮಾಸ ಲವಂ ವೀರಂ ಮಹಾಬಲಂ ।
ಲವಃ ಪ್ರಕುಪಿತೋ ಬಾಣಂ ತೀಕ್ಷ್ಣಂ ವೈರಿವಿದಾರಣಂ ॥ ೪೧ ॥

ಜಗ್ರಾಹ ಲವತಃ ಕೋಶಾದಾಶೀವಿಷಮಿವ ಕ್ರುಧಾ ।
ಜಾಜ್ವಲ್ಯಮಾನಶ್ಚ ಶರಶ್ಚಾಪಮುಕ್ತೋ ಲವಸ್ಯ ಚ ॥ ೪೨ ॥

---

೩೮. ನೀನು ನನ್ನನ್ನು ಬಾಣದಿಂದ ಹೊಡೆದುದನ್ನು ನೋಡಿದರೆ ಮಹಾ ಕಾರ್ಯಮಾಡಿದಂತೆಯೇ ಆಯಿತು ಎಂದು ಹೇಳಿ ಆ ಬಾಣಗಳನ್ನೆಲ್ಲಾ ಕತ್ತರಿಸಿ ಶರ ವನ್ನು ಸಂಧಾನಮಾಡುತ್ತಾ ಪುಷ್ಕಳನನ್ನು ಕುರಿತಿಂತೆಂದನು.

೩೯. ನಾನು ಹೊಡೆಯುವ ಏಟುಗಳನ್ನು ತಡೆದುಕೊಂಡು ಯುದ್ಧದಲ್ಲಿ ನಿನ್ನನ್ನು ನೀನು ಕಾಪಾಡಿಕೋ. ರಕ್ತದಿಂದ ನೆನೆದು ಭೂತಳದಲ್ಲಿ ಬೀಳುತ್ತೀಯೆ.

೪೦. ಇದನ್ನು ಕೇಳಿ ಪುಷ್ಕಳನು ಕೋಪಗೊಂಡು ಯುದ್ಧಕ್ಕೆ ನಿಂತನು.

೪೧. ಲವನು ವೈರಿಘಾತಕವಾದ ಬಾಣವನ್ನು ಕೋಪದಿಂದ ಸರ್ಪದಂತಿರುವ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ತೊಟ್ಟನು.

೪೨. ಬಾಣವನ್ನು ಧನುಸ್ಸಿನಿಂದ ಬಿಡುತ್ತಲೂ ಆ ಬಾಣವು ಜ್ವಲಿಸುತ್ತಾ ಹೃದಯವನ್ನು ಸೀಳಲು ಹೊರಟಿತು. ಅದನ್ನು ಪುಷ್ಕಳನು ಕತ್ತರಿಸಿದನು.

ಹೃದಯಂ ಭೇತ್ತುಮುದ್ಯುಕ್ತಿನ್ನೋ ಭಾರತಿನಾಶು ಸಃ ।
ಛಿನ್ನೇ ಭಾರತಿನಾ ಸಂಖ್ಯೇ ಶರೇಣ ಪ್ರಾಣಹಾರಿಣಾ ॥ ೪೩ ॥

ಅತ್ಯಂತಂ ಕುಪಿತೋ ಘೋರಂ ಶರಮನ್ಯಂ ಸಮಾದದೇ ।
ಆಕರ್ಣಾಕೃಷ್ಟಚಾಪೇನ ಸ ಮುಕ್ತೋ ನಿಶಿತಶ್ಶರಃ ॥ ೪೪ ॥

ಬಿಭೇದ ಹೃದಯಂ ತಸ್ಯ ಪುಷ್ಕಲಸ್ಯ ಮಹಾರಣೇ ।
ಛಿನ್ನೇ ವಕ್ಷಸಿ ವೀರೇಣ ಸಾಯಕೇನಾಶುಗಾಮಿನಾ ॥ ೪೫ ॥

ಪಪಾತ ಧರಣೀಪೃಷ್ಠೇ ಮಹಾಶೂರಶಿರೋಮಣಿಃ ।
ಪತಿತಂ ತು ಸಮಾಲೋಕ್ಯ ಪುಷ್ಕಲಂ ಪವನಾತ್ಮಜಃ ॥ ೪೬ ॥

ಗೃಹೀತ್ವಾ ರಾಘವಭ್ರಾತ್ರೇ ದದೌ ಮೂರ್ಛಾಸಮನ್ವಿತಂ ।
ಮೂರ್ಛಿತಂ ತಂ ಸಮಾಲಕ್ಷ್ಯ ಶೋಕವಿಹ್ವಲಮಾನಸಃ ॥ ೪೭ ॥

ಹನುಮಂತಂ ಲವಂ ಹಂತುಂ ನಿದಿದೇಶ ಕ್ರುಧಾನ್ವಿತಃ ।
ಹನೂಮಾನ್ಕೋಪಸಂಪ್ಲುಷ್ಟೋ ಲವಂ ಸಂಖ್ಯೇ ಮಹಾಬಲಂ ॥ ೪೮ ॥

---

೪೩. ಪ್ರಾಣಹಾರಿಯಾದ ಬಾಣವನ್ನೂ ಪುಷ್ಕಳನು ಕತ್ತರಿಸಲು ಲವನು ಕೋಪಗೊಂಡು ಬೇರೆ ಬಾಣವನ್ನು ತೊಟ್ಟನು.

೪೪. ಕಿವಿಯವರೆಗೂ ಎಳೆದುಬಿಡಲು ಆ ಬಾಣವು ಪುಷ್ಕಳನ ಎದೆಯನ್ನು ಸೀಳಿತು.

೪೫. ಎದೆಯಲ್ಲಿ ಏಟುಬಿದ್ದು ಸೀಳಿಹೋಗಲು ಶೂರನಾದ ಪುಷ್ಕಳನು ನೆಲಕ್ಕೆ ಬಿದ್ದನು.

೪೬. ಆಗ ಹನುಮಂತನು ಪುಷ್ಕಳನು ಬಿದ್ದುದನ್ನು ನೋಡಿ, ಮೂರ್ಛೆಗೊಂಡಿರುವುದನ್ನು ತಿಳಿದು, ಶತ್ರುಘ್ನನ ಬಳಿಗೆ ಕೊಂಡೊಯ್ದನು.

೪೭. ಪುಷ್ಕಳನು ಮೂರ್ಛಿತನಾದುದನ್ನು ನೋಡಿ ಶತ್ರುಘ್ನನು ದುಃಖಗೊಂಡು ಲವನನ್ನು ಕೊಲ್ಲಲು ಹನುಮಂತನಿಗೆ ಅಪ್ಪಣೆಮಾಡಿದನು.

೪೮. ಹನುಮಂತನು ಕೋಪಗೊಂಡು ಲವನನ್ನು ಕೊಲ್ಲಲು ಬೂರಗದ ಮರವನ್ನು ಕಿತ್ತುಕೊಂಡು ಬಂದನು.

ವಿಜೇತುಂ ತರಸಾ ಚಾಗಾದ್ವೃಕ್ಷಮುದ್ಯಮ್ಯ ಶಾಲ್ಮಲಂ ।
ವೃಕ್ಷೇಣ ಹತವಾನ್ಮೂರ್ಧ್ನಿ ಲವಸ್ಯ ಹನುಮಾನ್ಬಲೀ ॥ ೪೯ ॥

ತಮಾಪತಂತಂ ತರಸಾ ಚಿಚ್ಛೇದ ಶರಧಾ ಲವಃ ।
ಛಿನ್ನೇ ನಗೇ ಪುನಃ ಕ್ರೋಧಾದ್ವೃಕ್ಷಾನುತ್ಪಾಟ್ಯ ಮೂಲತಃ ॥ ೫೦ ॥

ತಾಡಯಾಮಾಸ ಹೃದಯೇ ಮಸ್ತಕೇ ಚ ಮಹಾಬಲಃ ।
ಯಾನ್ಯಾನ್ವೃಕ್ಷಾನ್ಸಮಾದತ್ತೇ ತಾಡನಾಯ ಸಮೀರಜಃ ॥ ೫೧ ॥

ತಾಂಸ್ತಾಂಶ್ಚಿಚ್ಛೇದ ತರಸಾ ಬಲವಾನ್ ಶಿತಪರ್ವಭಿಃ ।
ತದಾ ಶಿಲಾಸ್ಸಮುತ್ಪಾಟ್ಯ ಗಂಡಶೈಲೋಪಮಾಃ ಕಪಿಃ ॥ ೫೨ ॥

ಪಾತಯಾಮಾಸ ಶಿರಸಿ ಕ್ಷಿಪ್ರಂ ವೇಗೇನ ಮಾರುತಿಃ ।
ಸ ಆಹತಶ್ಶಿಲಾಸಂಘೈಃ ಸಂಘ್ಯೇ ಕೋದಂಡಮುನ್ನಯನ್ ॥ ೫೩ ॥

ಬಾಣೈಸ್ತಾಂ ಚೂರ್ಣಯಾಮಾಸ ಯುಯಂತ್ರಿಭಿರ್ಯಥಾ ಕಣಾಃ ।
ತದಾತ್ಯಂತಂ ಪ್ರಕುಪಿತೋ ಮಾರುತಿಃ ಪುಚ್ಛವೇಷ್ಟನಂ ॥ ೫೪ ॥

---

೪೯. ಆ ಮರದಿಂದ ತಲೆಯ ಮೇಲೆ ಹೊಡೆದನು. ಅವನು ಆ ಮರವು ಬರುತ್ತಿರುವಾಗಲೇ ಚೂರು ಚೂರುಮಾಡಿದನು.

೫೦. ಆ ಮರವನ್ನು ಕತ್ತರಿಸಲು ಹನುಮಂತನು ಕೋಪದಿಂದ ಮರಗಳನ್ನು ಕಿತ್ತುಕೊಂಡು ತಲೆ ಎದೆಗಳ ಮೇಲೆ ಹೊಡೆದನು.

೫೧. ಆ ಹನುಮಂತನು ಹೊಡೆಯಲು ತೆಗೆದುಕೊಂಡ ಮರವನ್ನೆಲ್ಲಾ ಲವನು ಹರಿತವಾದ ಬಾಣದಿಂದ ಕತ್ತರಿಸಿಬಿಟ್ಟನು.

೫೨. ಆಗ ಹನುಮಂತನು ಕಲ್ಲುಗಳನ್ನು ತೆಗೆದುಕೊಂಡು ತಲೆಯಮೇಲೆ ಹಾಕಿದನು.

೫೩. ಹೀಗೆ ಹೊಡೆಯಲು ಬಾಣಗಳನ್ನು ಬಿಡುತ್ತಾ ಆ ಕಲ್ಲೆಲ್ಲವನ್ನೂ, ಯಂತ್ರಗಾರರು ಹೇಗೆ ಅವನ್ನು ಸಣ್ಣಗೆಮಾಡುತ್ತಾರೋ ಹಾಗೆ ಸಣ್ಣಗೆ ಮಾಡಿದನು.

೫೪. ಆಗ ಹೆಚ್ಚಾಗಿ ಕೋಪಗೊಂಡ ಮಾರುತಿಯು ಲವನನ್ನು ಬಾಲದಲ್ಲಿ ಸುತ್ತಿ ಹಿಡಿದನು.

ಚಕಾರ ಸಮರೋಽಪಾನ್ತೇ ಲವಸ್ಯ ಬಲಿನಃ ಕೃತೀ ।
ಸ ಪುಚ್ಛೇನ ಸಮಾವಿದ್ಧಂ ವೀಕ್ಷ್ಯ ಸ್ವಾಂಬಾಂ ಹೃದಿ ಸ್ಮರನ್ ॥ ೫೫ ॥

ಮುಷ್ಟಿನಾ ತಾಡಯಾಮಾಸ ಲಾಂಗೂಲಂ ಮಾರುತೇರ್ಬಲೀ ।
ತನ್ಮುಷ್ಟಿಘಾತವ್ಯಥಿತೋ ಮಾರುತಿಸ್ತಮಮೂಮುಚತ್ ॥ ೫೬ ॥

ಸ ಮುಕ್ತಃ ಪುಚ್ಛತೋ ಯುದ್ಧೇ ಶರಾನ್ಮುಂಚನ್ನಭೂದ್ಬಲೀ ।
ಸ ಶರಾಘಾತದುರ್ಬಾಧಸಂಪೀಡಿತತನುಃ ಕಪಿಃ ॥ ೫೭ ॥

ಬಾಣವರ್ಷಂ ಮನ್ಯಮಾನೋ ದುಃಸಹಂ ಸಮರೇ ಬಹು ।
ಕಿಂ ಕರ್ತವ್ಯಮಿತೋಽಸ್ಮಾಭಿಃ ಪಲಾಯ್ಯ ಯದಿ ಗಮ್ಯತೇ ॥ ೫೮ ॥

ತದಾ ಮೇ ಸ್ವಾಮಿನೋ ಲಜ್ಜಾ ತಾಡಯೇದ್ಬಾಲಕೋಽತ್ರ ಮಾಂ ।
ಬ್ರಹ್ಮದತ್ತವರತ್ವಾತ್ತು ಮೂರ್ಛಾ ನ ಮರಣಂ ನ ಹಿ ॥ ೫೯ ॥

ದುಸ್ಸಹಾ ಬಾಣಪೀಡಾತ್ರ ಕಿಂ ಕರ್ತವ್ಯಂ ಮಯಾಧುನಾ ।
ಶತ್ರುಘ್ನಸ್ಸಮರೇ ಗತ್ವಾ ಜಯಂ ಪ್ರಾಪ್ನೋತು ಬಾಲಕಾತ್ ॥ ೬೦ ॥

---

೫೫. ಪುಚ್ಛದಿಂದ ಹಿಡಿದುದನ್ನು ನೋಡಿ ಲವನು ತಾಯಿಯನ್ನು ಸ್ಮರಿಸುತ್ತಾ ಆ ಬಾಲವನ್ನು ಮುಷ್ಟಿಯಿಂದ ಹೊಡೆದನು.

೫೬. ಆ ಏಟಿನಿಂದ ನೋವಾಗಿ ಹನುಮಂತನು ಬಾಲದ ಕಟ್ಟನ್ನು ಬಿಟ್ಟುಬಿಟ್ಟನು.

೫೭. ಲವನು ಬಾಲದ ಕಟ್ಟಿನಿಂದ ಬಿಡಲ್ಪಡಲು ಬಾಣವನ್ನು ಬಿಡಲು ಮೊದಲುಮಾಡಿದನು. ಆ ಬಾಣದಿಂದ ಆದ ತೊಂದರೆಯು ಬಹು ಕಷ್ಟವಾಗಿ ಹನುಮಂತನಿಗೆ ಕಂಡುಬಂದಿತು.

೫೮-೫೯. ನಾನೇನು ಮಾಡಲಿ? ಯುದ್ಧದಿಂದ ಓಡಿಹೋದರೆ ಆಗ ನನ್ನ ಸ್ವಾಮಿಗೆ ನಾಚಿಕೆಯಾಗುತ್ತದೆ. ಇಲ್ಲಾದರೋ ಹುಡುಗನ ಹೊಡೆತ ಬಲವಾಗಿದೆ ಸಾವಾಗಲಿ, ಮೂರ್ಛೆಯಾಗಲಿ ಬ್ರಹ್ಮನು ಕೊಟ್ಟ ವರದಿಂದ ನನಗೆ ಬರುವಂತಿಲ್ಲ. ಈಗೇನು ಮಾಡಲಿ?

೬೦. ಈ ಬಾಣದ ಪೆಟ್ಟುಗಳು ಬಹು ಜೋರಾಗಿವೆ. ಈಗೇನು ಮಾಡಲಿ? ಶತ್ರುಘ್ನನೇ ಯುದ್ಧರಂಗಕ್ಕೆ ಹೋಗಿ ಆ ಹುಡುಗನಿಂದ ಜಯವನ್ನು ಹೊಂದಲಿ.

**ಅಹಂ ತಾವಜ್ಜಯಾಕಾಂಕ್ಷೀ ಶಯೇ ಕಪಟಮೂರ್ಛಯಾ ।**
**ಇತ್ಯೇವಂ ಮಾನಸೇ ಕೃತ್ವಾ ಸ್ವಾಪತದ್ರಣಮಂಡಲೇ ॥ ೬೧ ॥**

**ಪಶ್ಯತಾಂ ಸರ್ವವೀರಾಣಾಂ ಕಪಟೇನ ವಿಮೂರ್ಛಿತಃ ।**
**ತಮಾಜ್ಞಾಯ ಹನೂಮಂತಂ ಮಹಾಬಲಪರಾಕ್ರಮಂ ।**
**ಜಘಾನ ಸರ್ವಾನ್ನೃಪತೀಂಶ್ಶರನೋಕ್ಷವಿಚಕ್ಷಣಃ ॥ ೬೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ**
**ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ**
**ಹನೂಮತ್ಪತನಂನಾಮ ಏಕಷಷ್ಟಿತಮೋಧ್ಯಾಯಃ**

---

೬೧. ನನಗೂ ಜಯದ ಆಸೆಯುಂಟು. ಆದರೆ ಈ ವಿಟುಗಳನ್ನು ಎದುರಿಸುವುದಕ್ಕೆ ಸಾಧ್ಯವಿಲ್ಲ. ಓಡಿಹೋಗುವುದೆಂದರೆ ಅಯೋಗ್ಯವಾದ ಕೆಲಸ. ಆದ್ದರಿಂದ ಮೂರ್ಛೆಬಂದವನಂತೆ ನಟಿಸುತ್ತಾ ಬಿದ್ದುಬಿಡುವೆನೆಂದು ರಣಮಂಡಲದಲ್ಲಿ ಬಿದ್ದು ಬಿಟ್ಟನು.

೬೨. ಈ ರೀತಿ ವೀರರು ನೋಡುತ್ತಿರುವಂತೆಯೇ ಮೂರ್ಛೆಹೋದನು. ಇವನು ಮೂರ್ಛೆಬಿದ್ದದ್ದನ್ನು ತಿಳಿದು ವೀರನಾದ ಲವನು ಮಿಕ್ಕ ರಾಜರುಗಳನ್ನು ಬಾಣಗಳಿಂದ ಹೊಡೆಯಲು ಮೊದಲುಮಾಡಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ ಸಂವಾದದ
ರಾಮಾಶ್ವಮೇಧದಲ್ಲಿ ಹನೂಮತ್ಪತನವೆಂಬ ಅರವತ್ತೊಂದನೆಯ
ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವಿಷಷ್ಠಿತಮೋಽಧ್ಯಾಯಃ

---

॥ ಶೇಷ ಉವಾಚ ॥

ಮಾರುತಿಂ ಮೂರ್ಛಿತಂ ಶ್ರುತ್ವಾ ಶತ್ರುಘ್ನಶ್ಶೋಕಮಾಪ ವೈ ।
ಕಿಂ ಕರ್ತವ್ಯಂ ಮಯಾ ಸಂಖ್ಯೇ ಬಾಲಕೋಽಯಂ ಮಹಾಬಲಃ ॥ ೧ ॥

ಸ್ವಯಂ ರಥೇ ಹೇಮಮಯೇ ತಿಷ್ಠನ್ವೀರವರೈಸ್ಸಹ ।
ಯೋದ್ಧುಂ ಪ್ರಾಗಾಲ್ಲವೋ ಯತ್ರ ವಿಚಿತ್ರರಣಕೋವಿದಃ ॥ ೨ ॥

ಲವಂ ದದರ್ಶ ಶಿಶುತಾಂ ಪ್ರಾಪ್ತಂ ರಾಮಮಿವ ಕ್ಷಿತೌ ।
ಧನುರ್ಬಾಣಕರಂ ವೀರಾನ್ಕ್ಷಿಪಂತಂ ರಣಮೂರ್ಧನಿ ॥ ೩ ॥

---

## ಅರವತ್ತೆರಡನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಹನುಮಂತನು ಮೂರ್ಛಿತನಾದುದನ್ನು ಶತ್ರುಘ್ನನು ಕೇಳಿ ದುಃಖಗೊಂಡನು. ಏನು ಮಾಡಲಿ ? ಬಹು ಬಲಿಷ್ಠನಲ್ಲ ಎಂದುಕೊಂಡನು.

೨. ಶತ್ರುಘ್ನನು ಚಿನ್ನದ ರಥದಲ್ಲಿ ಕುಳಿತು ವೀರರನ್ನು ಜೊತೆಯಲ್ಲಿ ಕರೆದುಕೊಂಡು ಲವನಿರುವಲ್ಲಿಗೆ ಯುದ್ಧಕ್ಕೆ ಹೊರಟನು.

೩. ಶ್ರೀರಾಮನು ಬಾಲಕನಾಗಿದ್ದಾಗ ಇರುವವಂತೆ ಧನುರ್ಬಾಣಗಳನ್ನು ಧರಿಸಿ ವೀರರನ್ನು ಹೊಡೆಯುತ್ತಿರುವ ಲವನನ್ನು ನೋಡಿದನು.

**ವಿಚಾರಯಾಮಾಸ ತದಾ ಕೋಽಯಂ ರಾಮಸ್ವರೂಪಧೃತ್ ।**
**ನೀಲೋತ್ಪಲದಳಶ್ಯಾಮಂ ವಪುರ್ಬಿಭ್ರನ್ಮನೋಹರಂ ॥ ೨ ॥**

**ಏಷ ವಿದೇಹತನುಜಾಸುತೋ ಭವತಿ ನಾನ್ಯಥಾ ।**
**ಅಸ್ಮಾನ್ವಿಜಿತ್ಯ ಸಮರೇ ಯಾಸ್ಯತೇ ಮೃಗರಾಡಿವ ॥ ೩ ॥**

**ಅಸ್ಮಾಕಂ ನ ಜಯೋ ಭವ್ಯಃ ಶಕ್ತ್ಯಾ ವಿರಹಿತಾತ್ಮನಾಂ ।**
**ಅಶಕ್ತಾಃ ಕಿಂ ಕರಿಷ್ಯಾಮಃ ಸಮರೇ ರಣಕೋವಿದಾಃ ॥ ೪ ॥**

**ಇತ್ಯೇವಂ ಸ ವಿಚಾರ್ಯಾಂತರ್ಬಾಲಕಂ ತು ವಚೋಽಬ್ರವೀತ್ ।**
**ರಣೇ ಕುತುಕಕರ್ತಾರಂ ವೀರಕೋಟಿನಿಪಾತಕಂ ॥ ೫ ॥**

**॥ ಶತ್ರುಘ್ನ ಉವಾಚ ॥**

**ಕಸ್ತ್ವಂ ಬಾಲ ರಣೇಽಸ್ಮಾಕಂ ವೀರಾನ್ಪಾತಯಸಿ ಕ್ಷಿತೌ ।**
**ನ ಜಾನೀಷೇ ಬಲಂ ರಾಜ್ಞೋ ರಾಮಸ್ಯ ದನುಜಾರ್ದಿನಃ ॥ ೬ ॥**

---

೨. ಆಗ ಈ ಹುಡುಗನಾರು ? ಶ್ರೀರಾಮನಂತೆಯೇ ಇದ್ದಾನಲ್ಲ! ದೇಹವೂ ಕೂಡ ರಾಮನ ದೇಹದಂತೆ ಕನ್ನೈದಿಲೆಯ ಬಣ್ಣವಾಗಿರುವುದಲ್ಲ.

೩. ಇವನು ಸೀತಾದೇವಿಯ ಮಗನೇ ಇರಬಹುದು. ಬೇರೆಯಲ್ಲ. ಯುದ್ಧದಲ್ಲಿ ನಮ್ಮನ್ನು ಜಯಿಸಿ ಸಿಂಹದಂತೆ ಹೋಗುತ್ತಾನೆ.

೪. ನಮಗೆ ಶಕ್ತಿಯಿಲ್ಲ. ಆದ್ದರಿಂದ ನಮಗೆ ಜಯವುಂಟಾಗುವುದಿಲ್ಲ. ಯುದ್ಧದಲ್ಲಿ ನಿಸ್ಸೀಮರಾದರೂ ಅಶಕ್ತರಾದ ನಾವೇನು ಮಾಡಲು ಸಾಧ್ಯ ?

೫. ಶತ್ರುಘ್ನನು ಹೀಗೆ ಯೋಚಿಸಿ ವೀರರನ್ನು ನಾಶಪಡಿಸಿ, ಇನ್ನೂ ಯುದ್ಧದಲ್ಲಿ ತವಕಪಡುತ್ತಿರುವ ಆ ಹುಡುಗನನ್ನು ಕುರಿತು ಇಂತೆಂದನು.

೬. ಶತ್ರುಘ್ನನು ಹೇಳಿದನು :—ಎಲೈ ಬಾಲನೇ, ನೀನಾರು ? ನಮ್ಮ ವೀರರನ್ನೆಲ್ಲಾ ಕೆಡವಿರುವೆಯಲ್ಲ? ರಾಕ್ಷಸಹಂತಕನಾದ ರಾಮನ ಬಲವು ನಿನಗೇನು ಗೊತ್ತು ?

ಕಾ ತೇ ಮಾತಾ ಪಿತಾ ಕಸ್ತೇ ಸಭಾಗ್ಯೋ ಜಯಮಾಪ್ತವಾನ್ ।
ನಾಮ ಕಿಂ ವಿಶ್ರುತಂ ಲೋಕೇ ಜಾನೀಯಾಂ ತೇ ಮಹಾಬಲ ॥ ೯ ॥

ಮುಂಚ ವಾಹಂ ಕಥಂ ಬದ್ಧಃ ಶಿಶುತ್ವಾತ್ ಕ್ಷಮಾಮಿ ತೇ ।
ಆಯಾಹಿ ರಾಮಂ ವೀಕ್ಷಸ್ವ ದಾಸ್ಯತೇ ಬಹುಲಂ ತವ ॥ ೧೦ ॥

ಇತ್ಯುಕ್ತೋ ಬಾಲಕೋ ವೀರೋ ವಚಃ ಶತ್ರುಘ್ನಮಾವದತ್ ।
ಕಿಂ ತೇ ನಾಮ್ನಾಥ ಪಿತ್ರಾ ವಾ ಕುಲೇನ ವಯಸಾ ತಥಾ ॥ ೧೧ ॥

ಯುಧ್ಯಸ್ವ ಸಮರೇ ವೀರ ಚೇತ್ತ್ವಂ ಬಲಯುತೋ ಭವೇಃ ।
ಕುಶಂ ವೀರಂ ನಮಸ್ಕೃತ್ಯ ಪಾದಯೋರ್ಯಾಹಿ ನಾನ್ಯಥಾ ॥ ೧೨ ॥

ಭ್ರಾತಾ ರಾಮಸ್ಯ ವೀರೋಽಭೂರ್ನಾವಯೋರ್ಬಲಿನಾಂ ವರಃ ।
ವಾಹಂ ವಿಮೋಚಯ ಬಲಾಚ್ಛಕ್ತಿಸ್ತೇ ವಿದ್ಯತೇ ಯದಿ ॥ ೧೩ ॥

---

೯. ನಿನ್ನ ತಾಯಿಯಾರು ? ತಂದೆಯಾರು ? ನೀನೇ ಭಾಗ್ಯಶಾಲಿ, ಜಯ ವನ್ನು ಹೊಂದಿರುವಿಯಲ್ಲ. ನಿನ್ನ ಹೆಸರೇನು ? ವೀರನೇ , ನನಗೆ ಸ್ವಲ್ಪ ತಿಳಿಸು.

೧೦. ಕುದುರೆಯನ್ನು ಬಿಟ್ಟುಬಿಡು. ಏಕೆ ಕಟ್ಟಿದ್ದೀಯೆ? ನೀನು ಹುಡುಗ ನಾದುದರಿಂದ ಕ್ಷಮಿಸುತ್ತೇನೆ. ಬಾ, ರಾಮನನ್ನು ನೋಡು. ನಿನಗೆ ಬೇಕಾದುದನ್ನು ಕೊಡುತ್ತಾನೆ.

೧೧. ಆಗ ಆ ವೀರನಾದ ಬಾಲಕನು, ನಿನಗೆ ನನ್ನ ಹೆಸರನ್ನಾಗಲಿ, ತಾಯಿತಂದೆಗಳನ್ನಾಗಲಿ, ವಯಸ್ಸನ್ನಾಗಲಿ, ಕಟ್ಟಿಕೊಂಡೇನು ?

೧೨. ನೀನು ಬಲಿಷ್ಠನಾಗಿದ್ದರೆ ಸಮರರಂಗದಲ್ಲಿ ನಿಂತು ಯುದ್ಧಮಾಡು. ಇಲ್ಲದಿದ್ದರೆ ನಮ್ಮಣ್ಣನಾದ ಕುಶನಿಗೆ ನಮಸ್ಕರಿಸಿ ಹೋಗು ಬಾ.

೧೩. ನೀನು ರಾಮನ ತಮ್ಮನಾಗಿರಬಹುದು, ಬಲಿಷ್ಠನಾಗಿರಬಹುದು, ನಮ್ಮಗಳಿಗಿಂತ ನೀನೇನು ಬಲಿಷ್ಠನಲ್ಲ. ಹಾಗೆ ನಿನಗೆ ಶಕ್ತಿಯಿದ್ದರೆ ಬಲಾತ್ಕಾರದಿಂದ ಕುದುರೆಯನ್ನು ಬಿಡಿಸಿಕೊಂಡು ಹೋಗು ಎಂದನು.

ಇತ್ಯುಕ್ತ್ವಾ ಶರಸಂಘಾತಂ ಕೃತ್ವಾ ಸ್ತ್ರಾಹರದುತ್ಕಟಃ ।
ಹೃದಯೇ ಮಸ್ತಕೇ ಚೈವ ಭುಜಯೋಃ ರಣಮಂಡಲೇ ॥ ೧೪ ॥

ತದಾ ಪ್ರಕುಪಿತೋ ರಾಜಾ ಧನುಸ್ಸಜ್ಜಮಥಾಕರೋತ್
ನಾದಯನ್ಮೇಘಗಂಭೀರಂ ತ್ರಾಸಯನ್ನಿವ ಬಾಲಕಂ ॥ ೧೫ ॥

ಬಾಣಾನಪರಿಸಂಖ್ಯಾಕಾನ್ಮುಮೋಚ ಬಲಿನಾಂ ವರಃ ।
ಬಾಲೋ ಬಲೇನ ಚಿಚ್ಛೇದ ಸರ್ವಾಂಸ್ತಾನ್ನಾಯಕವ್ರಜಾನ್ ॥ ೧೬ ॥

ಲವಸ್ಯ ಕೋಟಿಧಾ ಮುಕ್ತೈರ್ಬಾಣೈರ್ವ್ಯಾಪ್ತಂ ಮಹೀತಳಂ ।
ವ್ಯತೀಪಾತೇ ಪ್ರದತ್ತಸ್ಯ ದಾನಸ್ಯೇವಾಕ್ಷಯಂ ಗತಾಃ ॥ ೧೭ ॥

ತೇ ಬಾಣಾ ವ್ಯೋಮ ಸಕಲಂ ವ್ಯಾಪ್ನುವಂಲ್ಲವಸಂಧಿತಾಃ ।
ಸೂರ್ಯಮಂಡಲಮಾಸಾದ್ಯ ಪ್ರವರ್ತಂತೇ ಸಮಂತತಃ ॥ ೧೮ ॥

ಮಾರುತೋ ನಾವಿಶದ್ಯತ್ರ ಬಾಣಪಂಜರಗೋಚರೇ ।
ಮನುಷ್ಯಾಣಾಂ ತು ಕಾ ವಾರ್ತಾ ಕ್ಷಣಜೀವಿತಶಂಸಿನಾಂ ॥ ೧೯ ॥

---

೧೪. ಹೀಗೆನ್ನುತ್ತಾ ಆ ವೀರನು ತಲೆ, ಎದೆ, ಭುಜಗಳಿಗೆ ಬಾಣದಿಂದ ಹೊಡೆದನು.

೧೫. ಆಗ ಕೋಪಗೊಂಡ ಈ ಶತ್ರುಘ್ನನು ಧನುಸ್ಸನ್ನು ಸಿದ್ಧವಾಡಿಕೊಂಡು ಹುಡುಗನಿಗೆ ಹೆದರಿಕೆಯನ್ನುಂಟುಮಾಡುವಂತೆ ಠೇಂಕರಿಸಿದನು.

೧೬. ಮತ್ತು ಅಸಂಖ್ಯವಾದ ಬಾಣಗಳನ್ನು ಬಿಟ್ಟನು. ಆ ಬಾಲಕನು ಅವನ್ನೆಲ್ಲಾ ಕತ್ತರಿಸಿದನು.

೧೭. ಲವನು ಬಿಟ್ಟ ಬಾಣಗಳು ವ್ಯತೀಪಾತದಲ್ಲಿ ಮಾಡಿದ ದಾನವು ಅಕ್ಷಯವಾಗುವಂತೆ ಅಕ್ಷಯವಾಗಿ ಭೂವ್ಯೋಮಾಕಾಶಗಳನ್ನು ವ್ಯಾಪಿಸಿದುವು.

೧೮. ಲವನು ಬಿಟ್ಟ ಆ ಬಾಣಗಳು ಆಕಾಶಕ್ಕೆ ಹೋಗಿ ಅಲ್ಲಿಂದೆಲ್ಲಾ ಕಡೆಗೂ ವ್ಯಾಪಿಸುತ್ತಿದ್ದುವು.

೧೯. ಆ ಬಾಣಪಂಜರದಲ್ಲಿ ಗಾಳಿಯೇ ನುಗ್ಗುವುದಕ್ಕಾಗದಿರುವಾಗ ಕ್ಷಣಜೀವಿಗಳಾದ ಮನುಷ್ಯರ ವಿಷಯವೇನು?

ತದ್ಬಾಣಾನ್ವ್ಯಾಪೃತಾನ್ದೃಷ್ಟ್ವಾ ಶತ್ರುಘ್ನೋ ವಿಸ್ಮಯಂ ಗತಃ ।
ಅಚ್ಛಿನಚ್ಛತಸಾಹಸ್ರಂ ಬಾಣಮೋಚನಕೋವಿದಃ ॥ ೨೦ ॥

ತಾಂಶ್ಛಿನ್ನಾನ್ಸಾಯಕಾನ್ಸರ್ವಾನ್ಸ್ವೀಯಾನ್ದೃಷ್ಟ್ವಾ ಕುಶಾಸುಗಃ ।
ಧನುಶ್ಚಿಚ್ಛೇದ ತರಸಾ ಶತ್ರುಘ್ನಸ್ಯ ಮಹೀಪತೇಃ ॥ ೨೧ ॥

ಸೋಽನ್ಯದ್ಧನುರುಪಾದಾಯ ಯಾವನ್ಮುಂಚತಿ ಸಾಯಕಾನ್ ।
ತಾವದ್ಬಭಂಜ ಸ ರಥಂ ಸಾಯಕೈಸ್ತ್ರಿತಪರ್ವಭಿಃ ॥ ೨೨ ॥

ಕರಸ್ಥಮಚ್ಛಿನಚ್ಚಾಪಂ ಸುದೃಢಂ ಗುಣಪೂರಿತಂ ।
ತತ್ಕರ್ಮಪೂಜಯನ್ವೀರಾ ರಣಮಂಡಲವರ್ತಿನಃ ॥ ೨೩ ॥

ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ।
ಅನ್ಯಂ ರಥಂ ಸಮಾಸ್ಥಾಯ ಯಯೌ ಯೋದ್ಧುಂ ಲವಂ ಬಲಾತ್ ॥ ೨೪ ॥

ಅನೇಕಬಾಣನಿರ್ಭಿನ್ನಸ್ರವದ್ರಕ್ತಕಳೇಬರಃ ।
ಶುಶುಭೇ ರಣಮಧ್ಯಸ್ಥಃ ಕಿಂಶುಕಶ್ಚೈವ ಪುಷ್ಪಿತಃ ॥ ೨೫ ॥

---

೨೦. ಆ ಬಾಣಗಳ ವ್ಯಾಪನೆಯನ್ನು ನೋಡಿ ಶತ್ರುಘ್ನನು ಆಶ್ಚರ್ಯಪಡುತ್ತಾ ಆ ಬಾಣಗಳನ್ನು ಕತ್ತರಿಸಿದನು.

೨೧. ಲವನು ತನ್ನ ಬಾಣಗಳನ್ನು ಕತ್ತರಿಸಿದುದನ್ನು ನೋಡಿ ಆ ಶತ್ರುಘ್ನನ ಧನುಸ್ಸನ್ನು ಕತ್ತರಿದನು.

೨೨. ಆ ಶತ್ರುಘ್ನನು ಮತ್ತೊಂದು ಧನುಸ್ಸನ್ನು ತೆಗೆದುಕೊಂಡು ಬಾಣ ಬಿಡುವಷ್ಟರಲ್ಲಿ ಲವನು ಅವನ ರಥವನ್ನೇ ಕತ್ತರಿಸಿದನು.

೨೩. ಅನಂತರ ಕೈಗೆ ತೆಗೆದುಕೊಂಡ ಧನುಸ್ಸನ್ನೂ ಕತ್ತರಿಸಿದನು. ಆಗ ವೀರರೆಲ್ಲರೂ ಆ ಕೆಲಸಕ್ಕೆ ಆಶ್ಚರ್ಯಪಟ್ಟರು.

೨೪. ಅವನ ರಥ ಧನುಸ್ಸುಗಳು ನಾಶವಾಗಲು ಬೇರೆ ರಥ ಧನುಸ್ಸನ್ನು ತೆಗೆದುಕೊಂಡು ಯುದ್ಧಕ್ಕೆ ಹೋದನು.

೨೫. ಬಾಣಗಳ ಪೆಟ್ಟಿನಿಂದ ರಕ್ತ ಸುರಿಯುತ್ತಿರಲು ಹೂಬಿಟ್ಟ ಮುತ್ತುಗದ ಮರದಂತೆ ಕಂಡನು.

ಶತ್ರುಘ್ನಬಾಣಪ್ರಹತಃ ಪರಂ ಕೋಪಮುಪಾಗಮತ್ ।
ಬಾಣಸಂಧಾನಚತುರಃ ಕುಂಡಲೀಕೃತಚಾಪವಾನ್ ॥ ೨೬ ॥

ವಿಶೀರ್ಣಕವಚಂ ದೇಹಂ ಶಿರೋಮುಕುಟವರ್ಜಿತಂ ।
ಪ್ರವದ್ರಕ್ತಪರಿಪ್ಲುಷ್ಟಂ ಶತ್ರುಘ್ನಸ್ಯ ಚಕಾರ ಸಃ ॥ ೨೭ ॥

ತದಾ ರಾಮಾನುಜಃ ಕ್ರುದ್ಧೋ ದಶಬಾಣಾನ್ಶಿತಾಗ್ರಕಾನ್ ।
ಮುಮೋಚ ಪ್ರಾಣಸಂಹಾರಕಾರಕಾನ್ಕುಪಿತೋ ಭೃಶಂ ॥ ೨೮ ॥

ಸ ತಾಂಸ್ತಾಂಸ್ತಿಲಶಃಕೃತ್ವಾ ಬಾಣೈರ್ನಿಶಿತಪರ್ವಭಿಃ ।
ತಾಡಯಾಮಾಸ ಹೃದಯೇ ಶತ್ರುಘ್ನಸ್ಯ ಶರಾಷ್ಟಭಿಃ ॥ ೨೯ ॥

ಅತ್ಯಂತಬಾಣಪೀಡಾರ್ತೋ ಲವಂ ಬಲಮನುಸ್ಮರನ್ ।
ದುಸ್ಸಹಂ ಮನ್ಯಮಾನಸ್ತಂ ಶರಾನ್ಮುಂಚನ್ನಭೂತ್ತದಾ ॥ ೩೦ ॥

ತದಾ ಲವೇನ ತೀಕ್ಷ್ಣೇನ ಹೃದಿ ಭಿನ್ನೋ ವಿಶಾಲಕೇ ।
ಅರ್ಧಚಂದ್ರಸಮಾನೇನ ತೀಕ್ಷ್ಣಪರ್ವಸುಶೋಭಿನಾ ॥ ೩೧ ॥

---

೨೬-೨೭. ಶತ್ರುಘ್ನನು ಹೊಡೆಯಲು ಲವನು ಕೋಪಗೊಂಡು ಅವನಿಗೆ ಬಾಣವನ್ನು ಬಿಡುತ್ತಾ, ಕವಚವನ್ನೂ, ಕಿರೀಟವನ್ನೂ, ಕತ್ತರಿಸಿದನು. ಮತ್ತು ರಕ್ತ ಸೋರುವಂತೆ ಮಾಡಿದನು.

೨೮. ಆಗ ಶತ್ರುಘ್ನನು ಕೋಪಗೊಂಡು ಅತ್ಯುಗ್ರವಾದ ಹತ್ತು ಬಾಣಗಳನ್ನು ಬಿಟ್ಟನು.

೨೯. ಆಗ ಲವನು ಆ ಬಾಣಗಳನ್ನು ಚೂರುಚೂರಾಗಿ ಕತ್ತರಿಸಿ ಎದೆಗೆ ಎಂಟು ಬಾಣಗಳಿಂದ ಹೊಡೆದನು.

೩೦. ಆ ಏಟಿನಿಂದ ನೋವನ್ನು ಹೊಂದಿ ಲವನು ಬಲವಂತನೆಂದೂ. ಅವನನ್ನು ಜಯಿಸುವುದು ಅಸಾಧ್ಯವೆಂದೂ ತಿಳಿದು ಬಾಣಗಳನ್ನು ಬಿಡುತ್ತಾ ಬಂದನು.

೩೧. ಆಗ ಲವನು ಅರ್ಧಚಂದ್ರಾಕಾರವಾದ ತೀಕ್ಷ್ಣವಾದ ಬಾಣದಿಂದ ವಿಶಾಲವಾದ ಎದೆಗೆ ಹೊಡೆದನು.

ಸ ವಿದ್ಧೋ ಹೃದಿ ಬಾಣೇನ ಪೀಡಾಂ ಪ್ರಾಪ್ತಃ ಸುದಾರುಣಾಂ ।
ಪಪಾತ ಸ್ಯಂದನೋಪಸ್ಥೇ ಧನುಸ್ತ್ಯಾಗೀಸ್ವಶೋಭಿತಃ ॥ ೩೨ ॥

ಶತ್ರುಘ್ನಂ ಮೂರ್ಛಿತಂ ದೃಷ್ಟ್ವಾ ನೃಪಾಸ್ಸುರಥಸಮ್ಮುಖಾಃ ।
ಮುಮುಚುರ್ಲವಮುದ್ಯುಕ್ತಾ ಜಯಪ್ರಾಪ್ತ್ಯೈ ರಣೇ ತದಾ ॥ ೩೩ ॥

ಸುರಥೋ ವಿಮಲೋ ವೀರೋ ರಾಜಾ ವೀರಮಣಿಸ್ತಥಾ ।
ಸುಮದೋ ರಿಪುತಾಪಾದ್ಯಾಃ ಪರಿವವ್ರುಶ್ಚ ಸಂಯುಗೇ ॥ ೩೪ ॥

ಕೇಚಿತ್ಕ್ರೂರಪ್ರೈರ್ಮುಸಲೈಃ ಕೇಚಿದ್ಬಾಣೈಸ್ಸುದಾರುಣೈಃ ।
ಪ್ರಾಸೈಃ ಕುಂತೈಃ ಪರಶುಭಿಃ ಸರ್ವತಃ ಪ್ರಾಹರನ್ನೃಪಾಃ ॥ ೩೫ ॥

ತಾನಧರ್ಮೇಣ ಯುದ್ಧ್ಯೋಕ್ತಾನ್ದೃಷ್ಟ್ವಾ ವೀರಶಿರೋಮಣಿಃ ।
ದಶಭಿರ್ದಶಭಿರ್ಬಾಣೈಸ್ತಾಡಯಾಮಾಸ ಸಂಯುಗೇ ॥ ೩೬ ॥

ತೇ ಬಾಣವರ್ಷವಿಹತಾ ರಣಮಧ್ಯೇ ಸುಕೋಪನಾಃ ।
ಕೇಚಿತ್ಪಲಾಯಿತಾಃ ಕೇಚಿನ್ಮುಮುಹುರ್ಯುದ್ಧಮಂಡಲೇ ॥ ೩೭ ॥

---

೩೨. ಹೃದಯಕ್ಕೆ ಬಾಣದ ಪೆಟ್ಟು ಬೀಳಲು ನೋವಾಗಿ ರಥದ ಮಧ್ಯದಲ್ಲಿಯೇ ಬಿದ್ದುಬಿಟ್ಟನು.

೩೩. ಶತ್ರುಘ್ನನು ಮೂರ್ಛೆಬೀಳಲು ಸುರಥಾದಿಗಳು ಜಯಕ್ಕೋಸ್ಕರ ಲವನ ಮೇಲೆ ಹೊರಟರು.

೩೪. ಸುರಥ, ವಿಮಲ, ವೀರಮಣಿ, ಸುಮದ, ರಿಪುತಾಪ ಇನ್ನೂ ಕೆಲವ್ರರೆಲ್ಲರೂ ಸೇರಿ ಆ ಲವನನ್ನು ಸುತ್ತುವರಿದರು.

೩೫. ಕೆಲವರು ಮುಸಲದಿಂದಲೂ (ಒನಕೆ) ಕೆಲವರು ಬಾಣಗಳಿಂದಲೂ, ಕೆಲವರು ಪ್ರಾಸ, ಕುಂತ, ಪರಶುಗಳಿಂದಲೂ, ಎಲ್ಲಾ ಕಡೆಯಿಂದಲೂ ಹೊಡೆಯಲುಪಕ್ರಮಿಸಿದರು.

೩೬. ಹೀಗೆ ಅಧರ್ಮದಿಂದ ಯುದ್ಧಮಾಡುತ್ತಿರುವುದನ್ನು ನೋಡಿ ಹತ್ತು ಹತ್ತು ಬಾಣಗಳಿಂದ ಒಬ್ಬೊಬ್ಬರನ್ನೂ ಹೊಡೆದನು.

೩೭. ಅವರು ಆ ಬಾಣಗಳ ಏಟನ್ನು ತಿಂದರು. ಅವರಲ್ಲಿ ಕೆಲವರು ಓಡಿದರು. ಕೆಲವರು ಮೂರ್ಛೆಗೊಂಡರು.

ತಾವತ್ಸ ರಾಜಾ ಶತ್ರುಘ್ನೋ ಮೂರ್ಛಾಂ ಸಂತ್ಯಜ್ಯ ಸಂಗರೇ ।
ಲವಂ ಪ್ರಾಯಾನ್ಮಹಾವೀರಂ ಯೋದ್ಧುಂ ಬಲಸಮನ್ವಿತಃ ॥ ೩೮ ॥

ಆಗತ್ಯ ತಂ ಲವಂ ಪ್ರಾಹ ಧನ್ಯೋಽಸಿ ಶಿಶುಸಂನಿಭಃ ।
ನ ಬಾಲಸ್ತ್ವಂ ಸುರಃ ಕಶ್ಚಿಚ್ಛಲಿತುಂ ಮಾಂ ಸಮಾಗತಃ ॥ ೩೯ ॥

ಕೇನಾಪಿ ನ ಹಿ ವೀರೇಣ ಪಾತಿತೋ ರಣಮಂಡಲೇ ।
ತ್ವಯಾಹಂ ಪಾತಿತೋ ಮೂರ್ಛಾಂ ಸಮುತ್ಸ್ವಂ ಮಮ ಪಶ್ಯತಃ ॥ ೪೦ ॥

ಇದಾನೀಂ ಪಶ್ಯ ಮೇ ವೀರ್ಯಂ ತ್ವಾಂ ಸಂಖ್ಯೇ ಪಾತಯಾಮ್ಯಹಂ ।
ಸಹಸ್ವ ಬಾಣಮೇಕಂ ತ್ವಂ ಮಾ ಪಲಾಯಸ್ವ ಬಾಲಕ ॥ ೪೧ ॥

ಇತ್ಯುಕ್ತ್ವಾ ಸಮರೇ ಬಾಲಂ ಶರಮೇಕಂ ಸಮಾದದೇ ।
ಯಮವಕ್ತ್ರಸಮಂ ಘೋರಂ ಲವಣೋ ಯೇನ ಘಾತಿತಃ ॥ ೪೨ ॥

ಸಂಧಾಯ ಬಾಣಂ ನಿಶಿತಂ ಹೃದಿ ಭೇತ್ತುಂ ಮನೋ ದಧತ್ ।
ಲವಂ ವೀರಂ ಸಹಸ್ರಾಣಾಂ ವಹ್ನಿವತ್ಸರ್ವದಾಹಕಂ ॥ ೪೩ ॥

---

೩೮. ಅಷ್ಟರಲ್ಲಿಯೇ ಶತ್ರುಘ್ನನು ಮೂರ್ಛೆಯಿಂದೆದ್ದು ಲವನೊಡನೆ ಯುದ್ಧಕ್ಕೆ ಹೋದನು.

೩೯. ಲವನೆದುರಿಗೆ ಬಂದು, ಎಲೈ ಬಾಲಕನೇ, ನೀನು ಧನ್ಯನು. ಹುಡುಗ ನಂತೆ ಕಾಣುತ್ತೀಯೆ, ಹುಡುಗನಲ್ಲ, ನೀನು ಯಾರೋ ದೇವತೆಯಿರಬೇಕು, ಕಪಟ ದಿಂದ ನನ್ನನ್ನು ವಂಚಿಸಲು ಬಂದಿದ್ದೀಯೆ.

೪೦. ಯಾವ ವೀರನೂ ನನ್ನನ್ನು ಯುದ್ಧದಲ್ಲಿ ಮೂರ್ಛೆ ಕೆಡವಿರಲಿಲ್ಲ. ನೀನು ಮೂರ್ಛೆಕೆಡವಿದೆ.

೪೧. ಈಗ ನನ್ನ ಬಲವನ್ನು ನೋಡು. ನಿನ್ನನ್ನು ಯುದ್ಧದಲ್ಲಿ ಕೆಡವುತ್ತೇನೆ. ನನ್ನ ಒಂದು ಬಾಣವನ್ನು ಸಹಿಸು. ಬಾಲಕನೇ, ಓಡಿಹೋಗಬೇಡ.

೪೨. ಹೀಗೆಂದು ಹೇಳಿ ಲವಣನನ್ನು ಕೊಂದ ಯಮನ ದವಡೆಯಂತಿರುವ ಒಂದು ಬಾಣವನ್ನು ತೆಗೆದನು.

೪೩. ಅನೇಕ ಜನರನ್ನು ಕೊಂದ, ಆ ವೀರನಾದ ಲವನ ಎದೆಗೆ ಹೊಡೆದು ಕೊಲ್ಲಲು ಬಾಣವನ್ನು ಸಂಧಿಸಿದನು.

ತಂ ಬಾಣಂ ಪ್ರಜಲ್ವಂತಂ ಸ ದ್ಯೋತಯಂತಂ ದಿಶೋ ದಶ ।
ದೃಷ್ಟ್ವಾ ಸಸ್ಮಾರ ಬಲಿನಂ ಕುಶಂ ವೈರಿನಿಪಾತಿನಂ ॥ ೪೪ ॥

ಯದ್ಯಸ್ಮಿನ್ಸಮಯೇ ವೀರೋ ಭ್ರಾತಾ ಸ್ಯಾದ್ಬಲವಾನ್ಮಮ ।
ತದಾ ಶತ್ರುಘ್ನವಶತಾ ನ ಮೇ ಸ್ಯಾದ್ಬಲಮುಲ್ಬಣಂ ॥ ೪೫ ॥

ಏವಂ ವಿಚಾರ್ಯಮಾಣಸ್ಯ ಲವಸ್ಯ ಚ ಮಹಾತ್ಮನಃ ।
ಹೃದಿ ಲಗ್ನೋ ಮಹಾಬಾಣೋ ಘೋರಃ ಕಾಲಾನಲೋಪಮಃ ॥ ೪೬ ॥

ಮೂರ್ಛಾಂ ಪ್ರಾಪ ತದಾ ವೀರೋ ಭೂಪಸಾಯಕಸಂಹತಃ ।
ಸಂಗರೇ ಸರ್ವವೀರಾಣಾಂ ಶಿರೋಭಿಸ್ಸಮಲಂಕೃತೇ ॥ ೪೭ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಲವಮೂರ್ಛನಂ ನಾಮ ದ್ವಿಷಷ್ಟಿತಮೋಽಧ್ಯಾಯಃ

---

೪೪. ಆ ಬಾಣವು ದಿಕ್ಕುಗಳನ್ನು ತನ್ನ ಬೆಳಕಿನಿಂದ ಬೆಳಗುತ್ತ ಜ್ವಲಿಸುತ್ತ ಬರುತ್ತಿರುವುದನ್ನು ನೋಡಿ ವೈರಿಘಾತಕನಾದ ಕುಶನನ್ನು ಸ್ಮರಿಸಿದನು.

೪೫. ನನ್ನ ಅಣ್ಣನಾದ ಕುಶನು ಈಗ ಗಟ್ಟಿಗನಾಗಿದ್ದರೆ ಶತ್ರುಘ್ನನ ವಶವಾಗ ಬಾರದು.

೪೬. ಹೀಗೆ ಆಲೋಚಿಸುತ್ತಿರುವಾಗಲೇ ಆ ಬಾಣವು ಘೋರವಾಗಿ ಬಂದು ಲವನ ಎದೆಗೆ ಚುಚ್ಚಿಕೊಂಡಿತು

೪೭. ಅನೇಕ ಜನ ವೀರರು ಸತ್ತುಬಿದ್ದು ಇರುವ ಆ ರಣರಂಗವಲ್ಲಿ ಆ ಬಾಣದಿಂದ ನೊಂದ ಲವನು ಮೂರ್ಛೆಹೊಂದಿದನು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಪಾತಾಳಖಂಡನ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಲವಮೂರ್ಛನವೆಂಬ
ಅರವತ್ತೆರಡನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಿಷಷ್ಟಿತಮೋಽಧ್ಯಾಯಃ

---

॥ ಶೇಷ ಉವಾಚ ॥

**ಲವಂ ವಿಮೂರ್ಛಿತಂ ದೃಷ್ಟ್ವಾ ಬಲಿನ್ವೈರಿವಿದಾರಣಂ ।**
**ಶತ್ರುಘ್ನೋ ಜಯಮಾಪೇದೇ ರಣಮೂರ್ಧ್ನಿ ಮಹಾಬಲಃ ॥ ೧ ॥**

**ಲವಂ ಬಾಲಂ ರಥೇ ಸ್ಥಾಪ್ಯ ಶಿರಸ್ತ್ರಾಣಾದ್ಯಲಂಕೃತಂ ।**
**ರಾಮಪ್ರತಿನಿಧಿಂ ಮೂರ್ತ್ಯಾ ತತೋ ಗನ್ತುಮಿಯೇಷ ಸಃ ॥ ೨ ॥**

**ಸ್ವಮಿತ್ರಂ ಶತ್ರುಣಾ ಗ್ರಸ್ತಮಿತಿ ದುಃಖಸಮನ್ವಿತಾಃ ।**
**ಬಾಲಾ ಮಾತ್ರೇಽಸ್ಯ ಸೀತಾಯೈ ತ್ವರಿತಾಃ ಸಂನ್ಯವೇದಯನ್ ॥ ೩ ॥**

॥ ಬಾಲಾ ಊಚುಃ ॥

**ಮಾತರ್ಜಾನಕಿ ತೇ ಪುತ್ರೋ ಬಲಾದ್ವಾಹಮುಪಾಹರತ್ ।**
**ಕಸ್ಯಚಿದ್ಭೂಪವರ್ಯಸ್ಯ ಬಲಯುಕ್ತಸ್ಯ ಮಾನಿನಃ ॥ ೪ ॥**

---

## ಅರವತ್ತಮೂರನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಲವನು ಇಂತು ಮೂರ್ಛೆಬೀಳಲು ಶತ್ರುಘ್ನನು ಜಯವನ್ನು ಹೊಂದಿದನು.

೨. ಮೂರ್ಛೆಗೊಂಡ ಲವನನ್ನು ರಥದಲ್ಲಿ ಹಾಕಿ ಅವನು ರಾಮನಂತಿರುವುದನ್ನು ನೋಡುತ್ತಾ, ಹೋಗುವುದಕ್ಕೆ ಇಚ್ಛಿಸಿದನು.

೩. ತನ್ನ ಮಿತ್ರನು ಶತ್ರುವಿಗೆ ಸಿಕ್ಕಿದನಲ್ಲಾ ಎಂದು ಆ ಹುಡುಗರು ದುಃಖಗೊಂಡು ಜಾಗ್ರತೆಯಾಗಿ ಹೋಗಿ ಸೀತೆಗೆ ತಿಳಿಸಿದರು.

೪. ಬಾಲಕರು ಹೇಳಿದರು :—ಅಮ್ಮಾ, ಜಾನಕಿಯೇ, ನಿನ್ನ ಮಗ ಒಬ್ಬ ವೀರನಾದ ರಾಜನ ಕುದುರೆಯನ್ನು ಬಲಾತ್ಕಾರದಿಂದ ಹಿಡಿದನು.

ತತೋ ಯುದ್ಧಮಭೂದ್ಘೋರಂ ತಸ್ಯ ಸೈನ್ಯೇನ ಜಾನಕಿ ।
ತದಾ ವೀರೇಣ ಪುತ್ರೇಣ ತವ ಸರ್ವಂ ನಿಪಾತಿತಮ್ ॥ ೫ ॥

ಪಶ್ಚಾದಪಿ ಜಯಂ ಪ್ರಾಪ್ತಃ ಸುತಸ್ತವ ಮನೋಹರಃ ।
ತಂ ಭೂಪಂ ಮೂರ್ಛಿತಂ ಕೃತ್ವಾ ಜಯಮಾಪ ರಣಾಂಗಣೇ ॥ ೬ ॥

ತತೋ ಮೂರ್ಛಾಂ ವಿಹಾಯೈಷ ರಾಜಾ ಪರಮದಾರುಣಃ ।
ಸಂಕುಪ್ಯ ಪಾತಯಾಮಾಸ ತವ ಪುತ್ರಂ ರಣಾಂಗಣೇ ॥ ೭ ॥

ಅಸ್ಮಾಭಿರ್ವಾರಿತಃ ಪೂರ್ವಂ ಮಾ ಗೃಹಾಣ ಹಯೋತ್ತಮಮ್ ।
ಅಸ್ಮಾನ್ಸರ್ವಾಂಶ್ಚ ಧಿಕ್ಕೃತ್ಯ ಬ್ರಾಹ್ಮಣಾನ್ವೇದಪಾರಗಾನ್ ॥ ೮ ॥

ಇತಿ ವಾಕ್ಯಂ ಶಿಶೂನಾಂ ಸಾ ಸಮಾಕರ್ಣ್ಯ ಸುದಾರುಣಮ್ ।
ಪಪಾತ ಭೂತಲೋಪಸ್ಥೇ ದುಃಖಯುಕ್ತಾ ರುರೋದ ಹ ॥ ೯ ॥

॥ ಸೀತೋವಾಚ ॥

ಕಥಂ ನೃಪೋ ದಯಾಹೀನೋ ಬಾಲೇನ ಸಹ ಯುಧ್ಯತಿ ।
ಅಧರ್ಮಕೃತದುರ್ಬುದ್ಧಿರ್ಯೋ ಮದ್ಬಾಲಂ ನ್ಯಪಾತಯತ್ ॥ ೧೦ ॥

---

೫. ಅನಂತರ ಭಾರಿ ಯುದ್ಧವು ನಡೆಯಿತು. ವೀರನಾದ ನಿನ್ನ ಮಗನು ಅವ ರೆಲ್ಲರನ್ನೂ ನಾಶಮಾಡಿದನು.

೬. ಆಮೇಲೂ ಕೂಡ ರಾಜನೇ ಸ್ವತಃ ಬಂದು ಯುದ್ಧಮಾಡಲು, ರಾಜನು ಮೂರ್ಛೆಹೊಂದಿದನು. ನಿನ್ನ ಕುಮಾರನು ಜಯವನ್ನು ಹೊಂದಿದನು.

೭. ಆ ರಾಜನು ಅನಂತರ ಮೂರ್ಛೆಯಿಂದೆದ್ದು ಕೋಪಗೊಂಡು ನಿನ್ನ ಮಗ ನನ್ನು ರಣದಲ್ಲಿ ಕೆಡವಿದನು.

೮. ನಾವೆಲ್ಲರೂ ಮೊದಲೇ ಬೇಡವೆಂದೆವು. ವೇದಾಧ್ಯಯನ ಸಂಪನ್ನರಾದ ನಮ್ಮೆಲ್ಲರನ್ನೂ ತಿರಸ್ಕರಿಸಿ ಆ ಕುದುರೆಯನ್ನು ಹಿಡಿದನು.

೯. ಹುಡುಗರು ಹೇಳಿದ ಈ ಮಾತನ್ನು ಕೇಳಿ ದುಃಖಿಸುತ್ತಾ ನೆಲದ ಮೇಲೆ ಬಿದ್ದಳು.

೧೦. ಸೀತೆಯು ಹೇಳಿದಳು :—ಆ ರಾಜನು ಎಂತಹ ನಿರ್ದಯನು? ಹುಡುಗನೊಡನೆ ಯುದ್ಧಮಾಡಿದನಲ್ಲ. ನನ್ನ ಮಗನನ್ನು ಕೆಡವಿದ ಅವನು ಅಧರ್ಮಿಯು, ದುರ್ಬುದ್ಧಿಯುಳ್ಳವನು.

ಲವ ವೀರ ಭವಾನ್ಕುತ್ರ ವರ್ತತೇऽತಿಬಲಾನ್ವಿತಃ ।
ಕಥಂ ತ್ವಂ ನಿಷ್ಕೃಪಸ್ಯಾಹೋ ರಾಜ್ಞೋऽಹಾರ್ಷೀರ್ಹಯೋತ್ತಮಂ ॥

ತ್ವಂ ಬಾಲಸ್ತೇ ದುರಾಕ್ರಾಂತಾಃ ಸರ್ವಶಸ್ತ್ರವಿಶಾರದಾಃ ।
ರಥಸ್ಥಾ ವಿರತಸ್ಥಂ ವೈ ಕಥಂ ಯುದ್ಧಂ ಸಮಂ ಭವೇತ್ ॥ ೧೨ ॥

ತಾತಾಹಂ ತು ತ್ವಯಾ ಸಾರ್ಧಂ ರಾಮತ್ಯಾಗಾಸುಖಂ ಜಹೌ ।
ಇದಾನೀಂ ರಹಿತಾ ಯುಷ್ಮತ್ಕಥಂ ಜೀವಾಮಿ ಕಾನನೇ ॥ ೧೩ ॥

ಏಹಿ ಮಾಂ ಮುಂಚ ಯಜ್ಞಾಶ್ವಂ ಗಚ್ಛತ್ವೇಷ ಮಹೀಪತಿಃ ।
ಮದ್ದುಃಖಂ ನಾಭಿಜಾನಾಸಿ ಮಮ ದುಃಖಾಶ್ರುಮಾರ್ಜಕಃ ॥ ೧೪ ॥

ಕುಶೋ ಯದ್ಯಭವಿಷ್ಯತ್ಸ ರಣೇ ವೀರಶಿರೋಮಣಿಃ ।
ಅಮೋಚಯಿಷ್ಯದಧುನಾ ಭವಂತಂ ಭೂಪಪಾರ್ಶ್ವತಃ ॥ ೧೫ ॥

ಸೋऽಪಿ ಮದ್ದೈವತೋ ನಾಸ್ತಿ ಸಮೀಪೇ ಕಿಂ ಕರೋಮ್ಯತಃ ।
ದೈವಮೇವ ಮಮಾಪ್ಯತ್ರ ಕಾರಣಂ ದುಃಖಸಂಭವೇ ॥ ೧೬ ॥

---

೧೧. ಲವನೇ, ನೀನು ಎಲ್ಲಿದ್ದೀಯಪ್ಪ ! ಬಲಿಷ್ಠನಾದ, ದಯಾಶೂನ್ಯನಾದ ರಾಜನ ಕುದುರೆಯನ್ನೇಕೆ ಹಿಡಿಯಲು ಹೋದೆಯಪ್ಪಾ !

೧೨. ನೀನು ಹುಡುಗನು, ಅವರು ದುಷ್ಕರು, ಅಲ್ಲದೆ ಶಸ್ತ್ರಾಸ್ತ್ರಕೋವಿದರು ಅವರು ರಥದಲ್ಲಿ ಕುಳಿತಿರುವವರು, ನಿನಗೆ ರಥವಿಲ್ಲ. ಯುದ್ಧವು ಹೇಗೆ ತಾನೆ ಸಮವಾದೀತು ?

೧೩. ಅಪ್ಪ! ನಾನು ನಿನ್ನೊಡನಿದ್ದುಕೊಂಡು ನಿನ್ನನ್ನ ನೋಡುತ್ತಾ ರಾಮತ್ಯಾಗದಿಂದುಂಟಾದ ದುಃಖವನ್ನು ಬಿಟ್ಟಿದ್ದೆನು. ಈಗ ನೀನಿಲ್ಲದ ಮೇಲೆ ಕಾಡಿನಲ್ಲಿ ಹೇಗೆ ಬದುಕಿರಲಪ್ಪಾ !

೧೪. ಮಗು, ನನ್ನ ಬಳಿಗೆ ಬಾರಪ್ಪ! ರಾಜನ ಯಜ್ಞಾಶ್ವವನ್ನು ಬಿಟ್ಟುಬಿಡು. ನನ್ನ ದುಃಖವನ್ನೇ ನೀನು ತಿಳಿಯೆ, ಬಂದು ನನ್ನ ದುಃಖವನ್ನು ನಾಶಮಾಡು.

೧೫. ವೀರಶಿರೋಮಣಿಯಾದ ಕುಶನಿದ್ದಿದ್ದರೆ ಈಗ ನಿನ್ನನ್ನು ಬಿಡಿಸುತ್ತಿದ್ದನು.

೧೬. ಆ ನನ್ನ ದೇವದ ಸ್ವರೂಪನಾದ ಕುಶನೂ ಹತ್ತಿರವಲ್ಲಿಲ್ಲವಲ್ಲ. ನನಗೆ ದುಃಖವನ್ನುಂಟುಮಾಡಲು ದೈವವೇ ಇಲ್ಲೂ ಕಾರಣವು.

ಏವಮಾದಿ ಬಹು ಶ್ರೀಮುಕ್ತ್ವೇಷಾ ವೈ ವಿಲಲಾಪ ಹ ।
ಪಾದಾಂಗುಷ್ಠೇನ ಲಿಖತೀ ಭೂಮಿಂ ನೇತ್ರದ್ವಯಾಶ್ರುಭಿಃ ॥ ೧೭ ॥

ಬಾಲಾನ್ಪ್ರತಿ ಜಗಾದಾಸೌ ಪೃಥುಕಾಸ್ಸ ಚಮೂಪತಿಃ ।
ಕಥಂ ಮತ್ಸುತಮಾಸಾತ್ಯ ರಣೇ ಕುತ್ರ ಗಮಿಷ್ಯತಿ ॥ ೧೮ ॥

ಇತಿ ವಾಕ್ಯಂ ವದತ್ಯೇಷಾ ಜಾನಕೀ ಪತಿದೇವತಾ ।
ತಾವತ್ಕುಶಸ್ತು ಸಂಪ್ರಾಪ್ತ ಉಜ್ಜಯಿನ್ಯಾಂ ಮುಹರ್ಷಿಭಿಃ ॥ ೧೯ ॥

ಮಾಘಾಸಿತಚತುರ್ದಶ್ಯಾಂ ಮಹಾಕಾಲಂ ಸಮರ್ಚ್ಯ ಚ ।
ಪ್ರಾಪ್ಯ ಭೂರಿವರಾಂಸ್ತಸ್ಮಾದಾಗಮನ್ಮಾತೃಸನ್ನಿಧೌ ॥ ೨೦ ॥

ಜಾನಕೀಂ ವಿಹ್ವಲಾಂ ದೃಷ್ಟ್ವಾ ನೇತ್ರೋದ್ಭೂತಾಶ್ರುವಿಹ್ವಲಾಂ ।
ಶೋಕವಿಹ್ವಲದೀನಾಂಗೀಂ ಬಭಾಷೇ ಯಾವದುತ್ಸುಕಃ ॥ ೨೧ ॥

ತದಾ ಸ್ವಬಾಹುರವದತ್ಸ್ಫುರನ್ಯುದ್ಧಾಭಿಶಂಸಿನಃ ।
ಹೃದಯೇ ಚ ರಣೋತ್ಸಾಹೋ ಬಭೂವಾತಿರಥಸ್ಯ ಹಿ ॥ ೨೨ ॥

---

೧೭. ಇದೇ ಮುಂತಾಗಿ ಆಕೆಯು ಅಳುತ್ತಾ ಕಣ್ಣೀರಿನಿಂದ ಬಿದ್ದ ನೆಲದ ಭೂಮಿಯಲ್ಲಿ ಹೆಬ್ಬೆಟ್ಟಿನಿಂದ ಗೀಚುತ್ತಿದ್ದಳು.

೧೮. ಅನಂತರ ಹುಡುಗರನ್ನು ಕುರಿತು, ಆ ರಾಜನು ನನ್ನ ಮಗನನ್ನು ಕೆಡವಿ ಎಲ್ಲಿಗೆ ಹೇಗೆ ಹೋಗುತ್ತಾನೆ? ಎಂದಳು.

೧೯. ಪತಿವ್ರತೆಯಾದ ಜಾನಕಿಯು ಈ ಮಾತನ್ನು ಹೇಳುತ್ತಿರುವಾಗಲೇ ಉಜ್ಜಯಿನಿಯಿಂದ ಋಷಿಗಳೊಡನೆ ಕುಶನು ಬಂದನು.

೨೦. ಮಾಘಕೃಷ್ಣಚತುರ್ದಶಿಯಲ್ಲಿ ಉಜ್ಜಯಿನಿಯಲ್ಲಿ ಮಹಾಕಾಳೇಶ್ವರನನ್ನು ಪೂಜಿಸಿ, ಬಹು ವರಗಳನ್ನು ಹೊಂದಿ ತಾಯಿಯ ಬಳಿಗೆ ಬಂದನು.

೨೧. ಜಾನಕಿಯು ಕಣ್ಣೀರು ಬಿಡುತ್ತಾ ಅಳುತ್ತಿರುವುದನ್ನು ನೋಡಿ ಆತುರದಿಂದ ಇಂತೆಂದನು.

೨೨. ಆಗ ಅವನು ಬಾಹುವು ಅದುರಿ ಯುದ್ಧವನ್ನು ಸೂಚಿಸಿತು. ಮನಸ್ಸಿನಲ್ಲೂ ಆ ಅತಿರಥನಿಗೆ ಯುದ್ಧೋತ್ಸಾಹವು ಹುಟ್ಟಿತು.

**ಸ ಪ್ರತ್ಯುವಾಚ ಜನನೀಂ ದೀನಗದ್ಗದಭಾಷಿಣೀಂ ।**
**ಮಾತಸ್ತವ ಕಥಂ ದುಃಖಂ ಮಯಿ ಪುತ್ರ ಉಪಸ್ಥಿತೇ　　　॥ ೨೩ ॥**

**ಮಯಿ ಜೀವತಿ ತೇ ನೇತ್ರಾದಶ್ರೂಣಿ ಭುವಿ ನೋ ಪತೇತ್ ।**
**ಪ್ರಸೂಮುವಾಚಾಶ್ರುಖಿನ್ನಾಂ ದೀನಗದ್ಗದಭಾಷಿಣೀಂ　　　॥ ೨೪ ॥**

**ಕುಶೋ ದುಃಖಮಿತಸ್ಸದ್ಯೋ ದುಃಖಿತಾಂ ಧೀರಮಾನಸಃ ।**
**ಮಮ ಭ್ರಾತಾ ಲವಃ ಕುತ್ರ ವರ್ತತೇ ವೈರಿಮರ್ದನಃ　　　॥ ೨೫ ॥**

**ಸದಾ ಮಾಮಾಗತಂ ಜ್ಞಾತ್ವಾ ಪ್ರಹರ್ಷೇತ್ಸಂನಿಧಾವಿಯಾತ್ ।**
**ನ ದೃಶ್ಯತೇ ಕಥಂ ವೀರಃ ಕುತ್ರ ರಂತುಂ ಗತೋ ಬಲೀ　　　॥ ೨೬ ॥**

**ಕೇನ ವಾ ಸಹ ಬಾಲತ್ವಾದ್ಗತೋ ಮಾಂ ವೈ ನಿರೀಕ್ಷಿತುಂ ।**
**ಕಿಂ ತ್ವಂ ರೋದಿಷಿ ಮೇ ಮಾತರ್ಲವಃ ಕುತ್ರ ಸ ವರ್ತತೇ　　　॥ ೨೭ ॥**

**ತಸ್ಮೇ ಕಥಯ ಸರ್ವಂ ತತ್ತವ ದುಃಖಸ್ಯ ಕಾರಣಂ ।**
**ತಚ್ಛ್ರುತ್ವಾ ದುಃಖವಾಕ್ಯಂ ಸಾ ದುಃಖಿತಾ ಕುಶಮಬ್ರವೀತ್　　　॥ ೨೮ ॥**

---

೨೩. ಅವನು ಗದ್ಗದ ಸ್ವರದಿಂದ ಅಮ್ಮಾ! ನಾನು ನಿನ್ನ ಬಳಿಯಿರುವಾಗ ನಿನಗೆ ದುಃಖಕ್ಕೆ ಕಾರಣವೇನು? ಎಂದನು.

೨೪. ದೀನತೆಯಿಂದಲೂ ಗದ್ಗದವಾಗಿಯೂ ಮಾತನಾಡುತ್ತಿರುವ ತಾಯಿಯನ್ನು ಕುರಿತು ನಾನು ಜೀವಿಸಿರುವಾಗ ನಿನ್ನ ಕಣ್ಣುಗಳಿಂದ ನೀರು ಬೀಳಕೂಡದು ಎಂದನು.

೨೫. ಕುಶನೂ ಕೂಡ ದುಃಖವನ್ನು ಹೊಂದಿ ದುಃಖಿತಳಾದ ತಾಯಿಯನ್ನು ಕುರಿತು ನನ್ನ ತಮ್ಮನಾದ ಲವನೆಲ್ಲಿ? ಎಂದನು.

೨೬. ನಾನು ಬಂದುದನ್ನು ಕಂಡೊಡನೆಯೇ ಸಂತೋಷಪಡುತ್ತಾ ಹತ್ತಿರಕ್ಕೆ ಬರಬೇಕು. ಅವನನ್ನು ಕಾಣಲಿಲ್ಲವಲ್ಲ. ಆಡಲು ಎಲ್ಲಿ ಹೋಗಿರುವನು?

೨೭. ಹುಡುಗತನದಿಂದ ನನ್ನನ್ನು ನೋಡುತ್ತೇನೆಂದು ಯಾರ ಜೊತೆಯಲ್ಲಿ ಹೋದನು? ನೀನೇಕೆ ಅಳುತ್ತೀಯೆ? ಲವನೆಲ್ಲಿದ್ದಾನೆ?

೨೮. ಆ ನಿನ್ನ ದುಃಖದ ಕಾರಣವೆಲ್ಲವನ್ನೂ ನನಗೆ ತಿಳಿಸು ಎನ್ನಲು, ಅದನ್ನು ಕೇಳಿ ದುಃಖಗೊಂಡ ಸೀತೆಯು ಕುಶನನ್ನು ಕುರಿತು ಇಂತೆಂದಳು.

|| ಜಾನಕ್ಯುವಾಚ ||

ಏಷೋ ಧೃತೋ ನೃಪೇಣಾತ್ರ ಕೇನ ಚಿದ್ಧಯರಕ್ಷಿಣಾ ।
ಬಬಂಧ ಬಾಲಕೋ ಮೇಽತ್ರ ಹಯಂ ಯಾಗಕ್ರಿಯೋಚಿತಂ || ೨೯ ||

ತದ್ರಕ್ಷಕಾನ್ಸಹರ್ಶ ಜಿಗ್ಯ ಏಕೋಽನೇಕಾನ್ರಿಪೂನ್ಬಲೀ ।
ರಾಜಾ ತಂ ಮೂರ್ಛಿತಂ ಕೃತ್ವಾ ಬಬಂಧ ರಣಮೂರ್ಧನಿ || ೩೦ ||

ಬಾಲಕಾ ಇತಿ ಮಾಮೂಚುಃ ಸಹ ಗತ್ವಾತ ಏವ ಹಿ ।
ತತೋಽಹಂ ದುಃಖಿತಾ ಜಾತಾ ನಿಶಮ್ಯ ಲವಮಾಧೃತಂ || ೩೧ ||

ತ್ವಂ ಮೋಚಯ ಬಲಾತ್ತಸ್ಮಾತ್ಕಾಲೇ ಪ್ರಾಪ್ತೋ ನೃಪೋತ್ತಮಾತ್ ।
ನಿಶಮ್ಯ ಮಾತುರ್ವಚನಂ ಕುಶಃ ಕೋಪಸಮನ್ವಿತಃ || ೩೨ ||

ಜಗಾದ ತಾಂ ದಶನ್ನೋಽಷ್ಠಂ ದಂತಾಗ್ರೈರ್ವಿನಿಷ್ಪಿಷನ್ || ೩೩ ||

|| ಕುಶ ಉವಾಚ ||

ಮಾತರ್ಜಾನೀಹಿ ತಂ ಮುಕ್ತಂ ಲವಂ ಪಾಶಸ್ಯ ಬಂಧನಾತ್ ।
ಇದಾನೀಂ ಹನ್ಮಿ ತಂ ಬಾಣೈಸ್ಸಮಗ್ರಬಲವಾಹನಂ || ೩೪ ||

---

೨೯. ಜಾನಕಿಯು ಹೇಳಿದಳು :—ಯಾವನೋ ಒಬ್ಬನು ಬಿಟ್ಟಿದ್ದ ಯಾಗದ ಕುದುರೆಯನ್ನು ಲವನು ಕಟ್ಟಿದನು, ಆಗ ಆ ಕುದುರೆಯ ರಕ್ಷಕರು ಲವನನ್ನು ಹಿಡಿದರು.

೩೦. ಲವನು ಆ ಕುದುರೆಯ ರಕ್ಷಕರಲ್ಲಿ ಬಹು ಜನರನ್ನು ಒಬ್ಬನೇ ಜಯಿಸಿದನು. ರಾಜನು ಯುದ್ಧಮಾಡಿ ಲವನಿಗೆ ಮೂರ್ಛೆ ಬರಲು ಲವನನ್ನು ಹಿಡಿದನು.

೩೧. ಜೊತೆಯಲ್ಲಿ ಹೋಗಿದ್ದ ಹುಡುಗರು ಹೀಗೆಂದು ನನಗೆ ಹೇಳಿದರು. ಲವನನ್ನು ಹಿಡಿದರೆಂದು ಕೇಳಿದಕೂಡಲೇ ನನಗೆ ದುಃಖಬಂದಿತು.

೩೨. ಸರಿಯಾದ ಕಾಲಕ್ಕೆ ಬಂದಿದ್ದೀಯೆ. ಆ ಲವನನ್ನು ನೀನು ಬಿಡಿಸು.

೩೩. ಕುಶನು ತಾಯಿಯ ಮಾತನ್ನು ಕೇಳಿ ಕೋಪಗೊಂಡು ಹಲ್ಲುಕಡಿಯುತ್ತಾ ತಾಯಿಗೆ ಇಂತೆಂದನು.

೩೪. ಕುಶನು ಹೇಳಿದನು :—ಅಮ್ಮಾ ! ಲವನನ್ನು ಈಗಲೇ ಕಟ್ಟಿನಿಂದ ಬಿಡಿಸಿದೆನೆಂದು ತಿಳಿ. ಆ ರಾಜನನ್ನೂ ಅವನ ಎಲ್ಲಾ ಸೈನ್ಯವನ್ನೂ ಈಗಲೇ ಕೊಲ್ಲುವೆನು.

**ಯದಿ ದೇವೋಽಮರೋ ವಾಪಿ ಯದಿ ಶರ್ವಸ್ಸಮಾಗತಃ ।**
**ತಥಾಪಿ ಮೋಚಯೇ ತಸ್ಮಾದ್ಬಾಣೈರ್ನಿಶಿತಪರ್ವಭಿಃ** ॥ ೩೫ ॥

**ಮಾ ರೋದಿಷಿ ಮಾತರಿಹ ವೀರಾಣಾಂ ರಣಮೂರ್ಛಿತಂ ।**
**ಕೀರ್ತಯೇಽತ್ರ ಭವೇಚ್ಚೈವ ಪಲಾಯನಮಕೀರ್ತಯೇ** ॥ ೩೬ ॥

**ದೇಹಿ ಮೇ ಕವಚಂ ದಿವ್ಯಂ ಧನುರ್ಗುಣಸಮನ್ವಿತಂ ।**
**ಮಮ ಮಾತಃ ಕರವಾಳಂ ಶಿರಸ್ತ್ರಾಣಂ ತಥಾ ಶಿತಂ** ॥ ೩೭ ॥

**ಇದಾನೀಂ ಯಾಮಿ ಸಮರೇ ಪಾತಯಾಮಿ ಬಲಂ ಮಹತ್ ।**
**ಮೋಚಯಾಮಿ ಭ್ರಾತರಂ ಸ್ವಂ ರಣಮಧ್ಯಾದ್ವಿಮೂರ್ಛಿತಂ** ॥ ೩೮ ॥

**ನ ಮೋಚಯಾಮ್ಯಹಂ ಪುತ್ರಂ ತವ ಮಾತರ್ಮಹಾರಣಾತ್ ।**
**ತದಾ ಮಮ ಭವತ್ಪಾದೌ ಸಂರುಷ್ಟೌ ಭವತಾಂ ಕ್ಷಿತೌ** ॥ ೩೯ ॥

॥ ಶೇಷ ಉವಾಚ ॥

**ಇತಿ ವಾಕ್ಯೇನ ಸಂತುಷ್ಟಾ ಜಾನಕೀ ಶುಭಲಕ್ಷಣಾ ।**
**ಸರ್ವಂ ಪ್ರಾದಾದಸ್ತ್ರವೃಂದಂ ಜಯಾಶೀರ್ಭಿರ್ನಿಯುಜ್ಯ ಚ** ॥ ೪೦ ॥

---

೩೫. ದೇವನಾದ ಇಂದ್ರನೇ ಬರಲಿ, ಶಿವನೇ ಬೇಕಾದರೂ ಬರಲಿ, ಹರಿತವಾದ ಬಾಣಗಳಿಂದ ಅವನಿಂದಲೂ ಬಿಡಿಸುತ್ತೇನೆ.

೩೬. ಅಮ್ಮಾ, ಅಳಬೇಡ. ವೀರರು ರಣದ ಮೂರ್ಛೆ ಹೊಂದುವುದು ಕೀರ್ತಿಕರವು. ಪಲಾಯನಮಾಡುವುದು ಅಕೀರ್ತಿಯು.

೩೭. ನನ್ನ ಉತ್ತಮವಾದ ಕವಚ, ಧನುಸ್ಸು, ಕತ್ತಿ, ಟೊಪ್ಪಿಗೆಗಳನ್ನು ಕೊಡು.

೩೮. ಈಗ ಯುದ್ಧಕ್ಕೆ ಹೋಗುತ್ತೇನೆ. ದೊಡ್ಡ ಸೈನ್ಯವಾದರೂ ನಾಶಪಡಿಸುತ್ತೇನೆ. ಮೂರ್ಛೆಗೊಂಡಿರುವ ಸೋದರನಾದ ಲವನನ್ನು ಬಿಡಿಸುತ್ತೇನೆ.

೩೯. ನಿನ್ನ ಮಗನನ್ನು ಬಿಡಿಸದಿದ್ದರೆ ನಿನ್ನ ಪಾದಗಳು ನನ್ನ ಮೇಲೆ ಕೋಪಗೊಳ್ಳುವುವು.

೪೦. ಶೇಷನು ಹೇಳಿದನು:—ಜಾನಕಿಯು ಈ ಮಾತಿನಿಂದ ಸಂತೋಷಗೊಂಡು ಅಸ್ತ್ರಗಳೆಲ್ಲವನ್ನೂ ಕೊಟ್ಟು ಆಶೀರ್ವದಿಸಿದಳು.

ಪ್ರಯಾಹಿ ಪುತ್ರ ಸಂಗ್ರಾಮಂ ಲವಂ ಮೋಚಯ ಮೂರ್ಛಿತಂ ।
ಇತ್ಯಾಜ್ಞಪ್ತಃ ಕುಶಃ ಸಂಖ್ಯೇ ಕವಚೀ ಕುಂಡಲೀ ಬಲೀ ॥ ೪೧ ॥

ಮುಕುಟೀ ಕರವಾಳೀ ಚ ಚರ್ಮಧಾರೀ ಧನುರ್ಧರಃ ।
ಅಕ್ಷಯಾವಿಷುಧೀ ಧೃತ್ವಾ ಸ್ಕಂಧಯೋಸ್ಸಿಂಹವೀರ್ಯಯೋಃ ॥ ೪೨ ॥

ಜಗಾಮ ತರಸಾ ನತ್ವಾ ಮಾತೃಪಾದೌ ರಣಾಗ್ರಣೀಃ ।
ವೇಗೇನ ಯಾವದ್ಯುದ್ಧಾಯ ಗಚ್ಛತಿ ಕ್ಷಿಪ್ರಮಾಹವೇ ॥ ೪೩ ॥

ತಾವದ್ದದರ್ಶ ಸ ಲವಂ ವೈರಿವೃಂದನಿಪಾತಿತಂ ।
ಆಯಾಂತಂ ತಂ ಕುಶಂ ವೀರಾ ದದೃಶುಃ ಸಮರೋದ್ಭಟಾಃ ॥ ೪೪ ॥

ಕೃತಾಂತಮಿವ ಸಂಹರ್ತುಂ ಸರ್ವಂ ವಿಶ್ವಮುಪಸ್ಥಿತಂ ।
ಲವೋ ಮಹಾಬಲಂ ದೃಷ್ಟ್ವಾ ಕುಶಂ ಭ್ರಾತರಮಾಗತಂ ॥ ೪೫ ॥

ಅತ್ಯಂತಂ ವಹ್ನಿವದ್ಯುದ್ಧೇ ದಿದೀಪೇ ವಾಯುನಾ ಸಮಂ ।
ರಥಾದುನ್ಮುಚ್ಯ ಚಾತ್ಮಾನಂ ಯುದ್ಧಾಯ ಸ ವಿನಿರ್ಗತಃ ॥ ೪೬ ॥

---

೪೧-೪೨. ಮಗುವೇ ಯುದ್ಧಕ್ಕೆ ಹೋಗು. ಮೂರ್ಛಿತನಾದ ಲವನನ್ನು ಬಿಡಿಸು. ಹೀಗೆಂದು ತಾಯಿಂದ ಆಜ್ಞಪ್ತನಾಗಿ ಕವಚ, ಕುಂಡಲ, ಮುಕುಟ, ಕತ್ತಿ, ಚರ್ಮ, ಧನುಸ್ಸು, ಅಕ್ಷಯವಾದ ಬತ್ತಳಿಕೆ ಇವುಗಳನ್ನು ಧರಿಸಿ, ತಾಯಿಯ ಪಾದಗಳಿಗೆ ನಮಸ್ಕರಿಸಿ ಹೊರಟನು.

೪೩-೪೪. ವೇಗದಿಂದ ಯುದ್ಧಕ್ಕೆ ಹೊರಟು ಯುದ್ಧರಂಗದಲ್ಲಿ ವೈರಿಗಳು ಬೀಳಿಸಿದ್ದ ಲವನನ್ನು ಕಂಡನು. ಕುಶನು ಬರುತ್ತಿರುವುದನ್ನು ಆ ವೀರರೆಲ್ಲರೂ ಕಂಡರು.

೪೫-೪೬. ಆ ಸೈನಿಕರು ಪ್ರಪಂಚವನ್ನೆಲ್ಲಾ ನಾಶಮಾಡಲು ಬಂದಿರುವ ಯಮನಂತೆ ಕುಶನನ್ನು ಕಂಡರು. ಲವನು ಆ ಅಣ್ಣನಾದ ಕುಶನು ಬಂದುದನ್ನು ನೋಡಿ ವಾಯುವಿನಿಂದ ಕೂಡಿದ ಬೆಂಕಿಯಂತೆ ಪ್ರಕಾಶಿಸಿದನು. ರಥದಿಂದ ತನ್ನನ್ನು ಬಿಡಿಸಿಕೊಂಡು ಯುದ್ಧಕ್ಕೆ ನಿಂತನು,

ಕುಶಸ್ಸರ್ವಾನ್ರಣಸ್ಥಾಸ್ತೈ ವೀರಾನ್ಪೂರ್ವದಿಶಿ ಕ್ಷಿಪನ್ ।
ಪಶ್ಚಿಮಸ್ಯಾಂ ದಿಶಿ ಲವಃ ಕೋಪಾತ್ಸರ್ವಾನ್ಸಮೈರಯತ್ ॥ ೪೭ ॥

ಕುಶಬಾಣವ್ಯಥಾವ್ಯಾಪ್ತಾ ಲವಸಾಯಕಪೀಡಿತಾಃ ।
ಸೈನ್ಯೇ ಜನಾ ಮುನೇ ಸರ್ವ ಉತ್ಕಲ್ಲೋಲಾಂಬುಧಿಭ್ರಮಾಃ ॥ ೪೮ ॥

ಕುಶೇನ ಚ ಲವೇನಾಥ ಶರವ್ರಾತೈಃ ಪ್ರಪೀಡಿತಂ ।
ನ ಶರ್ಮ ಲೇಭೇ ಸಕಲಂ ಸೈನ್ಯಂ ವೀರೇಣ ಪೂರಿತಂ ॥ ೪೯ ॥

ಇತಸ್ತತಃ ಪ್ರಭಗ್ನಂ ತದ್ಬಲಂ ತ್ರಸ್ತಂ ಪುನಃ ಪುನಃ ।
ನ ಕುತ್ರಚಿದ್ರಣೇ ಸ್ಥಿತ್ವಾ ಯುದ್ಧಮೈಚ್ಛದ್ಬಲಾನ್ವಿತಃ ॥ ೫೦ ॥

ಏತಸ್ಮಿನ್ಸಮಯೇ ರಾಜಾ ಶತ್ರುಘ್ನಃ ಪರತಾಪನಃ ।
ಕುಶಂ ವೀರಂ ಯಯೌ ಯೋದ್ಧುಂ ತಾದೃಶಂ ಲವಸಂನಿಭಂ ॥ ೫೧ ॥

ಕುಶಂ ದೃಷ್ಟ್ವಾ ಬಲಾಕ್ರಾಂತಂ ರಾಮಮೂರ್ತಿಸಮಪ್ರಭಂ ।
ರಥೇ ತಿಷ್ಠನ್ಸ್ಥೇಮಮಯೇ ಜಗಾದ ಪರವೀರಹಾ ॥ ೫೨ ॥

---

೪೭. ಆ ರಣರಂಗದಲ್ಲಿ ಸೈನಿಕರನ್ನು ಕುಶನು ಪೂರ್ವದಿಕ್ಕಿನಿಂದಲೂ, ಲವನು ಪಶ್ಚಿಮದಿಕ್ಕಿನಿಂದಲೂ ಹೊಡೆಯಲು ಮೊದಲುಮಾಡಿದರು.

೪೮. ಕುಶನ ಬಾಣದಿಂದಲೂ, ಲವನ ಬಾಣದಿಂದಲೂ, ಸೈನ್ಯದವರು ಪೆಟ್ಟು ತಿಂದು ಅಲ್ಲೋಲ ಕಲ್ಲೋಲವಾದರು.

೪೯. ಕುಶನೂ, ಲವನೂ ಹೊಡೆಯುತ್ತಿರಲಾಗಿ ಆ ಸೈನ್ಯವು ವೀರರಿಂದ ಕೂಡಿದ್ದರೂ ಬಹಳತೊಂದರೆಗೀಡಾಯಿತು.

೫೦. ಎರಡುಕಡೆಯಿಂದಲೂ ಹೊಡೆತವನ್ನು ತಿನ್ನುತ್ತಿದ್ದ ಆ ಸೈನ್ಯವು ಹೆದರಿಕೊಂಡು ಯುದ್ಧರಂಗದಲ್ಲಿ ಧೈರ್ಯದಿಂದ ನಿಲ್ಲಲಸಮರ್ಥವಾಯಿತು.

೫೧. ಈ ಸಮಯದಲ್ಲಿ ರಾಜನಾದ ಶತ್ರುಘ್ನನು ಲವನಿಗೆ ಸಮಾನನಾದ ಕುಶನೊಡನೆ ಯುದ್ಧಮಾಡಲುಹೊರಟನು.

೫೨. ರಾಮನ ಪ್ರತಿಕೃತಿಯಂತಿರುವ ಬಲಿಷ್ಠನಾದ ಕುಶನನ್ನು ಶತ್ರುಘ್ನನು ನೋಡಿ ಇಂತೆಂದನು.

॥ ಶತ್ರುಘ್ನ ಉವಾಚ ॥

ಕೋಽಸಿ ತ್ವಂ ಸನ್ನಿಭೋ ಭ್ರಾತ್ರಾ ಲವೇನ ಸುಮಹಾಬಲಃ ।
ಕಿಂನಾಮಾಸಿ ಮಹಾವೀರ ಕಸ್ತೇ ತಾತಃ ಕ್ವ ತೇ ಪ್ರಸೂಃ ॥ ೫೩ ॥

ಕಥಂ ವನೇ ದ್ವಿಜೈರ್ಜುಷ್ಟೇ ತಿಷ್ಠಸಿ ತ್ವಂ ನರರ್ಷಭ ।
ಸರ್ವಂ ಶಂಸ ಯಥಾ ಯುದ್ಧ್ಯೇ ತ್ವಯಾ ಸಹ ಮಹಾಬಲ ॥ ೫೪ ॥

ಇತಿ ವಾಕ್ಯಂ ಸಮಾಕರ್ಣ್ಯ ಕುಶಃ ಪ್ರೋವಾಚ ಭೂಮಿಪಂ ।
ಮೇಘಗಂಭೀರಯಾ ವಾಚಾ ನಾದಯನ್ರಣಮಂಡಲಂ ॥ ೫೫ ॥

॥ ಕುಶ ಉವಾಚ ॥

ಕೇವಲಂ ಸುಷುವೇ ಸೀತಾ ಪತಿವ್ರತಪರಾಯಣಾ ।
ವನೇ ವಸಾವೋ ವಾಲ್ಮೀಕೇಶ್ಚರಣಾರ್ಚನತತ್ಪರೌ ॥ ೫೬ ॥

ಮಾತೃಸೇವಾಸಮುದ್ಯುಕ್ತೌ ಸರ್ವವಿದ್ಯಾವಿಶಾರದೌ ।
ಕುಶೋ ಲವ ಇತಿ ಪ್ರಖ್ಯಾವಾಗತೌ ಭೂಪತೇಽನಘ ॥ ೫೭ ॥

ಕಸ್ತ್ವಂ ವೀರೋ ರಣಶ್ಲಾಘೀ ಕಿಮರ್ಥಂ ಹಯಸತ್ತಮಃ ।
ಮುಕ್ತೋಽಸ್ತಿ ಸಮರೇ ತ್ವದ್ಯ ಜೇತಾಸಿ ಬಲಸಂಯುತಃ ॥ ೫೮ ॥

---

೫೩. ಬಲಿಷ್ಠನಾದ ಲವನಂತೆಯೇ ನೀನಿರುವೆಯಲ್ಲ ನೀನಾರು? ನಿನ್ನ ಹೆಸರೇನು? ನಿನ್ನ ತಂದೆಯಾರು? ತಾಯಿಯ ಹೆಸರೇನು?

೫೪. ಬ್ರಾಹ್ಮಣರಿರುವ ಈ ತಪೋವನದಲ್ಲಿ ವೀರನಾದ ನೀನಿರಲು ಕಾರಣವೇನು? ಎಲೈ! ವೀರನೇ ಇದೆಲ್ಲವನ್ನೂ ಹೇಳಿದರೆ ಯುದ್ಧಮಾಡುತ್ತೇನೆ.

೫೫, ಈಮಾತನ್ನು ಕೇಳಿ ಕುಶನು ಗುಡುಗಿನಂತೆ ಧ್ವನಿಮಾಡುತ್ತಾ ಇಂತೆಂದನು.

೫೬-೫೭. ಪತಿವ್ರತೆಯಾದ ಸೀತೆಯು ನಮ್ಮ ತಾಯಿಯು. ವಾಲ್ಮೀಕಿ ಮಹರ್ಷಿಗಳ ಪಾದಸೇವೆಮಾಡುತ್ತಾ ಅವರ ಆಶ್ರಮದಲ್ಲಿ ವಾಸಿಸುತ್ತೇವೆ. ಮಾತೃಸೇವೆಯನ್ನು ಮಾಡುತ್ತಾ ಸರ್ವವಿದ್ಯಾವಿಶಾರದರಾಗಿದ್ದೇವೆ. ನಮ್ಮ ಹೆಸರು ಕುಶ ಮತ್ತು ಲವ ಎಂದು.

೫೮. ರಣದಲ್ಲಿ ವಿಶಾರದನಾದ ನೀನಾರು? ಕುದುರೆಯನ್ನೇಕೆ ಬಿಟ್ಟಿದ್ದೀಯೆ? ಸೈನ್ಯಗಳೊಡನೆ ಈಗ ಜಯಿಸಬೇಕಾದ ಅವಶ್ಯಕತೆಯೇನು?

**ಯುಧ್ಯಸ್ವ ತ್ವಂ ಮಯಾ ಸಾರ್ಧಂ ಯದಿ ವೀರೋಽಸಿ ಭೂಮಿಪ ।**
**ಇದಾನೀಂ ಘಾತಯಿಷ್ಯಾಮಿ ಭವಂತಂ ರಣಮೂರ್ಧನಿ ॥ ೫೯ ॥**

**ಶತ್ರುಘ್ನಸ್ತಂ ಸುತಂ ಜ್ಞಾತ್ವಾ ಸೀತಾಯಾ ರಾಮಸಂಭವಂ ।**
**ವಿಸಿಷ್ಮಿಯೇ ಸ್ವಯಂ ಚಿತ್ತೇ ಕೋಪಾದ್ಧನುರುಪಾದದತ್ ॥ ೬೦ ॥**

**ತಮಾತ್ತಧನುಷಂ ದೃಷ್ಟ್ವಾ ಕುಶಃ ಕೋಪಸಮನ್ವಿತಃ ।**
**ವಿಸ್ಫಾರಯಾಮಾಸ ಧನುಃ ಸ್ವೀಯಂ ಸುದೃಢಮುತ್ತಮಂ ॥ ೬೧ ॥**

**ಮುಮೋಚ ಬಾಣಾನ್ನಿಶಿತಾನ್ ಶತ್ರುಘ್ನಸ್ಸರ್ವಶಸ್ತ್ರವಿತ್ ।**
**ತಾಂಶ್ಛಿಚ್ಛೇದ ಕುಶಸ್ಸರ್ವಾಂಲ್ಲೀಲಯಾ ಪ್ರಹಸನ್ರಣೇ ॥ ೬೨ ॥**

**ಬಾಣಾಶ್ಚ ಶತಸಾಹಸ್ರಾಃ ಕುಶಸ್ಯ ಚ ನೃಪಸ್ಯ ಚ ।**
**ಭುವನಂ ವ್ಯಾಪ್ನುವನ್ಸರ್ವಂ ತಚ್ಚಿತ್ರಮಭವನ್ಮನೇ ॥ ೬೩ ॥**

**ಅಗ್ನ್ಯಸ್ತ್ರೇಣ ಕುಶಸ್ಸರ್ವಾನ್ ದದಾಹ ತರಸಾ ಬಲೀ ।**
**ಶಮಯಾಮಾಸ ತಂ ಭೂಪಃ ಪರ್ಜನ್ಯಾಸ್ತ್ರೇಣ ವೀರ್ಯವಾನ್ ॥ ೬೪ ॥**

---

೫೯. ನೀನು ವೀರನಾಗಿದ್ದರೆ ನನ್ನೊಡನೆ ಯುದ್ಧಮಾಡು. ಯುದ್ಧರಂಗದಲ್ಲಿ ಈಗಲೇ ನಿನ್ನನ್ನು ಕೊಲ್ಲುತ್ತೇನೆ.

೬೦. ಶತ್ರುಘ್ನನು, ಈತನು ಸೀತೆಯ ಮಗನೆಂದು ತಿಳಿದು ಮನಸ್ಸಿನಲ್ಲಿ ಆಶ್ಚರ್ಯಪಟ್ಟನು. ಕೋಪದಿಂದ ಯುದ್ಧಮಾಡಲು ಧನುಸ್ಸನ್ನು ಹಿಡಿದನು.

೬೧. ಶತ್ರುಘ್ನನು ಧನುಸ್ಸನ್ನು ಹಿಡಿಯುತ್ತಲೂ ಕುಶನು ಕೋಪಗೊಂಡು ತನ್ನ ಧನುಸ್ಸನ್ನು ಠೇಂಕರಿಸಿದನು.

೬೨. ಶತ್ರುಘ್ನನು ಉತ್ತಮವಾದ ಬಾಣಗಳನ್ನು ಬಿಡಲು ಕುಶನು ಅದನ್ನು ಸರಾಗವಾಗಿ ಕತ್ತರಿಸಿದನು.

೬೩. ಶತ್ರುಘ್ನ ಕುಶರು ಬಿಟ್ಟ ಬಾಣಗಳು ಸಾವಿರಾರು ಗಟ್ಟಲೆಯಾಗಿ ಪ್ರಪಂಚವನ್ನೇ ವ್ಯಾಪಿಸಿದುವು. ಅದು ಆಶ್ಚರ್ಯಕರವಾಗಿತ್ತು.

೬೪. ಕುಶನು ಆಗ್ನೇಯಾಸ್ತ್ರದಿಂದೆಲ್ಲರನ್ನೂ ಸುಡಲು ಶತ್ರುಘ್ನನು ಪರ್ಜನ್ಯಾಸ್ತ್ರದಿಂದ ಶಮನಮಾಡಿದನು

ಶಮಯಾಮಾಸ ತಂ ಭೂಪೋ ವಾಯವ್ಯೇನಾತಿವಿಕ್ರಮಃ ।
ತದಾ ವಾಯುರಭೂತ್ತೀವ್ರಃ ಸರ್ವತೋ ರಣಮಂಡಲೇ ॥ ೬೫ ॥

ಪರ್ವತಾಸ್ತ್ರೇಣ ವಾಯುಂ ತಂ ಕ್ಷೋಭಯಂತಂ ಸಮಾವೃಣೋತ್ ।
ವಜ್ರಾಸ್ತ್ರೇಣ ನೃಪಸ್ಸಂಖ್ಯೇ ಚಿಚ್ಛೇದ ಸ ನಗೋಪಲಾನ್ ॥ ೬೬ ॥

ತದಾ ನಾರಾಯಣಾಸ್ತ್ರಂ ಸ ಮುಮೋಚ ಕುಶ ಉದ್ಭಟಃ ।
ನಾರಾಯಣಂ ತದಾ ಭೂಪಂ ನಾಶಕತ್ಪರಿಬಾಧಿತುಂ ॥ ೬೭ ॥

ತದಾ ಪ್ರಕುಪಿತೋಽತ್ಯಂತಂ ಕುಶಃ ಕೋಪಪರಾಯಣಃ ।
ಉವಾಚ ಭೂಪಂ ಶತ್ರುಘ್ನಂ ಮಹಾಬಲಪರಾಕ್ರಮಂ ॥ ೬೮ ॥

ಜಾನಾಮಿ ತ್ವಾಂ ಮಹಾವೀರಂ ಸಂಗ್ರಾಮೇ ಜಯಕಾರಕಂ ।
ಯತ್ತ್ವಾಂ ನಾರಾಯಣಂ ಮೇಽಸ್ತ್ರಂ ನ ಬಬಾಧೇ ಭಯಾನಕಂ ॥ ೬೯ ॥

ಇದಾನೀಂ ಪಾತಯಾಮ್ಯದ್ಯ ಭೂಮೌ ತ್ವಾಂ ನೃಪತೇ ಶರೈಃ ।
ತ್ರಿಭಿಶ್ಚೇನ್ನ ಕರೋಮ್ಯೇತತ್ಪ್ರತಿಜ್ಞಾಂ ತರ್ಹಿ ಮೇ ಶೃಣು ॥ ೭೦ ॥

ಯೋ ಮನುಷ್ಯವಪುಃ ಪ್ರಾಪ್ಯ ದುರ್ಲಭಂ ಪುಣ್ಯಕೋಟಿಭಿಃ ।
ತನ್ನಾದ್ರಿಯೇತ ಸಂಮೋಹಾತ್ತಸ್ಯ ಮೇಽಸ್ತ್ವತ್ರ ಪಾತಕಂ ॥ ೭೧ ॥

---

೬೫. ಶತ್ರುಘ್ನನು ಬಿಟ್ಟ ವಾಯವ್ಯಾಸ್ತ್ರದಿಂದ ಶಾಂತವಾದುದಲ್ಲದೇ ಯುದ್ಧ ಮಂಡಲದಲ್ಲೆಲ್ಲಾ ಗಾಳಿಯೆದ್ದಿತು.

೬೬. ಪರ್ವತಾಸ್ತ್ರದಿಂದ ಕುಶನು ಆ ವಾಯುವನ್ನು ಶಮನಮಾಡಲು ವಜ್ರಾಸ್ತ್ರವನ್ನು ಬಿಟ್ಟು ಶತ್ರುಘ್ನನು ಆ ಪರ್ವತವನ್ನು ನಾಶಮಾಡಿದನು.

೬೭. ಆಗ ಕುಶನು ನಾರಾಯಣಾಸ್ತ್ರವನ್ನು ಬಿಡಲು ಶತ್ರುಘ್ನನನ್ನು ಆ ಅಸ್ತ್ರವು ಏನೂ ಮಾಡಲಾರದೇ ಹೋಯಿತು.

೬೮. ಕುಶನು ಕೋಪಗೊಂಡು ಶತ್ರುಘ್ನನನ್ನು ಕುರಿತಿಂತೆಂದನು.

೬೯. ನನ್ನ ನಾರಾಯಣಾಸ್ತ್ರವು ನಿನ್ನನ್ನು ತೊಂದರೆ ಪಡಿಸದಿದ್ದುದನ್ನು ನೋಡಿದರೆ ನೀನು ಮಹಾವೀರನೆಂದು ಕಾಣುತ್ತೀಯೆ.

೭೦. ಈಗ ಮೂರು ಬಾಣಗಳಿಂದ ನಿನ್ನ ತಲೆಯನ್ನು ನೆಲದ ಮೇಲೆ ಕೆಡವ ದಿದ್ದರೆ ನನ್ನ ಪ್ರತಿಜ್ಞೆಯನ್ನು ಕೇಳು.

೭೧. ಅನೇಕ ಪುಣ್ಯಗಳಿಂದಲೂ ಹೊಂದಲಸಾಧ್ಯವಾಗಿರುವ ಮನುಷ್ಯ ಜನ್ಮವನ್ನು ಹೊಂದಿ ಅದನ್ನು ಪುರಸ್ಕರಿಸದಿರುವವನ ಪಾತಕವು ನನಗೆ ಬರಲಿ.

ಸಾವಧಾನೋ ಭವಾನತ್ರ ಭವತು ಪ್ರಧನಾಂಗಣೇ ।
ಪಾತಯಾಮಿ ಕ್ಷಿತೌ ಸದ್ಯ ಇತ್ಯುಕ್ತ್ವಾ ಸ್ವಶರಾಸನೇ ॥ ೭೨ ॥

ಶರಂ ಸಂರೋಪಯಾಮಾಸ ಘೋರಂ ಕಾಲಾನಲೋಪಮಂ ।
ಲಕ್ಷೀಕೃತ್ಯ ರಿಪೋರ್ವಕ್ಷೋ ವಿಪುಲಂ ಕಠಿಣಂ ಮಹತ್ ॥ ೭೩ ॥

ತಂ ಸಂಧಿತಂ ಶರಂ ದೃಷ್ಟ್ವಾ ಶತ್ರುಘ್ನಃ ಕೋಪಪೂರಿತಃ ।
ಮುಮೋಚ ಬಾಣಾನ್ನಿಶಿತಾನ್ಕುಶತ್ವಗ್ಛೇದಕಾರಕಾನ್ ॥ ೭೪ ॥

ಸ ಬಾಣೋ ಹೃದಯಂ ತಸ್ಯ ಭೇತ್ತುಂ ತತ್ಪ್ರಚಚಾಲ ಹ ।
ಘೋರರೂಪೋ ವಹ್ನಿಸಮ ಆಶೀವಿಷವದುತ್ಪ್ಲವನ್ ॥ ೭೫ ॥

ಸ ಬಾಣೋ ನೃಪಪತ್ರೇಣ ರಾಮಂ ಸ್ಮೃತ್ವಾಶು ಲಕ್ಷಿತಃ ।
ಚಿಚ್ಛೇದ ಕುಶಮುಕ್ತಂ ಚ ಸಾಯಕಂ ಶಿತಪರ್ವಕಂ ॥ ೭೬ ॥

ತದಾತ್ಯಂತಂ ಪ್ರಕುಪಿತಃ ಕುಶೋ ಬಾಣಸ್ಯ ಕೃಂತನಾತ್ ।
ಅಪರಂ ಸಾಯಕಂ ಚಾಪೇ ದಧಾರ ಶಿತಪರ್ವಕಂ ॥ ೭೭ ॥

---

೭೨-೭೩. ನೀನು ಈಗ ಗಮನವಿಂದಿರು. ನಿನ್ನ ತಲೆಯನ್ನು ಕೆಡವುತ್ತೇನೆ. ಎಂದು ಹೇಳಿ ಶತ್ರುವಿನ ಅಗಲವೂ ಕಠಿಣವೂ ಆದ ಎದೆಯನ್ನು ಗುರಿಕಟ್ಟಿ ಧನುಸ್ಸಿನಲ್ಲಿ ಬಾಣವನ್ನು ಸೇರಿಸಿದನು.

೭೪. ಕುಶನು ಬಾಣ ತೊಟ್ಟದ್ದನ್ನು ನೋಡಿ ಶತ್ರುಘ್ನನು ಕೋಪಗೊಂಡು ಕುಶನಮೇಲೆ ಕ್ರೂರವಾದ ಬಾಣಗಳನ್ನು ಬಿಟ್ಟನು.

೭೫. ಆ ಬಾಣವು ಸರ್ಪದಂತೆ ಘೋರವಾಗಿ ಆ ಕುಶನಿಂದ ಬಿಡಲ್ಪಟ್ಟು ಬೆಂಕಿಯನ್ನುಗುಳುತ್ತಾ ಹೊರಟಿತು.

೭೬. ಶತ್ರುಘ್ನನು ರಾಮನನ್ನು ಸ್ಮರಿಸುತ್ತ ಆ ಉಗ್ರವಾದ ಬಾಣವನ್ನು ಕತ್ತರಿಸಿದನು.

೭೭. ಅವನು ಆ ಬಾಣವು ನಾಶವಾದುದಕ್ಕೆ ಕೋಪಗೊಂಡು ಮತ್ತೊಂದು ಕ್ರೂರವಾದ ಬಾಣವನ್ನು ಹೂಡಿದನು.

ಸ ಯಾವತ್ತದುರೋ ಭೇತ್ತುಂ ಕರೋತಿ ಚ ಬಲೋದ್ಧುರಃ ।
ಸ ತಾವದಚ್ಛಿನತ್ತಸ್ಯ ಶರಂ ಕಾಲಾನಲಪ್ರಭಂ ॥ ೭೮ ॥

ತದಾ ಕುಶೋ ಮಾತೃಪಾದೌ ಸ್ಮೃತ್ವಾ ರೋಷಸಮನ್ವಿತಃ ।
ತೃತೀಯಂ ಚಾಪಕೇ ಸ್ವೀಯೇ ದಧಾರ ಶರಮುತ್ತಮಂ ॥ ೭೯ ॥

ಶತ್ರುಘ್ನಸ್ತಮಪಿ ಕ್ಷಿಪ್ರಂ ಕ್ಷೇಪ್ತುಂ ಬಾಣಂ ಸಮಾದದೇ ।
ತಾವದ್ವಿದ್ಧಶ್ಶರೇಣಾಸೌ ಪಪಾತ ಧರಣೀತಲೇ ॥ ೮೦ ॥

ಹಾಹಾಕಾರೋ ಮಹಾನಾಸೀಚ್ಛತ್ರುಘ್ನೇ ವಿನಿಪಾತಿತೇ ।
ಜಯಮಾಪ ಕುಶಸ್ತತ್ರ ಸ್ವಬಾಹುಬಲದರ್ಪಿತಃ ॥ ೮೧ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಶತ್ರುಘ್ನಮೂರ್ಛನಾವೃತ್ತಂ ನಾಮ ತ್ರಿಷಷ್ಟಿತಮೋಽಧ್ಯಾಯಃ.**

---

೭೮. ಆ ಬಾಣವು ಶತ್ರುಘ್ನನ ಎದೆಯನ್ನು ತಗಲುವುದರೊಳಗೆ ಆ ಶತ್ರುಘ್ನನು ಅದನ್ನು ಕತ್ತರಿಸಿಬಿಟ್ಟನು.

೭೯. ಆಗ ಕುಶನು ಕೋಪಗೊಂಡು ತಾಯಿಯ ಪಾದಗಳನ್ನು ಸ್ಮರಿಸುತ್ತಾ ಮೂರನೆಯ ಬಾಣವನ್ನು ಹೂಡಿದನು.

೮೦. ಶತ್ರುಘ್ನನೂ ಕೂಡ ಆ ಬಾಣವನ್ನು ಕತ್ತರಿಸಲು ಬಾಣವನ್ನು ಹೂಡಿದನು. ಅಷ್ಟರೊಳಗೆ ಕುಶನಿಂದ ಬಿಡಲ್ಪಟ್ಟ ಬಾಣವು ಬಂದು ಎದೆಗೆ ಬಡಿಯಲು ಭೂಮಿಯಲ್ಲಿ ಬಿದ್ದನು.

೮೧. ಶತುಘ್ನನು ಬೀಳಲು ಸೈನ್ಯದಲ್ಲಿ ಹಾಹಾಕಾರವೆದ್ದಿತು. ಕುಶನು ಬಾಹುಬಲದಿಂದ ಜಯವನ್ನು ಹೊಂದಿದನು.

ಇಲ್ಲಿಗೆ ಶ್ರೀ ಪದ್ಮಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ ಸಂವಾದದ ರಾಮಾಶ್ವಮೇಧದಲ್ಲಿ ಶತ್ರುಘ್ನ ಮೂರ್ಛನವೆಂಬ ಅರವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುಃಷಷ್ಟಿತಮೋಽಧ್ಯಾಯಃ

---

॥ ಶೇಷ ಉವಾಚ ॥

ಶತ್ರುಘ್ನಂ ಪತಿತಂ ವೀಕ್ಷ್ಯ ಸುರಥಃ ಪ್ರವರೋ ನೃಪಃ ।
ಪ್ರಯಯೌ ಮಣಿನಾ ಸ್ಪೃಷ್ಟೇ ರಥೇ ತಿಷ್ಠನ್ಮಹಾದ್ಭುತೇ ॥ ೧ ॥

ಪುಷ್ಕಳಸ್ತು ರಣೇ ಪೂರ್ವಂ ಪಾತಿತಸ್ಸ ವಿಚಾರಯನ್ ।
ಲವಂ ಯಯೌ ತದಾ ಯೋದ್ಧುಂ ಮಹಾವೀರಬಲೋನ್ನತಂ ॥ ೨ ॥

ಸುರಥಂ ಕುಶಮಾಪ್ರಾಪ್ಯ ಬಾಣಾನ್ಮುಂಚನ್ನನೇಕಧಾ ।
ವ್ಯಥಯಾಮಾಸ ಸಮರೇ ಮಹಾವೀರಶಿರೋಮಣಿಃ ॥ ೩ ॥

ಸುರಥಂ ವಿರಥಂ ಚಕ್ರೇ ಬಾಣೈರ್ದಶಭಿರುಚ್ಛ್ರಿತೈಃ ।
ಧನುಶ್ಚಿಚ್ಛೇದ ತರಸಾ ಸುದೃಢಂ ಗುಣಪೂರಿತಂ ॥ ೪ ॥

---

## ಅರವತ್ತ ನಾಲ್ಕನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಶತ್ರುಘ್ನನು ಬಿದ್ದುದನ್ನು ನೋಡಿ ಸುರಥನೆಂಬ ರಾಜನು ಮಣಿಮಯರಥದಲ್ಲಿ ಕುಳಿತು ಯುದ್ಧಕ್ಕೆ ಹೊರಟನು.

೨. ಪುಷ್ಕಳನು ಮೊದಲೇ ಲವನಿಂದ ಏಟು ತಿಂದು ಮೂರ್ಛಿತನಾಗಿದ್ದರೂ ಪುನಃ ಎಚ್ಚತ್ತು ಲವನೊಡನೆ ಯುದ್ಧಮಾಡಲು ಹೊರಟನು.

೩. ಸುರಥನು ಕುಶನೆದುರಿಗೆ ಹೋಗಿ ಬಾಣಗಳನ್ನು ಬಿಡುತ್ತಾ ಆ ಕುಶನನ್ನು ವ್ಯಥೆಪಡಿಸಿದನು.

೪. ಹತ್ತು ಬಾಣಗಳನ್ನು ಬಿಟ್ಟು ಸುರಥನ ರಥವನ್ನು ಕುಶನು ನಾಶಪಡಿಸಿ ಅವನ ಧನುಸ್ಸನ್ನೂ ಮುರಿದನು.

ಅಸ್ತ್ರಪ್ರತ್ಯಸ್ತ್ರಸಂಹಾರ್ಯೈಃ ಕ್ಷೇಪಣೈಃ ಪ್ರತಿಕ್ಷೇಪಣೈಃ ।
ಅಭವತ್ತುಮುಲಂ ಯುದ್ಧಂ ವೀರಾಣಾಂ ರೋಮಹರ್ಷಣಂ ॥ ೫ ॥

ಅತ್ಯಂತಂ ಸಮರೋದ್ಯುಕ್ತೇ ಸುರಥೇ ದುರ್ಜಯೇ ನೃಪೇ ।
ಕುಶಸ್ಸಂಚಿಂತಯಾಮಾಸ ಕಿಂ ಕರ್ತವ್ಯಂ ರಣೇ ಮಯಾ ॥ ೬ ॥

ವಿಚಾರ್ಯ ನಿಶಿತಂ ಘೋರಂ ಸಾಯಕಂ ಸಮುಪಾದದೇ ।
ಹನನಾಯ ನೃಪಸ್ಯಾಸ್ಯ ಮಹಾಬಲಸಮನ್ವಿತಃ ॥ ೭ ॥

ತಮಾಗತಂ ಶರಂ ದೃಷ್ಟ್ವಾ ಕಾಲಾನಲಸಮಪ್ರಭಂ ।
ಛೇತ್ತುಂ ಮತಿಂ ಚಕಾರಾಶು ತಾವಲ್ಲಗ್ನೋ ಮಹಾಶರಃ ॥ ೮ ॥

ಮುಮೂರ್ಛ ಸಮರೇ ವೀರೋ ಮಹಾವೀರಬಲಸ್ತತಃ ।
ಪಪಾತ ಸ್ಯಂದನೋಪಸ್ಥೇ ಸಾರಥಿಸ್ತಮುಪಾಹರತ್ ॥ ೯ ॥

ಸುರಥೇ ಪತಿತೇ ದೃಷ್ಟ್ವಾ ಕುಶಂ ಜಯಸಮನ್ವಿತಂ ।
ತ್ರಾಸಯಂತಂ ವೀರಗಣಾನಿಯಾಯ ಪವನಾತ್ಮಜಃ ॥ ೧೦ ॥

---

೫. ಅಸ್ತ್ರ ಎಸೆಯುವುದು, ಅದಕ್ಕೆ ಪ್ರತಿಯಾದ ಅಸ್ತ್ರ ಎಸೆಯುವುದು ಅವಕ್ಕೆ ಪ್ರತಿಯಾಗಿ ಎಸೆಯುವುದು ಈ ರೀತಿಯಾಗಿ ಆ ಇಬ್ಬರಿಗೂ ಘೋರವಾದ ಯುದ್ಧವು ನಡೆಯಿತು.

೬. ಯುದ್ಧಕ್ಕೆ ನಿಂತಿರುವ ಸುರಥನನ್ನು ಜಯಿಸುವುದು ಕುಶನಿಗೆ ಕಷ್ಟವಾಗಿ ತೋರಲು, ಏನು ಮಾಡಬೇಕೆಂಬುದಾಗಿ ಯೋಚಿಸಿದನು.

೭. ಯೋಚಿಸಿ ಆ ಸುರಥನ ವಧೆಗೋಸ್ಕರ ಘೋರವಾದ ಬಾಣವನ್ನು ತೊಟ್ಟನು.

೮. ಕುಶನು ಬಿಟ್ಟ ಆ ಬಾಣವನ್ನು ಕತ್ತರಿಸಬೇಕೆಂದು ಯೋಚಿಸುವಷ್ಟರಲ್ಲಿಯೇ ಆ ಬಾಣವು ಚುಚ್ಚಿಕೊಂಡಿತು.

೯. ಒಡನೆಯೇ ವೀರನಾದ ಆ ಸುರಥನು ಮೂರ್ಛೆಗೊಂಡನು. ಸಾರಥಿಯು ಅವನನ್ನು ಯುದ್ಧಕ್ಷೇತ್ರದಿಂದ ತೆಗೆದುಕೊಂಡು ಹೊರಟುಹೋದನು.

೧೦. ಸುರಥನು ಬಿದ್ದುದನ್ನು ನೋಡಿ ಹನುಮಂತನು ಆ ಕುಶನೆದುರಿಗೆ ಬಂದನು.

**ಸಮೀರಸೂನುಂ ಪ್ರಬಲಮಾಯಾಂತಂ ವೀಕ್ಷ್ಯ ವಾನರಂ ।**
**ಜಹಾಸ ದರ್ಶಯನ್ ದಂತಾನ್ಕೋಪಯನ್ನಿವ ತಂ ಕ್ರುಧಾ ॥ ೧೧ ॥**

**ಉವಾಚ ಚ ಹನೂಮಂತಮೇಹಿ ತ್ವಂ ಮಮ ಸಮ್ಮುಖಂ ।**
**ಭೇತ್ಸ್ಯೆ ಬಾಣಸಹಸ್ರೇಣ ಮೃತೋ ಯಾಸ್ಯಸಿ ಯಾಮಿನೀಂ ॥ ೧೨ ॥**

**ಇತ್ಯುಕ್ತೋ ಹನುಮಾನ್ ಜ್ಞಾತ್ವಾ ರಾಮಸೂನುಂ ಮಹಾಬಲಂ ।**
**ಸ್ವಾಮಿಕಾರ್ಯಂ ಪ್ರಕರ್ತವ್ಯಮಿತಿ ಕೃತ್ವಾ ಪ್ರಧಾವಿತಃ ॥ ೧೩ ॥**

**ಶಾಲಮುತ್ಪಾಟ್ಯ ತರಸಾ ವಿಶಾಲಂ ಶತಶಾಖಿನಂ ।**
**ಕುಶಂ ವಕ್ಷಸಿ ಸಂಲಕ್ಷ್ಯ ಯಯೌ ಯೋದ್ಧುಂ ಮಹಾಬಲಃ ॥ ೧೪ ॥**

**ಶಾಲಹಸ್ತಂ ಸಮಾಯಾಂತಂ ಹನುಮಂತಂ ಮಹಾಬಲಂ ।**
**ತ್ರಿಭಿಃ ಕ್ಷುರಪ್ರೈರ್ವಿವ್ಯಾಧ ಸೋಽರ್ಧಚಂದ್ರೋಪಮೈರ್ಬಲೀ ॥ ೧೫ ॥**

**ಸ ಬಾಣವಿದ್ಧಸ್ತರಸಾ ಕುಶೇನ ಬಲಶಾಲಿನಾ ।**
**ಶಾಲೇನ ಹೃದಿ ಸಂಜಘ್ನೇ ದಂತಾನ್ನಿಷ್ಪಿಷ್ಯ ಮಾರುತಿಃ ॥ ೧೬ ॥**

---

೧೧. ಹನುಮಂತನು ಬರುತ್ತಿರುವುದನ್ನು ನೋಡಿ ಹಲ್ಲು ಕಿರಿದು ಹಾಸ್ಯ ಮಾಡುತ್ತಾ ಆ ಕಪಿಗೆ ಕೋಪಬರುವಂತೆ ನಕ್ಕನು.

೧೨. ಹನುಮಂತನನ್ನು ಕುಶನು ಬಾ, ನನ್ನೆದುರಿಗೆ ಬಾ, ಸಾವಿರ ಬಾಣಗಳನ್ನು ಬಿಟ್ಟು ನಿನ್ನನ್ನು ಯಮಪುರಿಗೆ ಕಳುಹಿಸುತ್ತೇನೆ ಎಂದನು.

೧೩. ಹೀಗೆಂದು ಹೇಳಲು ಹನುಮಂತನು ಕುಶನನ್ನು ಬಲಿಷ್ಠನೆಂದು ತಿಳಿದನು. ಆದರೂ ಸ್ವಾಮಿಕಾರ್ಯಕ್ಕೆ ಹಿಂದೆಗೆಯಬಾರದೆಂದು ಮುನ್ನುಗ್ಗಿದನು.

೧೪. ಒಂದು ದೊಡ್ಡ ಮತ್ತಿಯ ಮರವನ್ನು ಕಿತ್ತುಕೊಂಡು ಕುಶನ ಎದೆಗೆ ಗುರಿ ಕಟ್ಟಿಕೊಂಡು ಯುದ್ಧಕ್ಕೆ ಬಂದನು.

೧೫. ಮಹಾ ಬಲಿಷ್ಠನಾದ ಹನುಮಂತನು ಶಾಲವೃಕ್ಷವನ್ನು ತರುತ್ತಿರುವುದನ್ನು ನೋಡಿ ಅರ್ಧಚಂದ್ರಾಕಾರವಾದ ಮೂರು ಬಾಣಗಳಿಂದ ಹೊಡೆದನು.

೧೬. ಕುಶನು ಬಾಣಗಳಿಂದ ಹೊಡೆಯುತ್ತಲೂ ಹನುಮಂತನು ಹಲ್ಲುಕಡಿಯುತ್ತಾ ಆ ಕುಶನ ಎದೆಗೆ ಹೊಡೆದನು.

ಶಾಲಾಹತಸ್ತದಾ ಬಾಲಃ ಕಿಂಚಿನ್ನಾಕಂಪತ ಸ್ಮಯಾತ್ ।
ತದಾ ವೀರಾಃ ಪ್ರಶಂಸಾಂ ತು ಪ್ರಚಕ್ರುಸ್ತಸ್ಯ ಬಾಲ್ಯತಃ ॥ ೧೭ ॥

ಸ ಶಾಲೇನ ಹತೋ ವೀರಃ ಸಂಹಾರಾಸ್ತ್ರಂ ಸಮಾದದೇ ।
ಸಂಹರ್ತುಂ ವೈರಿಣಂ ಕೋಪಾತ್ಕುಶಃ ಪರಮಮಂತ್ರವಿತ್ । ॥ ೧೮ ॥

ಸಂಹಾರಾಸ್ತ್ರಂ ಸಮಾಲೋಕ್ಯ ದುರ್ಜಯಂ ಕುಶನೋಚಿತಂ ।
ದಧ್ಯೌ ರಾಮಂ ಸ್ವಮನಸಾ ಭಕ್ತಸಂಕಟನಾಶಕಂ ॥ ೧೯ ॥

ತದಾ ಮುಕ್ತಂ ಕುಶೇನಾಶು ತದಸ್ತ್ರಂ ಹೃದಿ ಮಾರುತೇಃ ।
ಲಗ್ನಂ ಮಹಾವ್ಯಥಾಕಾರಿ ತೇನ ಮೂರ್ಛಾಮಿತಃ ಪುನಃ ॥ ೨೦ ॥

ಮೂರ್ಛಾಂ ಪ್ರಾಪ್ತಂ ತು ತಂ ದೃಷ್ಟ್ವಾ ಪ್ಲವಗಂ ಬಲಸಂಯುತಃ ।
ವಿದ್ಯಾಧ ಸಾಯಕೈಸ್ತೀಕ್ಷ್ಣೈಃ ಸೈನ್ಯಂ ತತ್ಸಕಲಂ ಮಹತ್ ॥ ೨೧ ॥

ತಸ್ಯ ಬಾಣಾಯುತೈರ್ಭಗ್ನಂ ಬಲಂ ಸರ್ವಂ ರಣಾಂಗಣೇ ।
ಪಲಾಯನಪರಂ ಜಾತಂ ಚತುರಂಗಸಮನ್ವಿತಂ ॥ ೨೨ ॥

---

೧೭. ಸಾಲದಮರದಿಂದ ಹೊಡೆದರೂ ಆ ಹುಡುಗನು ಸ್ವಲ್ಪವೂ ಅಲ್ಲಾಡದೆ ನಗುತ್ತಲಿರುವುದನ್ನು ಕಂಡು ವೀರರೆಲ್ಲರೂ ಹೊಗಳಿದರು.

೧೮. ಸಾಲವೃಕ್ಷದಿಂದ ಹೊಡೆಯಲ್ಪಟ್ಟವನಾಗಿ ವೈರಿಯನ್ನು ಕೊಲ್ಲಲು ಸಂಹಾರಾಸ್ತ್ರವನ್ನು ಹೂಡಿದನು.

೧೯. ಸಂಹಾರಾಸ್ತ್ರವನ್ನು ಕುಶನು ಬಿಡಲು ಇದು ದುರ್ಜಯವೆಂದು ತಿಳಿದು ಹನುಮಂತನು ಭಕ್ತರಕ್ಷಕನಾದ ರಾಮನನ್ನು ಸ್ಮರಿಸಿದನು.

೨೦. ಕುಶನು ಆ ಅಸ್ತ್ರವನ್ನು ಬಿಡಲು ಅದು ಹನುಮಂತನ ಎದೆಯಲ್ಲಿ ನಾಟಲು ಅವನು ಮೂರ್ಛೆಗೊಂಡನು.

೨೧. ಹನುಮಂತನು ಮೂರ್ಛೆಹೊಂದಿದುದನ್ನು ತಿಳಿದು ಕುಶನು ಸೈನ್ಯವನ್ನು ಬಾಣಗಳಿಂದ ಹೊಡೆಯುತ್ತಾ ಅಲ್ಲೋಲಕಲ್ಲೋಲಮಾಡಿದನು.

೨೨. ಆ ಕುಶನ ಬಾಣಗಳಿಂದ ಹೊಡೆಯಲ್ಪಟ್ಟ ಚತುರಂಗ ಸೈನ್ಯವೆಲ್ಲವೂ ಪಲಾಯನಮಾಡಿದವು.

ತದಾ ಕಪಿಪತಿಃ ಕೋಪಾತ್ ಸುಗ್ರೀವೋ ರಕ್ಷಕೋ ಮಹಾನ್ ।
ಅಭ್ಯಧಾವನ್ನಗಾನ್ನೈಕಾನುತ್ಪಾಟ್ಯ ಕುಶಮುದ್ಭಟಂ ॥ ೨೩ ॥

ಕುಶಸ್ತಾನ್ಸರ್ವಾಂಶ್ಚಿಚ್ಛೇದ ಲೀಲಯಾ ಪ್ರಹಸನ್ನಗಾನ್ ।
ಪುನರಪ್ಯಾಗತಾನ್ಸರ್ವಾನ್ ಚಿಚ್ಛೇದ ತರಸಾ ಬಲೀ ॥ ೨೪ ॥

ಅನೇಕಬಾಣವ್ಯಥಿತಃ ಸುಗ್ರೀವಸ್ಸಮರಾಂಗಣೇ ।
ಜಗ್ರಾಹ ಪರ್ವತಂ ಘೋರಂ ಕುಶಮಸ್ತಕಮಧ್ಯತಃ ॥ ೨೫ ॥

ಕುಶಸ್ತಂ ನಗಮಾಯಾಂತಂ ವೀಕ್ಷ್ಯ ಬಾಣೈರನೇಕಧಾ ।
ನಿಷ್ಪಿಪೇಷ ಚಕಾರಾಶು ಮಹಾರುದ್ರಾಂಗಯೋಗ್ಯತಾಂ ॥ ೨೬ ॥

ಸುಗ್ರೀವಸ್ತನ್ಮಹತ್ಕರ್ಮ ದೃಷ್ಟ್ವಾ ಬಾಲೇನ ನಿರ್ಮಿತಂ ।
ಜಯಾಶಾಂ ಪ್ರತಿ ನಿರ್ವೃತ್ತೋ ಬಭೂವ ಸಮರಾಂಗಣೇ ॥ ೨೭ ॥

ರಣಮಧ್ಯೇ ದುರಾಕ್ರಾಂತಂ ಕುಶಂ ಲಾಂಗೂಲತಾಡಕಂ ।
ಅತ್ಯಮರ್ಷೀ ರುಷಾಕ್ರಾಂತಸ್ತಂ ಹಂತುಂ ನಗಮಾದದೇ ॥ ೨೮ ॥

---

೨೩. ಆಗ ಕಪಿರಾಜನಾದ ಸುಗ್ರೀವನು ಆ ಸೈನ್ಯಕ್ಕೆ ರಕ್ಷಕನಾಗಿ ಅನೇಕ ಮರಗಳನ್ನು ಕಿತ್ತುಕೊಂಡು ಬಂದು ಕುಶನನ್ನು ಎದುರಿಸಿದನು.

೨೪. ಕುಶನು ಆ ಮರಗಳನ್ನೆಲ್ಲಾ ಲೀಲೆಯಿಂದಲೇ ಕತ್ತರಿಸಿ ಪುನಃ ಎಸೆಯುತ್ತಿದ್ದುವುಗಳನ್ನೂ ಕತ್ತರಿಸಿದನು.

೨೫. ಸುಗ್ರೀವನು, ಈ ಕುಶನು ಕತ್ತರಿಸುತ್ತಿರುವುದನ್ನು ನೋಡಿ ಒಂದು ದೊಡ್ಡ ಬೆಟ್ಟವನ್ನು ತಂದು ಆ ಕುಶನ ನೆತ್ತಿಯ ಮೇಲೆಸೆದನು.

೨೬. ಬರುತ್ತಿರುವ ಆ ಬೆಟ್ಟವನ್ನು ಕುಶನು ಪುಡಿಪುಡಿ ಮಾಡಿ ರುದ್ರನು ಮೈಗೆ ಬಳಿದುಕೊಳ್ಳುವಂತೆ ಮಾಡಿದನು.

೨೭. ಸುಗ್ರೀವನು ಈ ಅದ್ಭುತ ಕರ್ಮವನ್ನು ನೋಡಿ ಜಯದ ಆಶೆಯನ್ನು ಬಿಟ್ಟುಬಿಟ್ಟನು.

೨೮. ಅನಂತರ ಬಾಲವನ್ನು ಬಾಣದಿಂದ ಹೊಡೆಯುತ್ತಿರುವ ಕುಶನನ್ನು ಕೊಲ್ಲಲು ಒಂದು ದೊಡ್ಡ ಬೆಟ್ಟವನ್ನು ಕಿತ್ತುತಂದನು.

ಆತ್ಮಾನಂ ಹಂತುಮುದ್ಯುಕ್ತಂ ವೀಕ್ಷ್ಯ ಸುಗ್ರೀವಮಾದರಾತ್ ।
ತಾಡಯಾಮಾಸ ಬಹುಭಿಃ ಸಾಯಕೈಸ್ಸರ್ವತಶ್ಶಿತೈಃ ॥ ೨೯ ॥

ಸ ತಾಡಿತೋ ಬಹುವಿಧೈಶ್ಶರೈಃ ಪೀಡಾಸಮನ್ವಿತಃ ।
ಕುಶಂ ಹಂತುಂ ಸಮಾರಬ್ಧೋ ಯಯೌ ಶಾಲಂ ಸಮಾದದೇ ॥ ೩೦ ॥

ತದಾ ಪಿ ಚ ಕುಶೋ ವೀರೋ ವಾರುಣಾಸ್ತ್ರಂ ಸಮಾದದೇ ।
ಬಬಂಧ ತಂ ಚ ಪಾಶೇನ ದೃಢೇನ ಸ ಲವಾಗ್ರಜಃ ॥ ೩೧ ॥

ಸ ಬದ್ಧಃ ಪಾಶಕೈಃ ಸ್ನಿಗ್ಧೈಃ ಕುಶೇನ ಬಲಶಾಲಿನಾ ।
ಪಪಾತ ರಣಮಧ್ಯೇ ವೈ ಮಹಾವೀರೈರಲಂಕೃತೇ ॥ ೩೨ ॥

ಸುಗ್ರೀವಂ ಪತಿತಂ ದೃಷ್ಟ್ವಾ ವೀರಾಸ್ಸರ್ವತ್ರ ದುದ್ರುವುಃ ।
ಜಯಮಾಪ ಲವಭ್ರಾತಾ ಮಹಾವೀರಶಿರೋಮಣಿಃ ॥ ೩೩ ॥

ತಾವಲ್ಲವೋ ಭಟಾನ್ ಜಿತ್ವಾ ಪುಷ್ಕಲಂ ಚಾಂಗದಂ ತಥಾ ।
ಪ್ರತಾಪಾಗ್ರ್ಯಂ ವೀರಮಣಿಂ ತಥಾನ್ಯಾನಪಿ ಭೂಭುಜಃ ॥ ೩೪ ॥

---

೨೯. ತನ್ನನ್ನು ಕೊಲ್ಲಲು ಬರುತ್ತಿರುವ ಸುಗ್ರೀವನನ್ನು ನೋಡಿ ಅವನನ್ನು ಅನೇಕ ಬಾಣಗಳಿಂದ ಹೊಡೆದನು.

೩೦. ಸುಗ್ರೀವನು ಬಹು ಏಟು ತಿಂದು ಕುಶನನ್ನು ಕೊಲ್ಲಲು ಮತ್ತೆ ಒಂದು ಸಾಲವೃಕ್ಷವನ್ನು ಕಿತ್ತುಕೊಂಡು ಹೋದನು.

೩೧. ಆಗ ಕುಶನು ವಾರುಣಾಸ್ತ್ರವನ್ನು ಬಿಟ್ಟು ಪಾಶದಿಂದ ಸುಗ್ರೀವನನ್ನು ಕಟ್ಟಿದನು.

೩೨. ಕುಶನು ವಾರುಣಾಸ್ತ್ರದಿಂದ ಕಟ್ಟಲು ರಣಮಧ್ಯದಲ್ಲಿ ಸುಗ್ರೀವನು ಬಿದ್ದುಬಿಟ್ಟನು.

೩೩. ಸುಗ್ರೀವನು ಬೀಳಲು ವೀರರೆಲ್ಲರೂ ಓಡಿದರು, ಕುಶನು ಜಯಶಾಲಿಯಾದನು.

೩೪. ಅಷ್ಟರೊಳಗೆ ಲವನು ಪುಷ್ಕಳ, ಅಂಗದ, ಪ್ರತಾಪಾಗ್ರ್ಯ, ವೀರಮಣಿ ಮುಂತಾದವರನ್ನು ಗೆದ್ದುಬಂದನು.

ಜಯಂ ಪ್ರಾಪ್ಯ ರಣೇ ವೀರೋ ಲವೋ ಭ್ರಾತರಮಾಗತಂ ।
ಸಂಗ್ರಾಮೇ ಜಯಕರ್ತಾರಂ ವೈರಿಕೋಟಿನಿಪಾತಕಂ ॥ ೩೫ ॥

ಪರಸ್ಪರಂ ಪ್ರಹೃಷ್ಟೌ ಪರಿರಂಭಂ ಪ್ರಕುರ್ವತಃ ।
ಜಯಂ ಪ್ರಾಪ್ತೌ ಮುನೇ ತತ್ರ ವಾರ್ತಾಂ ಚಕ್ರತುರುನ್ಮದಾ ॥ ೩೬ ॥

॥ ಲವ ಉವಾಚ ॥

ಭ್ರಾತಸ್ತವ ಪ್ರಸಾದೇನ ನಿಸ್ತೀರ್ಣೋ ರಣಸಾಗರಃ ।
ಇದಾನೀಂ ವೀರ ರಣಕಂ ಶೋಧಯಾವಃ ಸುಶೋಭಿತಂ ॥ ೩೭ ॥

ಇತ್ಯುಕ್ತ್ವಾ ರಾಜಸನಿಧೇ ಜಗಾಮ ಸ ಲವಃ ಕುಶಃ ।
ರಾಜ್ಞೋ ಮೌಳಿಮಣಿಂ ಚಿತ್ರಂ ಜಗ್ರಾಹ ಕನಕಾನ್ವಿತಂ ॥ ೩೮ ॥

ಪುಷ್ಕಲಸ್ಯ ಲವೋ ವೀರೋ ಜಗ್ರಾಹ ಮುಕುಟಂ ಶುಭಂ ।
ಅಂಗದೇ ಚ ಮಹಾನರ್ಘೇ ಶತ್ರುಘ್ನಸ್ಯಾಪರಸ್ಯ ಚ ॥ ೩೯ ॥

ಗೃಹೀತ್ವಾ ಶಸ್ತ್ರಸಂಘಾತಂ ಹನೂಮಂತಂ ಕಪೀಶ್ವರಂ
ಸುಗ್ರೀವಂ ಸನಿಧೇ ಗತ್ವಾ ಉಭಾವಪಿ ಬಬಂಧತುಃ ॥ ೪೦ ॥

---

೩೫. ಲವನು ಎಲ್ಲರನ್ನೂ ಜಯಿಸಿಕೊಂಡು ಜಯಶೀಲನಾದ ಅಣ್ಣನನ್ನು ಹೊಂದಿದನು.

೩೬. ಸಂತೋಷಗೊಂಡು ಅಣ್ಣತಮ್ಮಂದಿರಿಬ್ಬರೂ ಆಲಿಂಗನೆಮಾಡಿಕೊಂಡರು. ಆಲಿಂಗಿಸಿಕೊಂಡು ಸಂತೋಷದಿಂದ ಮಾತನಾಡಿಕೊಳ್ಳುತ್ತಿದ್ದರು.

೩೭. ಲವನು ಹೇಳಿದನು:—ಅಣ್ಣ! ನಿನ್ನ ಅನುಗ್ರಹದಿಂದ ಯುದ್ಧಸಾಗರವನ್ನು ದಾಟಿದೆನು. ಈಗ ಎಲೈ ವೀರನೇ, ರಣಾಂಗಣದಲ್ಲಿ ಒಳ್ಳೆಯದನ್ನು ಶೋಧಿಸೋಣ.

೩೮-೩೯. ಹೀಗೆಂದು ಹೇಳಿ ರಾಜನಾದ ಶತ್ರುಘ್ನನಲ್ಲಿಗೆ ಆ ಇಬ್ಬರೂ ಹೋಗಿ ರಾಜನ ತಲೆಯಲ್ಲಿರುವ ಒಂದು ಚಿತ್ರವಾದ ಮಣಿಯನ್ನು ತೆಗೆದುಕೊಂಡರು. ಪುಷ್ಕಲನ ಕಿರೀಟವನ್ನೂ, ಮತ್ತೊಬ್ಬನ ಭುಜಕೀರ್ತಿಗಳನ್ನೂ ತೆಗೆದುಕೊಂಡರು.

೪೦. ಶಸ್ತ್ರಗಳನ್ನೂ ಕೂಡ ತೆಗೆದುಕೊಂಡು ಹನುಮಂತ ಸುಗ್ರೀವರ ಬಳಿಗೆ ಹೋಗಿ ಆ ಇಬ್ಬರನ್ನೂ ಕಟ್ಟಿದರು.

ಪುಚ್ಛಂ ವಾಯುಸುತಸ್ಯಾಯಂ ಗೃಹೀತ್ವಾ ತು ಕುಶಾನುಜಃ ।
ಭ್ರಾತರಂ ಪ್ರತಿ ಪ್ರೋವಾಚ ನೇಷ್ಯಾಮಿ ಸ್ವಕಮಂದಿರಂ ॥ ೪೧ ॥

ಆವಯೋರ್ಜನನೀಪ್ರೀತ್ಯೈ ಗೃಹೀತ್ವಾ ಪುಚ್ಛಕೇ ತ್ವರಂ ।
ಕ್ರೀಡಾರ್ಥಂ ಮುನಿಪುತ್ರಾಣಾಂ ಕೌತುಕಾರ್ಥಂ ಮಮೈವ ಚ ॥ ೪೨ ॥

ಏತಚ್ಛ್ರುತ್ವಾ ತತೋ ವಾಕ್ಯಮುವಾಚ ಚ ಲವಂ ಕುಶಃ ।
ಅಹಮೇನಂ ಗ್ರಹೀಷ್ಯಾಮಿ ವಾನರಂ ಬಲಿನಂ ದೃಢಂ ॥ ೪೩ ॥

ಇತ್ಯೇವಂ ಭಾಷಮಾಣೌ ತೌ ಬಧ್ವಾ ತೌ ಬಲಿನಾಂ ವರೌ ।
ಪುಚ್ಛಯೋರ್ಬಲಿನೌ ಧೃತ್ವಾ ಜಗ್ಮತುಸ್ಸ್ವಾಶ್ರಮಂ ಪ್ರತಿ ॥ ೪೪ ॥

ಸ್ವಾಶ್ರಮಾಯ ಪ್ರಗಚ್ಛಂತೌ ವೀಕ್ಷ್ಯ ತೌ ಕಪಿಸತ್ತಮೌ ।
ಕಂಪಮಾನೌ ಜಗದತುರನ್ಯೋನ್ಯಂ ಭೀತಯಾ ಗಿರಾ ॥ ೪೫ ॥

ಹನೂಮಾನ್ಕಪಿರಾಜಾನಂ ಪ್ರತ್ಯುವಾಚ ಭಯಾದ್ರ್ರಧೀಃ ।
ಏತೌ ರಾಮಸುತಾವಸ್ಮಾನ್ನೇಷ್ಯತಃ ಸ್ವಾಶ್ರಮಂ ಪ್ರತಿ ॥ ೪೬ ॥

---

೪೧-೪೨. ಲವನು ಹನುಮಂತನ ಬಾಲವನ್ನು ಹಿಡಿದುಕೊಂಡು ಅಣ್ಣಾ, ನಮ್ಮ ತಾಯಿಯು ಮತ್ತು ಋಷಿಕುಮಾರರು ಸಂತೋಷದಿಂದ ಕ್ರೀಡಿಸಲು ಈ ಕಪಿಯನ್ನು ನಮ್ಮ ಮನೆಗೆ ತೆಗೆದುಕೊಂಡು ಹೋಗೋಣ ನನಗೂ ಆಶೆಯಾಗುತ್ತಿದೆ ಎಂದನು.

೪೩. ಈ ಮಾತನ್ನು ಕೇಳಿ ಕುಶನು ನೀನು ಆ ಕಪಿಯನ್ನು ಹಿಡಿದುಕೋ ಈ ಕಪಿಯು ಬಲವಾಗಿಯೂ ದೃಢವಾಗಿಯೂ ಇದೆ. ಇದನ್ನು ನಾನು ಹಿಡಿದು ಕೊಳ್ಳುತ್ತೇನೆ.

೪೪. ಹೀಗೆಂದು ಮಾತನಾಡಿಕೊಂಡು ಅವೆರಡು ಕಪಿಗಳನ್ನೂ ಕಟ್ಟಿ ಬಾಲವನ್ನು ಹಿಡಿದುಕೊಂಡು ತಮ್ಮ ಆಶ್ರಮಕ್ಕೆ ಹೊರಟರು.

೪೫. ಅವರು ಆಶ್ರಮಕ್ಕೆ ಹೋಗುತ್ತಿರುವುದನ್ನು ನೋಡಿ ಅವೆರಡು ಕಪಿಗಳೂ ನಡುಗುತ್ತಾ ಹೀಗೆಂದುಕೊಂಡುವು.

೪೬. ಹನುಮಂತನು ಸುಗ್ರೀವನನ್ನು ಕುರಿತು ಇವರಿಬ್ಬರೂ ರಾಮನ ಮಕ್ಕಳು. ನಮ್ಮನ್ನು ಆಶ್ರಮಕ್ಕೆ ಕರೆದುಕೊಂಡು ಹೋಗುತ್ತಾರೆ.

ಮಯಾ ಪೂರ್ವಂ ಕೃತಂ ಕರ್ಮ ಜಾನಕೀಂ ಪ್ರತಿ ಗಚ್ಛತಾ ।
ತತ್ರ ಮೇ ಜಾನಕೀ ದೇವೀ ಸಂಮುಖಾಭೂನ್ಮನೋಹರಾ ॥ ೪೭ ॥

ಸಾ ಮಾಂ ದ್ರಕ್ಷ್ಯತಿ ವೈದೇಹೀ ಬದ್ಧಂ ಪಾಶೇನ ವೈರಿಣಾ ।
ತದಾ ಹಸಿಷ್ಯತಿ ವರಾ ತ್ರಪಾ ಮೇಽತ್ರ ಭವಿಷ್ಯತಿ ॥ ೪೮ ॥

ಮಯಾ ಕಿಮತ್ರ ಕರ್ತವ್ಯಂ ಪ್ರಾಣತ್ಯಾಗೋ ಭವಿಷ್ಯತಿ ।
ಮಹದ್ದುಃಖಂ ಚಾಪತಿತಂ ಸ ರಾಮಃ ಕಿಂ ಕರಿಷ್ಯತಿ ॥ ೪೯ ॥

ಸುಗ್ರೀವಸ್ತದ್ವಚಶ್ಶ್ರುತ್ವಾ ಮಮಾಪೀವ್ಯಂ ಮಹಾಕಪೇ ।
ನೇಷ್ಯತೇ ಯದಿ ಮಾಮೇವಂ ನಿಧನಂ ತು ಭವಿಷ್ಯತಿ ॥ ೫೦ ॥

ಏವಂ ಕಥಯತೋರೇವ ಹ್ಯನ್ಯೋನ್ಯಂ ಭಯಭೀತಯೋಃ ।
ಕುಶೋ ಲವಶ್ಚ ಭವನಂ ಮಾತುಃ ಪ್ರಾಪ ಮನೋಹರೌ ॥ ೫೧ ॥

ತಾವಾಯಾತೌ ಸಮೀಕ್ಷ್ಯೈವ ಜಹರ್ಷ ಜನನೀ ತಯೋಃ ।
ಅನ್ಯೋನ್ಯಂ ಪರಮಪ್ರೀತ್ಯಾ ಪರಿರೇಭೇ ನಿಜೌ ಸುತೌ ॥ ೫೨ ॥

---

೪೭-೪೮. ನಾನು ಹಿಂದೆ ಜಾನಕಿಯನ್ನು ನೋಡಲು ಹೋಗಿದ್ದೆನು. ಆಗ ಜಾನಕಿಯು ಎದುರಿಗೆ ಸಂತೋಷದಿಂದ ಮಾತನಾಡಿದಳು. ಈಗ ಅದೇ ಸೀತೆಯು ವೈರಿಯಿಂದ ಕಟ್ಟಲ್ಪಟ್ಟಿರುವ ನನ್ನನ್ನು ನೋಡಿ ನಗುತ್ತಾಳೆ. ನನಗೆ ಬಹು ನಾಚಿಕೆಯಾಗುತ್ತದೆ.

೪೯. ನಾನೇನು ಮಾಡಲಿ? ಪ್ರಾಣಹೋಗುತ್ತದೆ. ಬಹು ಕಷ್ಟಕ್ಕೀಡಾದೆನು. ರಾಮನ ಗತಿ ಏನಾಗುವುದೋ? ಅವನೇನು ಮಾಡುತ್ತಾನೋ ?

೫೦. ಆ ಮಾತನ್ನು ಕೇಳಿ ಎಲೈ ಹನುಮಂತನೇ, ನನಗೂ ಹಾಗೇನೆ. ನನ್ನನ್ನು ಕರೆದುಕೊಂಡು ಹೋದರೆ ನನಗೂ ಪ್ರಾಣಹೋಗುತ್ತದೆ.

೫೧. ಹೀಗೆ ಇವರು ಮಾತನಾಡುತ್ತಿರುವಾಗಲೇ ಅವರಿಬ್ಬರೂ ತಾಯಿಯ ಬಳಿಗೆ ಹೋದರು.

೫೨. ಅವರಿಬ್ಬರೂ ಬಂದುದನ್ನು ನೋಡಿ ತಾಯಿಯು ಸಂತೋಷಪಟ್ಟು ಆಲಿಂಗಿಸಿದಳು.

ತಾಭ್ಯಾಂ ಪುಚ್ಛಗೃಹೀತೌ ತೌ ವಾನರೌ ವೀಕ್ಷ್ಯ ಜಾನಕೀ ।
ಹನೂಮಂತಂ ಚ ಸುಗ್ರೀವಂ ಸರ್ವವೀರಕಪೀಶ್ವರಂ ॥ ೫೩ ॥

ಜಹಾಸ ಪಾಶಬದ್ಧೌ ತೌ ವೀಕ್ಷ್ಯಮಾಣಾ ವರಾಂಗನಾ ।
ಉವಾಚ ಚ ವಿಮೋಕ್ಷಾರ್ಥಂ ವದಂತೀ ವಚನಂ ವರಂ ॥ ೫೪ ॥

॥ ಜಾನಕ್ಯುವಾಚ ॥

ಪುತ್ರೌ ಕಪೀ ಮುಂಚತಂ ತೌ ಮಹಾವೀರೌ ಮಹಾಬಲೌ ।
ದ್ರಕ್ಷ್ಯತೋ ಯದಿ ಮಾಂ ಸ್ಥಿತೌ ಪ್ರಾಣತ್ಯಾಗಂ ಕರಿಷ್ಯತಃ ॥ ೫೫ ॥

ಅಯಂ ವೈ ಹನುಮಾನ್ವೀರೋ ಯೋ ದದಾಹ ದನೋಃ ಪುರೀಂ ।
ಅಯಮೃಕ್ಷರಾಜೋ ಹಿ ಸರ್ವವಾನರಭೂಮಿಪಃ ॥ ೫೬ ॥

ಕಿಮರ್ಥಂ ವಿಧೃತೌ ಕುತ್ರ ಕಿಂ ವಾ ಕೃತಮನಾದರಾತ್ ।
ಗೃಹೀತೌ ಯೇ ನ ವಾಂ ಪುಚ್ಛೇ ತಚ್ಛಂಸಾಸ್ಮಾನ್ಮನಃಸ್ಥಿತಂ ॥ ೫೭ ॥

ಇತಿ ಮಾತುರ್ವಚಶ್ಶ್ಲಕ್ಷ್ಣಂ ವೀಕ್ಷ್ಯ ತಾಂ ಪುತ್ರಕೌ ತದಾ ।
ಊಚತುರ್ವಿನಯಶ್ರೇಷ್ಠೌ ಮಹಾಬಲಸಮನ್ವಿತೌ ॥ ೫೮ ॥

---

೫೩. ಬಾಲ ಹಿಡಿದುಕೊಂಡು ಎಳತಂದಿರುವ ಆ ಕಪಿಗಳನ್ನು ಜಾನಕಿಯು ನೋಡಿ ನಕ್ಕಳು.

೫೪. ಮಾತನಾಡುತ್ತಾ ಅವರನ್ನು ಬಿಟ್ಟುಬಿಡುವಂತೆ ಮಕ್ಕಳಿಗೆ ಹೇಳಿದಳು.

೫೫. ಅಪ್ಪ ಮಕ್ಕಳಿರಾ, ಮಹಾವೀರರಾದ ಈ ಕಪಿಗಳನ್ನು ಬಿಟ್ಟುಬಿಡಿ. ನನ್ನನ್ನು ನೋಡಿದರೆ ಲಜ್ಜೆಯಿಂದ ಪ್ರಾಣತ್ಯಾಗಮಾಡಿಕೊಳ್ಳುತ್ತವೆ.

೫೬. ಇವನೇ ಲಂಕೆಯನ್ನು ಸುಟ್ಟ ಮಹಾಕಪಿಯು. ಈತನು ವಾನರರಾಜನಾದ ಸುಗ್ರೀವನು.

೫೭. ಇವನ್ನು ಏತಕ್ಕೆ ಹಿಡಿದಿರಿ ? ಎಲ್ಲಿ ಹಿಡಿದು ಏನು ಮಾಡಿದುವು ? ಲಕ್ಷಿಸದೆ ಬಾಲವನ್ನು ಹಿಡಿದೇಕೆ ಎಳೆತಂದಿರುತ್ತೀರಿ ? ಅದನ್ನು ಹೇಳಿ.

೫೮. ಈ ರೀತಿಯಾದ ತಾಯಿಯ ಮಾತನ್ನು ಕೇಳಿ ಆ ವೀರರು ವಿನಯದಿಂದ ತಾಯಿಗೆ ಇಂತೆಂದರು.

॥ ಪುತ್ರಾವೂಚತುಃ ॥

ಮಾತಃ ಕಶ್ಚನ ಭೂಪಾಲೋ ರಾಮೋ ದಾಶರಥಿರ್ಬಲೀ ।
ತೇನ ಮುಕ್ತೋ ಹಯಸ್ಸ್ವರ್ಣಫಾಲಪತ್ರಸ್ಸುಶೋಭಿತಃ ॥ ೫೯ ॥

ತತ್ರೈವಂ ಲಿಖಿತಂ ಮಾತರೇಕವೀರಾ ಪ್ರಸೂರ್ಮಮ ।
ಯೇ ಕ್ಷತ್ರಿಯಾಸ್ತೇ ಗೃಹ್ಣಂತು ನೋ ಚೇತ್ಪಾದತಲಾರ್ಚಕಾಃ ॥ ೬೦ ॥

ತದಾ ಮಯಾ ವಿಚಾರೋ ವೈ ಕೃತಃ ಸ್ವಾಂತೇ ಪತಿವ್ರತೇ ।
ಭವತೀ ಕ್ಷತ್ರಿಯಾ ಕಿಂ ನ ವೀರಸೂಃ ಕಿಂ ನ ವಾ ಭವೇತ್ ॥ ೬೧ ॥

ಧಾರ್ಷ್ಟ್ಯಂ ತದ್ವೀಕ್ಷ್ಯ ಭೂಪಸ್ಯ ಗೃಹೀತೋಽಶ್ವೋ ಮಯಾ ಮಹಾನ್ ।
ಜಿತಂ ಕುಶೇನ ವೀರೇಣ ಸೈನ್ಯಂ ತತ್ಪಾತಿತಂ ರಣೇ ॥ ೬೨ ॥

ಮುಕುಟೋಽಯಂ ಭೂಮಿಪತೇರ್ಜಾನೀಹಿ ಪತಿದೇವತೇ ।
ಅಯಮುಷ್ಯಸ್ಯವೀರಸ್ಯ ಪುಷ್ಕಲಸ್ಯ ಮಹಾತ್ಮನಃ ॥ ೬೩ ॥

---

೫೯. ಮಕ್ಕಳು ಹೇಳಿದರು :—ಅಮ್ಮಾ, ಒಬ್ಬ ರಾಜನಂತೆ, ಅವನ ಹೆಸರು ದಾಶರಥಿಯಂತೆ, ಬಹು ಬಲಿಷ್ಠನಂತೆ. ಅವನು ಚಿನ್ನದ ತಗಡಿನಲ್ಲಿ ತನ್ನ ಬಿರುದನ್ನು ಬರೆದು ಒಂದು ಕುದುರೆಯ ಹಣೆಗೆ ಕಟ್ಟಿ ಅದನ್ನು ಬಿಟ್ಟಿದ್ದಾನೆ.

೬೦. ನನ್ನ ತಾಯಿಯೊಬ್ಬಳೇ ಶೂರನಾದ ಮಗನನ್ನು ಹೆತ್ತವಳು, ಕ್ಷತ್ರಿಯರಾದವರೂ ಗಟ್ಟಿಗರಿದ್ದರೆ ಕುದುರೆಯನ್ನು ಹಿಡಿದು ಯುದ್ಧಮಾಡಿರಿ. ಇಲ್ಲದಿದ್ದರೆ ರಾಮನ ಪಾದಕಮಲಕ್ಕೆ ಪೂಜಕರಾಗಿರಿ ಎಂಬುದಾಗಿ ಅದರಲ್ಲಿ ಬರೆದಿದ್ದಿತು.

೬೧. ನೀನು ಕ್ಷತ್ರಿಯಳಲ್ಲವೇ? ವೀರರಾದ ಮಕ್ಕಳನ್ನು ಹೆತ್ತಿಲ್ಲವೇ? ಎಂದು ನಾನು ಮನಸ್ಸಿನಲ್ಲಿ ವಿಚಾರಮಾಡಿದೆ.

೬೨. ರಾಜನ ಆ ಹೆಮ್ಮೆಯನ್ನು ನೋಡಿ ಆ ಕುದುರೆಯನ್ನು ಹಿಡಿದೆ. ಕುಶನು ಅವರ ಸೈನ್ಯವೆಲ್ಲವನ್ನೂ ಜಯಿಸಿದನು.

೬೩. ಇದು ಆ ರಾಜನ ಕಿರೀಟವು, ಇದು ಇನ್ನೊಬ್ಬ ಪುಷ್ಕಳನೆಂಬ ವೀರನದು, ಚೆನ್ನಾಗಿದೆ ಉತ್ತಮವಾದುದು,

ಜಾನೀಹಿ ಮಾಕುಟಂ ತ್ವನ್ಯಂ ಮಣಿಮುಕ್ತಾವಿರಾಜಿತಂ ।
ಅಪ್ಸ್ವೀಯಂ ನೋ ಮನೋಹಾರಿ ಕಾಮಯಾನೋ ಹಿ ಭೂಪತೇಃ ॥೬೪॥

ಆರೋಪಣಾಯ ಮದ್ಭ್ರಾತುರ್ಜಾನೀಹಿ ಬಲಿನೋ ವರೇ ।
ಇಮೌ ಕೀಶೌ ಮಯಾ ರಂತುಮಾನೀತೌ ಬಲಿನಾಂ ವರೌ ॥ ೬೫ ॥

ಕೌತುಕಾರ್ಥಂ ತವೈಸ್ತೈತೌ ಸಂಗ್ರಾಮೇ ಯುದ್ಧಕಾರಕೌ ।
ಇತಿ ವಾಕ್ಯಂ ಸಮಾಕರ್ಣ್ಯ ಜಾನಕೀ ಪತಿದೇವತಾ ॥ ೬೬ ॥

ಜಗಾದ ಪುತ್ರೌ ತೌ ವೀರೌ ಮೋಚಯಂತೀ ಪುನಃಪುನಃ ॥ ೬೭ ॥

॥ ಸೀತೋವಾಚ ॥

ಯುವಾಭ್ಯಾಮನಯಸ್ಸ್ಪೃಷ್ಟೋ ಬದ್ಧೋ ರಾಮಹಯೋ ಮಹಾನ್ ।
ಅನೇಕೇ ಪಾತಿತಾ ವೀರಾ ಇಮೌ ಬದ್ಧೌ ಕಪೀಶ್ವರೌ ॥ ೬೮ ॥

ಪಿತುಸ್ತವ ಹಯೋ ವೀರೌ ಯಾಗಾರ್ಥಂ ಮೋಚಿತೋಽಮುನಾ ।
ತಸ್ಯಾಪಿ ಹೃತವಂತೌ ಕಿಂ ವಾಜಿನಂ ಮುಖಸತ್ತಮೇ ॥ ೬೯ ॥

---

೬೪. ಕುದುರೆಯು ಚೆನ್ನಾಗಿದ್ದಿತು, ಕುಶನು ಪತ್ತುವುದಕ್ಕಾಗುತ್ತದೆಂದ ತಂದೆ ಎಂದನು.

೬೫. ಇವೆರಡು ಕಪಿಗಳು ಬಹು ಬಲವಾದುವು, ಆಶ್ಚರ್ಯಕರವಾಗಿವೆ, ಯುದ್ಧವನ್ನು ಚೆನ್ನಾಗಿ ಮಾಡಿದುವು, ನೀನು ನೋಡಿ ಆನಂದಪಡಲೆಂದು ತಂದೆವು.

೬೬-೬೭. ಪತಿವ್ರತೆಯಾದ ಜಾನಕಿಯು ಇದನ್ನು ಕೇಳಿ ಅವರನ್ನು ಬಿಡಿಸುತ್ತಾ ಇಂತೆಂದಳು.

೬೮. ಸೀತೆಯು ಹೇಳಿದಳು :—ರಾಮನ ಯಾಗದ ಕುದುರೆಯನ್ನು ಕಟ್ಟಿ, ಅನೇಕ ವೀರರನ್ನು ಕೆಡವಿ, ಈ ಕಪಿಗಳನ್ನೂ ಕಟ್ಟಿ, ನೀವು ಬಹು ಕೆಟ್ಟ ಕೆಲಸವನ್ನು ಮಾಡಿದಿರಿ.

೬೯. ಎಲೈ ವೀರರಿರಾ, ಇದು ನಿಮ್ಮ ತಂದೆಯ ಕುದುರೆ, ಯಾಗಕ್ಕೋಸ್ಕರ ಬಿಟ್ಟಿದ್ದಾನೆ. ಅವನ ಕುದುರೆಯನ್ನು ಕಟ್ಟಿಬಿಟ್ಟಿದ್ದೀರಲ್ಲ.

ಮುಂಚತಂ ಪ್ಲವಗಾವೇತೌ ಮುಂಚತಂ ವಾಜಿನಾಂ ವರಂ ।
ಕ್ಷಾಮ್ಯತಾಂ ಭೂಪತೇರ್ಭ್ರಾತಾ ಶತ್ರುಘ್ನಃ ಪರಕೋಪನಃ ॥ ೭೦ ॥

ಜನನ್ಯಾಸ್ತದ್ವಚಶ್ಶ್ರುತ್ವಾ ಹ್ಯೂಚತುಸ್ತಾಂ ಬಲಾನ್ವಿತೌ ।
ಕ್ಷಾತ್ರಧರ್ಮೇಣ ತಂ ಭೂಪಂ ಜಿತವಂತೌ ಬಲಾನ್ವಿತಂ ॥ ೭೧ ॥

ನಾಸ್ಮಾಕಮನಯೋ ಭಾವೀ ಕ್ಷಾತ್ರಧರ್ಮೇಣ ಯುಧ್ಯತಾಂ ।
ವಾಲ್ಮೀಕಿನಾ ಪುರಾ ಪ್ರೋಕ್ತಮಸ್ಮಾಕಂ ಪಠತಾಂ ಪುರಃ ॥ ೭೨ ॥

ದುಷ್ಯಂತೇನ ಸಮಂ ಯುದ್ಧಂ ಭರತೇನ ಕೃತಂ ಪುರಾ ।
ಕಣ್ವಸ್ಯ ಚಾಶ್ರಮೇ ವಾಹಂ ಧೃತ್ವಾ ಯಾಗಕ್ರಿಯೋಚಿತಂ ॥ ೭೩ ॥

ತಸ್ಮಾತ್ಸುತಸ್ಸ್ವಪಿತ್ರಾಪಿ ಯುಧ್ಯೇದ್ಭ್ರಾತ್ರಾಪಿ ಚಾನುಜಃ ।
ಗುರುಣಾ ಶಿಷ್ಯ ಏವಾಪಿ ತಸ್ಮಾನ್ನೋ ಪಾಪಸಂಭವಃ ॥ ೭೪ ॥

ತ್ವದಾಜ್ಞಾತೋಽಧುನಾ ಚಾವಾಂ ದಾಸ್ಯಾವೋ ಹಯಮುತ್ತಮಂ ।
ಮೋಕ್ಷ್ಯಾವಃ ಕೀಶಾವೇತೌ ಹಿ ವಾಂ ಸರ್ವಂ ತತ್ಕೃತಂ ವಚಃ ॥ ೭೫ ॥

---

೭೦. ಈ ಕಪಿಗಳನ್ನು ಬಿಟ್ಟುಬಿಡಿ. ಕುದುರೆಯನ್ನೂ ಬಿಟ್ಟುಬಿಡಿ. ಶತ್ರುಘ್ನನನ್ನು ಕ್ಷಮಾಪಣೆ ಕೇಳಿಕೊಳ್ಳಿರಿ ಎಂದಳು.

೭೧. ತಾಯಿಯ ಮಾತನ್ನು ಕೇಳಿ, ಕ್ಷತ್ರಿಯ ಧರ್ಮದಿಂದ ಆ ವೀರನನ್ನು ಜಯಿಸಿದ್ದೇವೆ, ಎಂದರು.

೭೨. ನಾವೇನೂ ಅನ್ಯಾಯವನ್ನು ಮಾಡಿಲ್ಲ. ಕ್ಷತ್ರಧರ್ಮದಿಂದ ಯುದ್ಧ ಮಾಡಿದ್ದೇವೆ. ವಾಲ್ಮೀಕಿ ಮಹರ್ಷಿಗಳು ಪಾಠ ಹೇಳುತ್ತಿರುವಾಗ ನಮಗೆ ಹೇಳಿದ್ದಾರೆ.

೭೩-೭೪. ದುಷ್ಯಂತನೊಡನೆ ಮಗನಾದ ಭರತನು ಕಣ್ವರ ಆಶ್ರಮದಲ್ಲಿ ಯಾಗದ ಕುದುರೆಯನ್ನು ಹಿಡಿದು ಯುದ್ಧಮಾಡಿದ್ದಾನೆ. ಆದ್ದರಿಂದ ತಂದೆಯ ಸಂಗಡ ಮಗನೂ ಸೋದರನ ಸಂಗಡ ಸೋದರನೂ, ಗುರುವಿನ ಕೂಡ ಶಿಷ್ಯನೂ, ಯುದ್ಧಮಾಡಬಹುದು. ಪಾಪ ಬರುವುದಿಲ್ಲ, ಆದ್ದರಿಂದ ನಮಗೆ ಪಾಪವಿಲ್ಲ. ಈ ವಿಷಯವನ್ನು ಗುರುಗಳಾದ ವಾಲ್ಮೀಕಿ ಋಷಿಗಳೇ ನಮಗೆ ಹೇಳುತ್ತಾರೆ.

೭೫. ನಿನ್ನ ಅಪ್ಪಣೆಯಂತೆ ಈಗ ನಾವು ಈ ಕುದುರೆಯನ್ನು ಕೊಟ್ಟುಬಿಡುತ್ತೇವೆ, ಈ ಕಪಿಗಳನ್ನೂ ಬಿಟ್ಟುಬಿಡುತ್ತೇವೆ. ನಿನ್ನ ಮಾತಿನಂತೆ ಮಾಡಿದ ಹಾಗಾಯಿತು.

ಇತ್ಯುಕ್ತ್ವಾ ಮಾತರಂ ವೀರೌ ಗತೌ ರಣೇ ಕಪೀಶ್ವರೌ ।
ಅಮುಂಚತಾಂ ಹಯಂ ಚಾಪಿ ಹಯಮೇಧಕ್ರಿಯೋಚಿತಂ ॥ ೭೬ ॥

ಸೀತಾದೇವೀ ಸ್ವಪುತ್ರಾಭ್ಯಾಂ ಶ್ರುತ್ವಾ ಸೈನ್ಯನಿಪಾತನಂ ।
ಶ್ರೀರಾಮಂ ಮನಸಾ ಧ್ಯಾತ್ವಾ ಭಾನುಮೈಕ್ಷತ ಸಾಕ್ಷಿಣಂ ॥ ೭೭ ॥

ಯದ್ಯಹಂ ಮನಸಾ ವಾಚಾ ಕರ್ಮಣಾ ರಘುನಾಯಕಂ ।
ಭಜಾಮಿ ನಾನ್ಯಂ ಮನಸಾ ತರ್ಹಿ ಜೀವೇದಯಂ ನೃಪಃ ॥ ೭೮ ॥

ಸೈನ್ಯಂ ಚಾಪಿ ಮಹತ್ಸರ್ವಂ ಯನ್ನಾಶಿತಮಿದಂ ಬಲಾತ್ ।
ಪುತ್ರಾಭ್ಯಾಂ ತತ್ತು ಜೀವೇತ ಮತ್ಸತ್ಯಾಜ್ಜಗತಾಂ ಪತೇಃ ॥ ೭೯ ॥

ಇತಿ ಯಾವದ್ವಚೋ ಬ್ರೂತೇ ಜಾನಕೀ ಪತಿದೇವತಾ ।
ತಾವತ್ಸರ್ವಂ ಬಲಂ ನಷ್ಟಂ ಜೀವಿತಂ ರಣಮೂರ್ಧನಿ ॥ ೮೦ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಸೈನ್ಯಜೀವನಂ ನಾಮ ಚತುಷ್ಷಷ್ಟಿತಮೋಽಧ್ಯಾಯಃ

---

೭೬. ಹುಡುಗರು ಹೀಗೆಂದು ಹೇಳಿ ಕಪಿಗಳನ್ನೂ ಕುದುರೆಯನ್ನೂ ರಣಭೂಮಿಯಲ್ಲಿ ಬಿಟ್ಟರು.

೭೭. ಸೀತೆಯು ಹೀಗೆ ತನ್ನ ಮಕ್ಕಳಿಂದ ಸೈನ್ಯವು ನಾಶವಾದುದನ್ನು ಕೇಳಿ ಶ್ರೀರಾಮನನ್ನು ಮನಸ್ಸಿನಲ್ಲೇ ಧ್ಯಾನಿಸುತ್ತಾ ಲೋಕಸಾಕ್ಷಿಯಾದ ಸೂರ್ಯನನ್ನು ನೋಡಿದಳು.

೭೮-೭೯. ಮನೋವಾಕ್ಕಾಯಗಳಿಂದ ನಾನು ರಾಮನನ್ನೇ ಭಜಿಸುತ್ತಿದ್ದರೆ, ಈ ರಾಜನಾದ ಶತ್ರುಘ್ನನೂ, ನನ್ನ ಮಕ್ಕಳು ಕೊಂದಿರುವ ಈ ಸೈನ್ಯವೂ ಬದುಕಲಿ ಇದು ನನ್ನ ಸತ್ಯವಾದ ಮಾತು ಎಂದಳು.

೮೦. ಪತಿವ್ರತೆಯಾದ ಜಾನಕಿಯು ಹೀಗೆ ಹೇಳುತ್ತಲೇ ಆ ಯುದ್ಧದಲ್ಲಿ ಮಡಿದಿದ್ದವರೆಲ್ಲರೂ ಜೀವಿತರಾಗಿ ಎದ್ದರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಸೈನ್ಯಜೀವನವೆಂಬ
ಅರವತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

ಶ್ರೀಃ

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
# ಪಂಚಷಷ್ಟಿತಮೋಽಧ್ಯಾಯಃ

॥ ಶೇಷ ಉವಾಚ ॥

ಕ್ಷಣಾನ್ಮೂರ್ಛಾಂ ಜಹೌ ವೀರಃ ಶತ್ರುಘ್ನಸಮರಾಂಗಣೇ ।
ಅನ್ಯೇಽಪಿ ವೀರಾ ಬಲಿನೋ ಮೂರ್ಛಾಂ ಪ್ರಾಪ್ತಾಸ್ಸುಜೀವಿತಾಃ ॥ ೧ ॥

ಶತ್ರುಘ್ನೋ ವಾಜಿನಾಂ ಶ್ರೇಷ್ಠಂ ದದರ್ಶ ಪುರತಸ್ಥಿತಂ ।
ಆತ್ಮಾನಂ ಚ ಶಿರಸ್ತ್ರಾಣರಹಿತಂ ಸೈನ್ಯಜೀವಿತಂ ॥ ೨ ॥

ವೀಕ್ಷ್ಯ ಚಿತ್ರಮಿದಂ ಸ್ವಾಂತೇ ಚಕಾರ ಚ ಜಗಾದ ಚ ।
ಸುಮತಿಂ ಮಂತ್ರಿಣಾಂ ಶ್ರೇಷ್ಠಂ ಮೂರ್ಛಾವಿರಹಿತಂ ತದಾ ॥ ೩ ॥

ಕೃಪಾಂ ಕೃತ್ವಾ ಹಯಂ ಪ್ರಾದಾತ್ ಬಾಲೋ ಯಜ್ಞಸ್ಯ ಪೂರ್ತಯೇ ।
ಗಚ್ಛಾಮ ರಾಮಂ ತರಸಾ ಹಯಾಗಮನಕಾಂಕ್ಷಕಂ ॥ ೪ ॥

---

## ಅರವತ್ತೈದನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಮೂರ್ಛೆಗೊಂಡಿದ್ದ ಶತ್ರುಘ್ನನೂ, ಮಿಕ್ಕ ವೀರರೂ ಕ್ಷಣಕಾಲದಲ್ಲಿ ಜೀವಿತರಾದರು.

೨. ಶತ್ರುಘ್ನನು ತನ್ನ ಯಾಗದ ಕುದುರೆಯು ಮುಂದೆ ನಿಂತಿರುವುದನ್ನು ನೋಡಿದನು. ತನ್ನ ತಲೆಯಲ್ಲಿ ಕಿರೀಟವಿಲ್ಲದಿರುವುದನ್ನೂ, ಸೈನ್ಯಗಳೆಲ್ಲಾ ಜೀವಿಸಿರುವುದನ್ನೂ ತಿಳಿದು ಮನಸ್ಸಿನಲ್ಲಿ ಆಶ್ಚರ್ಯಪಟ್ಟು ಇಂತೆಂದನು.

೩-೪. ಮೂರ್ಛೆ ಬೀಳದಿದ್ದ ಸುಮತಿಯನ್ನು ಕುರಿತು, ಹುಡುಗನು ಕೃಪೆ ಮಾಡಿ ಯಜ್ಞ ಪೂರ್ತಿಯಾಗಲೆಂದು ಕುದುರೆಯನ್ನು ಕೊಟ್ಟಿದ್ದಾನೆ. ಶ್ರೀರಾಮನು ಕುದುರೆ ಬರುತ್ತಿರುವುದನ್ನೇ ಕಾಯುತ್ತಿರುವನು. ಅಲ್ಲಿಗೆ ಹೋಗೋಣ ಎಂದನು.

ಇತ್ಯುಕ್ತ್ವಾ ಸ್ವರಥೇ ಸ್ಥಿತ್ವಾ ಹಯಮಾದಾಯ ವೇಗತಃ ।
ಯಯೌ ತದಾಶ್ರಮಾದ್ದೂರಂ ಭೇರೀಶಂಖವಿವರ್ಜಿತಃ ॥ ೫ ॥

ತತ್ಪೃಷ್ಠತೋ ಮಹಾಸೈನ್ಯಂ ಚತುರಂಗಸಮನ್ವಿತಂ ।
ಚಚಾಲ ಕುರ್ವನ್ಸಂಭಗ್ನಂ ಸ್ವಭಾರೇಣ ಫಣೀಶ್ವರಂ ॥ ೬ ॥

ಜವೇನ ಜಾಹ್ನವೀಂ ತೀರ್ತ್ವಾ ಕಲ್ಲೋಲಜಲಮಾಲಿನೀಂ ।
ಜಗಾಮ ವಿಷಯೇ ಸ್ವೀಯೇ ಸ್ವಕೀಯಜನಶೋಭಿತೇ ॥ ೭ ॥

ಪುಷ್ಕಲೇನ ಯುತೋ ರಾಜಾ ಸುರಥೇನ ಸಮನ್ವಿತಃ ।
ರಥೇ ಮಣಿಮಯೇ ತಿಷ್ಠನ್ಮಹಾಕೋದಂಡಧಾರಕಃ ॥ ೮ ॥

ಹಯಂ ತಂ ಪುರತಃ ಕೃತ್ವಾ ರತ್ನಮಾಲಾವಿಭೂಷಿತಂ ।
ಶ್ವೇತಾತಪತ್ರಂ ತಸ್ಯೈವ ಮೂರ್ಧ್ನಿ ಚಾಮರಭೂಷಿತಃ ॥ ೯ ॥

ಅನೇಕರಥಸಾಹಸ್ರೈಃ ಪರೀತೋ ಬಲಿಭಿರ್ನೃಪೈಃ ।
ಉದ್ಯತ್ಕೋದಂಡಲಲಿತೈರ್ವೀರನಾದವಿಭೂಷಿತೈಃ ॥ ೧೦ ॥

ಕ್ರಮೇಣ ನಗರೀಂ ಪ್ರಾಪ ಸೂರ್ಯವಂಶವಿಭೂಷಿತಾಂ ।
ಅನೇಕೈಃ ಕೇತುಭಿಶ್ಚಿತ್ರೈರ್ಭೂಷಿತಾಂ ದುರ್ಗರಾಜಿತಾಂ ॥ ೧೧॥

---

೫. ಹೀಗೆಂದು ಹೇಳಿ ಸದ್ದುಮಾಡದೇ ಆ ಆಶ್ರಮದಿಂದ ಕುದುರೆ ದೂರ ಹೊರಟುಹೋದನು.

೬. ಆ ರಾಜನ ಹಿಂದೆ ಚತುರಂಗಬಲವೂ ಭೂಮಿಯ ಭಾರವನ್ನು ಹೊರ ಲಾರದೆ ಫಣೀಶ್ವರನು ಹೆಡೆಯನ್ನು ಅಲ್ಲಾಡಿಸುತ್ತ ಇರಲು ಹೊರಟಿತು.

೭. ಉತ್ತಮವಾದ ಗಂಗಾನದಿಯನ್ನು ದಾಟಿ ತಮ್ಮ ಕಡೆಯ ಜನರಿರುವ ತಮ್ಮ ದೇಶಕ್ಕೆ ಹೋದನು.

೮-೧೧. ಅನಂತರ ಪುಷ್ಕಳ ಸುರಥರೊಡನೆ ಒಳ್ಳೆಯ ರಥದಲ್ಲಿ ಶತ್ರುಘ್ನನು ಕುಳಿತು, ಅಲಂಕರಿಸಲ್ಪಟ್ಟ ಯಾಗದ ಕುದುರೆಯನ್ನು ಮುಂದೆ ಬಿಟ್ಟುಕೊಂಡು ಅನೇಕ ವೀರರೊಡನೆ ಸೂರ್ಯವಂಶದವರಿಂದ ಭೂಷಿತವಾದ ಧ್ವಜಗಳಿಂದ ಅಲಂಕೃತವಾದ ರಾಜಧಾನಿಯನ್ನು ಹೊಂದಿದನು.

ರಾಮಶ್ಶ್ರುತ್ವಾ ಹಯಂ ಪ್ರಾಪ್ತಂ ಶತ್ರುಘ್ನೇನ ಮಹಾತ್ಮನಾ ।
ಪುಷ್ಕಳೇನ ಚ ವೀರೇಣ ಯಯೌ ಹರ್ಷಮನೇಕಧಾ ॥ ೧೨ ॥

ಕಟಕಂ ನಿರ್ದಿದೇಶಾಸೌ ಚತುರಂಗಂ ಮಹಾಬಲಂ ।
ಲಕ್ಷ್ಮಣಂ ಪ್ರೇಷಯಾಮಾಸ ಭ್ರಾತರಂ ಬಲಿನಾಂ ವರಂ ॥ ೧೩ ॥

ಲಕ್ಷ್ಮಣಸ್ಸೈನ್ಯಸಹಿತೋ ಗತ್ವಾ ಭ್ರಾತರಮಾಗತಂ ।
ಪರಿರೇಭೇ ಮುದಾ ಕ್ರಾಂತಃ ಕ್ಷತಶೋಭಿತಗಾತ್ರಕಂ ॥ ೧೪ ॥

ಕುಶಲಂ ಪೃಷ್ಟವಾಂಸ್ತತ್ರ ವಾರ್ತಾಂ ಚಾತ್ರ ಚಕಾರ ಸಃ ।
ಪರಮಂ ಹರ್ಷಮಾಪನ್ನಃ ಶತ್ರುಘ್ನಸ್ಸಂಗತೋ ಮುದಾ ॥ ೧೫ ॥

ಸೌಮಿತ್ರಿಸ್ಸ್ವರಥೇ ಸ್ಥಿತ್ವಾ ಭ್ರಾತ್ರಾ ಸಹ ಮಹಾಮನಾಃ ।
ಸೈನ್ಯೇನ ಮಹತಾ ವೀರೋ ಯಯೌ ಸ್ವನಗರೀಂ ಪ್ರತಿ ॥ ೧೬ ॥

ಸರಯೂಃ ಪುಣ್ಯಸಲಿಲಾ ಪವಿತ್ರಿತಜಗತ್ರಯಾ ।
ರಾಮಪಾದರಜಃಪೂತಾ ಶರಚ್ಚಂದ್ರನಿಭಪ್ರಭಾ ॥ ೧೭ ॥

---

೧೨. ಶತ್ರುಘ್ನ ಪುಷ್ಕಳರೊಡನೆ ಕುದುರೆ ಬಂದುದನ್ನು ಕೇಳಿ ರಾಮನು ಬಹಳವಾಗಿ ಸಂತೋಷಪಟ್ಟನು.

೧೩. ಚತುರಂಗಬಲವು ಒಂದು ಕಡೆ ನಿಂತು ಶಿಬಿರ ಬಿಡುವಂತೆ ಅಪ್ಪಣೆ ಮಾಡಿ ಅಲ್ಲಿಗೆ ಲಕ್ಷ್ಮಣನನ್ನು ಕಳುಹಿಸಿದನು.

೧೪. ಲಕ್ಷ್ಮಣನು ಸೈನ್ಯ ಸಹಿತ ಹೋಗಿ ಎದುರುಗೊಂಡು ಆ ಗಾಯ ಹೊಂದಿದ ಶತ್ರುಘ್ನನನ್ನು ಆಲಿಂಗಿಸಿಕೊಂಡನು.

೧೫. ಕುಶಲವನ್ನು ಕೇಳಿ ಮಾತು ಕಥೆಗಳನ್ನಾಡಿದನು. ಶತ್ರುಘ್ನನು ಸಂತೋಷಗೊಂಡನು.

೧೬. ಸೌಮಿತ್ರಿಯು ಶತ್ರುಘ್ನನೊಡನೆಯೂ, ಸೈನ್ಯದೊಡನೆಯೂ, ವೀರರೊಡನೆಯೂ, ಪಟ್ಟಣವನ್ನು ಕುರಿತು ರಥದಲ್ಲಿ ಹೊರಟನು.

೧೭-೧೮. ಆ ಸರಯೂನದಿಯೂ ಪವಿತ್ರವಾದ ನೀರುಳ್ಳದು. ರಾಮ ಪಾದದ ಧೂಳಿನಿಂದ ಪವಿತ್ರವಾಗಿದೆ, ಚಂದ್ರಿಕೆಯಂತೆ ಬೆಳ್ಳಗಿರುವ ನೀರಿದೆ. ಹಂಸವೇ

ಹಂಸಕಾರಂಡವಾಕೀರ್ಣಾ ಚಕ್ರವಾಕೋಪಶೋಭಿತಾ ।
ವಿಚಿತ್ರತರವರ್ಣೈಶ್ಚ ಪಕ್ಷಿಭಿರ್ನಾದಿತಾ ಭೃಶಂ ॥ ೧೮ ॥

ಮಂಟಪಾಸ್ತತ್ರ ಬಹುಶೋ ರಾಮಚಂದ್ರೇಣ ಕಾರಿತಾಃ ।
ಬ್ರಾಹ್ಮಣಾನಾಂ ವೇದವಿದಾಂ ಪೃಥಕ್ಪಾಠನಿನಾದಕಾಃ ॥ ೧೯ ॥

ಕ್ಷತ್ರಿಯಾಸ್ತತ್ರ ಬಹವೋ ಧನುಷ್ಪಾಣಿಸುಶೋಭಿತಾಃ ।
ಜ್ಯಾಟಂಕಾರೇಣ ಬಹುನಾ ನಾದಯಂತೋ ಮಹೀತಲಂ ॥ ೨೦ ॥

ಭುಂಜತೇ ಬ್ರಾಹ್ಮಣಾ ಯತ್ರ ವಿಚಿತ್ರಾನ್ನೈರ್ಮನೋಹರೈಃ ।
ಪರಸ್ಪರಂ ಪ್ರಪಶ್ಯಂತೋ ವಾರ್ತಾಂ ಚಕ್ರುರ್ಮನೋಹರಾಂ ॥ ೨೧ ॥

ಪಯಸಾನ್ನಾನಿ ಸರ್ವಾಣಿ ಚಂದ್ರಕಾಂತಿಸಮಾನಿ ಚ ।
ಕ್ಷೀರಾಜ್ಯಮಧುಯುಕ್ತಾನಿ ಶರ್ಕರಾಮಿಶ್ರಿತಾನಿ ಚ ॥ ೨೨ ॥

ಅಪೂಪಾಸ್ತತ್ರ ಬಹುಳಾಶ್ಚಂದ್ರಬಿಂಬಸಮಾಶ್ರಿಯಾ ।
ಕರ್ಪೂರಾದಿಸುಗಂಧೇನ ವಾಸಿತಾಸ್ಸುಮನೋಹರಾಃ ॥ ೨೩ ॥

---

ಮುಂತಾದ ನೀರಿನ ಪಕ್ಷಿಗಳಿಂದ ಕೂಡಿದೆ, ನಾನಾ ಬಗೆಯ ಪಕ್ಷಿಗಳ ಧ್ವನಿಯಿಂದ ಕೂಡಿದೆ.

೧೯. ಆ ನದಿಯ ಸಮೀಪದಲ್ಲಿ ರಾಮಚಂದ್ರನು ಅನೇಕ ಮಂಟಪಗಳನ್ನು ಕಟ್ಟಿಸಿದ್ದನು. ಅದರಿಂದ ಶೋಭಿತವಾಗಿದೆ, ಬ್ರಾಹ್ಮಣರು ವೇದವನ್ನು ಹೇಳುವುದರಿಂದ ಆ ಧ್ವನಿಯಿಂದಲೂ ಕೂಡಿದೆ.

೨೦. ಬಹು ಜನ ಕ್ಷತ್ರಿಯರು ಧನುಸ್ಸನ್ನು ಧರಿಸಿ ಜ್ಯಾಟಂಕಾರಮಾಡುತ್ತಾ ಇರುತ್ತಿದ್ದರು.

೨೧. ಅಲ್ಲಿ ಬ್ರಾಹ್ಮಣರು ಮನೋಹರವಾದ ಮಾತನಾಡುತ್ತಾ ನಾನಾಬಗೆಯಾದ ಅನ್ನಗಳಿಂದ ಕೂಡಿದ ಭೋಜನವನ್ನು ಮಾಡುತ್ತಾರೆ.

೨೨. ಆ ಭೋಜನಗಳು ಚಂದ್ರಿಕೆಯಂತಿರುವ ಅನ್ನವೂ ಅದಕ್ಕೆ ಬೇಕಾದ ಹಾಲು ತುಪ್ಪ ಸಕ್ಕರೆಗಳನ್ನು ಸೇರಿಸಿ ಬಹು ರಸವತ್ತಾಗಿಯೂ ಮಾಡಲ್ಪಟ್ಟಿವೆ.

೨೩. ಚಿರೋಟಿ ಪೂರಿ ಮುಂತಾದುವು ಚಂದ್ರಬಿಂಬದಂತೆ ದುಂಡಗಿದ್ದು ಪಚ್ಚ ಕರ್ಪೂರಾದಿಗಳ ವಾಸನೆಯಿಂದ ಮನೋಹರವಾಗಿವೆ.

ಫೇನಿಕಾ ವಟಿಕಾಃ ಸ್ನಿಗ್ಧಾಃ ಶತಚ್ಛಿದ್ರಾ ನಿರಂಧ್ರಕಾಃ ।
ಮಂಡಕಾಃ ಶಷ್ಕುಲೀಮೃಷ್ಟಾ ಮಧುರಾನ್ನ ಸಮನ್ವಿತಾಃ ॥ ೨೪ ॥

ಭಕ್ತಾಃ ಕುಮುದಸಂಕಾಶಾ ಮುದ್ಗದಾಳೀವಿಮಿಶ್ರಿತಾಃ ।
ಸುಗಂಧೇನ ಸಮಾಯುಕ್ತಾ ಹ್ಯತ್ಯಂತಪ್ರೀತಿದಾಯಕಾಃ ॥ ೨೫ ॥

ಓದನೋ ದಧಿನಾ ಯುಕ್ತಃ ಕರ್ಪೂರೇಣ ಸಮನ್ವಿತಃ ।
ಸ್ವಾದುಪಾಕಕರೈಸ್ಸೃಷ್ಟಃ ಪಾತ್ರೇ ಮುಕ್ತಃ ಪ್ರವೇಶಕೈಃ ॥ ೨೬ ॥

ತತ್ರ ಕೇಚಿದ್ದ್ವಿಜಾಃ ಪಾತ್ರೇ ಪತಿತಂ ವೀಕ್ಷ್ಯ ಪಾಯಸಂ ।
ಪರಸ್ಪರಂ ತೇ ಪ್ರತ್ಯೂಚುಃ ಕಿಮಿದಂ ದೃಶ್ಯತೇ ದೃಶಾ ॥ ೨೭ ॥

ಕಿಂ ಚಂದ್ರಬಿಂಬಂ ನಭಸಃ ಪತಿತಂ ತಮಸೋ ಭಯಾತ್ ।
ಅಮೃತಂ ಸುಭವತ್ಯತ್ರ ಮೃತ್ಯುನಾಶಕಮದ್ಭುತಂ ॥ ೨೮ ॥

ತಚ್ಛ್ರುತ್ವಾ ರೋಷತಾಮ್ರಾಕ್ಷಃ ಪ್ರೋವಾಚಾನ್ಯೋ ದ್ವಿಜೋತ್ತಮಃ ।
ನ ಭವತ್ಯೇವ ಚಂದ್ರಸ್ಯ ಬಿಂಬಂ ತ್ವಮೃತವಿಪ್ಲುತಂ ॥ ೨೯ ॥

---

೨೪. ಫೇಣಿಗಳೂ, ಒಡೆಗಳೂ, ಮೆತ್ತಗೆ ಅನೇಕ ರಂಧ್ರಗಳಾಗಿ ನವುರಾಗಿವೆ. ಮಂಡಿಗೆಗಳು, ಚಕ್ಕುಲಿಗಳು, ನಯವಾಗಿಯೂ ಮಧುರವಾಗಿಯೂ ಇವೆ.

೨೫. ಅನ್ನವು ಬೆಳ್ಳಗಿದ್ದು ಅವನ್ನು ಕಡಲೆಬೇಳೆ ಮುಂತಾದುವುಗಳಿಂದ ಒಗ್ಗರಿಸಿ ಸುವಾಸನೆಯಾಗಿರುವಂತೆ ಮಾಡಿದ್ದಾರೆ.

೨೬. ಅನ್ನವನ್ನು ಮೊಸರಿನಿಂದ ಕೂಡಿಸಿ ಕಲಿಸಿದ್ದರು, ಅದಕ್ಕೆ ಪಚ್ಚಕರ್ಪೂರ ಹಾಕಿದ್ದರು. ಚೆನ್ನಾಗಿ ಅಡಿಗೆ ಬಲ್ಲವರು ಅಡಿಗೆಮಾಡಿ ಸಿದ್ಧಪಡಿಸಿದ್ದರು. ಅದನ್ನು ಅವರು ಪಾತ್ರೆಗಳಲ್ಲಿ ತುಂಬಿದ್ದರು.

೨೭-೨೮. ಅಲ್ಲಿ ಕೆಲವು ಜನ ಬ್ರಾಹ್ಮಣರು ಪಾತ್ರೆಯಿಂದ ಪಾತ್ರೆಗೆ ಸುರಿಯುತ್ತಿರುವ ಪಾಯಸವನ್ನು ನೋಡಿ ಇದೇನು, ನಮ್ಮ ಕಣ್ಣಿಗೆ ಕಾಣುತ್ತಿರುವುದು ಕತ್ತಲೆಯ ಭಯದಿಂದ ಚಂದ್ರಬಿಂಬವೇನಾದರೂ ಕರಗಿ ಪಾತ್ರೆಗೆ ಬೀಳುತ್ತಿದೆಯೋ ಏನೋ? ಅದರಲ್ಲಿ ಮೃತ್ಯುನಾಶಕವಾದ ಅಮೃತವು ಬೆರೆತವಾಗಿಯೂ ಇದೆ ಎಂದು ಮಾತಾಡಿಕೊಳ್ಳುತ್ತಿದ್ದರು.

೨೯. ಅದನ್ನು ಕೇಳಿ ಮತ್ತೊಬ್ಬ ಬ್ರಾಹ್ಮಣನು ಕೋಪಗೊಂಡು ಇದು ಚಂದ್ರಬಿಂಬವೂ ಅಲ್ಲ ಅಮೃತದಿಂದ ಕೂಡಿಯೂ ಇಲ್ಲ.

ಏಕನಿಂಡೋರ್ವರಪುಸ್ತ್ವೇತದ್ದೃಶ್ಯತೇ ಸದೃಶಂ ಕಥಂ ।
ಬ್ರಾಹ್ಮಣಾನಾಂ ಸಹಸ್ರಸ್ಯ ಪಾತ್ರೇ ಪಾತ್ರೇ ಪೃಥಕ್ಪೃಥಕ್ ॥ ೩೦ ॥

ತತೋ ಜಾನೀಹಿ ಕುಮುದಂ ಕರ್ಪೂರಂ ವಾ ಭವಿಷ್ಯತಿ ।
ಮಾ ಜಾನೀಹಿ ಮೃಗಾಂಕಸ್ಯ ಬಿಂಬಂ ಶುಭ್ರಶ್ರಿಯಾನ್ವಿತಂ ॥ ೩೧ ॥

ತಾವದನ್ಯೋ ರುಷಾಕ್ರಾಂತೋ ವಿಧುನ್ವನ್ಮಸ್ತಕಂ ತದಾ ।
ನ ಜಾನಂತಿ ದ್ವಿಜಾ ಮೂಢಾಃ ಸ್ವಾದುಜ್ಞಾನವಿಚಕ್ಷಣಾಃ ॥ ೩೨ ॥

ಇದಂ ತು ಕ್ಷೀರಕಂದಸ್ಯ ರಸೇನ ಪರಿಪಾಚಿತಂ ।
ಜಾನೀಹಿ ಶತಪತ್ರಸ್ಯ ಪುಷ್ಪಾಣಿ ಮಧುರಾಣಿ ಚ ॥ ೩೩ ॥

ಏವಂ ಪರಸ್ಪರಂ ವಿಪ್ರಾಃ ಕಂದಮೂಲಫಲಾಶಿನಃ ।
ತರ್ಕಯಂತಿ ಮುನೇ ಪ್ರೀತಾ ರಸಜ್ಞಾನೇಽತಿಲೋಲುಪಾಃ ॥ ೩೪ ॥

ತಾವದನ್ಯೋ ದ್ವಿಜಃ ಪ್ರಾಹ ಕ್ಷತ್ರಿಯಾಣಾಂ ವರಂ ಜನುಃ ।
ಭೋಕ್ಷ್ಯಂತೇ ತಾದೃಶಂ ತ್ವನ್ನಂ ಮಹಾಪುಣ್ಯೈರುಪಸ್ಕೃತಂ ॥ ೩೫ ॥

---

೩೦. ಸಾವಿರಾರು ಪಾತ್ರೆಗಳಲ್ಲಿ ಬೇರೆಬೇರೆಯಾಗಿ ಚಂದ್ರನ ಒಂದು ಬಿಂಬವು ಹೇಗೆ ಕಾಣಲು ಸಾಧ್ಯವು ?

೩೧. ಆದ್ದರಿಂದ ಇದು ಅನೇಕ ಕುಮುದಗಳಾಗಿರಬಹುದು. ಅಲ್ಲವಿದ್ದರೆ ಪಚ್ಚಕರ್ಪೂರವಿರಬಹುದು ಅಂತು ಚಂದ್ರಬಿಂಬ ಬೇರೆ ಅಲ್ಲ.

೩೨. ಅಷ್ಟರೊಳಗೆ ಮತ್ತೊಬ್ಬ ಬ್ರಾಹ್ಮಣನು ತಲೆಯನ್ನು ಅಲ್ಲಾಡಿಸುತ್ತಾ ಬ್ರಾಹ್ಮಣರಿಗೆ ಇದೆಲ್ಲಾ ಏನು ಗೊತ್ತು! ರುಚಿಯನ್ನು ಮಾತ್ರ ಬಲ್ಲರು.

೩೩. ಇದು ಶತಪತ್ರವೆಂಬ ಕಮಲದ ಹೂ. ಕ್ಷೀರಕಂದದ ರಸದಿಂದ ಬೇಯಿಸಿದ್ದಾರೆ ಗೊತ್ತಾಯಿತೆ? ಎಂದನು.

೩೪. ಗೆಡ್ಡೆಗೆಣಸು ತಿಂದುಕೊಂಡಿರುತ್ತಿದ್ದ ಬ್ರಾಹ್ಮಣರು ಈ ರೀತಿ ರಸಜ್ಞಾನದಲ್ಲಿ ಲೋಲುಪರಾಗಿ ವಾದವಿವಾದಗಳನ್ನು ನಡೆಸುತ್ತಿದ್ದರು.

೩೫. ಅಷ್ಟರೊಳಗೆ ಮತ್ತೊಬ್ಬ ಬ್ರಾಹ್ಮಣನು ಕ್ಷತ್ರಿಯರ ಜನ್ಮವೇ ಸಾರ್ಥಕವಾದುದು. ಮಹಾಪುಣ್ಯದಿಂದ ಒದಗಿಸಿದ ಅನ್ನವನ್ನು ಊಟಮಾಡುತ್ತಾರೆ. ಎಂದನು.

ತದಾ ತಂ ಪ್ರಾಬ್ರವೀದ್ವಿಪ್ರೋ ದತ್ತಸ್ಯ ಫಲಮೀದೃಶಂ ।
ಯೇ ದದತ್ಯಗ್ರಜನ್ಮೇಭ್ಯಃ ಪ್ರಾಪ್ನುವಂತಿ ತ ಈಪ್ಸಿತಂ ॥ ೩೬ ॥

ಯೈರರ್ಚಿತೋ ನೈವ ಹರಿರ್ನೈವೇದ್ಯೈರ್ವಿವಿಧೈರ್ಮುಹುಃ ।
ತೇಷಾಮೇತಾದೃಶಂ ಭೋಜ್ಯಂ ನ ಭವೇದಕ್ಷಿಗೋಚರಂ ॥ ೩೭ ॥

ಯೈರ್ನರೈರಗ್ರಜನ್ಮಾನೋ ಭೋಜಿತಾ ವಿವಿಧೈ ರಸೈಃ ।
ಭುಂಜತೇ ತೇ ಸ್ವಾದುರಸಂ ಪಾಪಿನಾಂ ಚಕ್ಷುರುಜ್ಝಿತಂ ॥ ೩೮ ॥

ಏವಂ ವಿಧೈ ರಸೈರ್ಮೃಷ್ಟೈರ್ಭೋಜಿತಾ ದ್ವಿಜಸತ್ತಮಾಃ ।
ಮಂಟಪೇ ವಿಪಠಂತ್ಯೇತೇ ಶಬ್ದಬ್ರಹ್ಮವಿಚಕ್ಷಣಾಃ ॥ ೩೯ ॥

ನೃತ್ಯಂತ್ಯೇಕೇ ಹಸಂತ್ಯೇಕೇ ದದತ್ಯೇಕೇ ಮಹಾರ್ಥಿನಾಂ ।
ಉತ್ಸವೋ ಬಹುರುದ್ಭಾತಿ ತತ್ರ ಶತ್ರುಘ್ನ ಆಗಮತ್ ॥ ೪೦ ॥

ರಾಮಶ್ಶತ್ರುಘ್ನಮಾಯಾಂತಂ ಪುಷ್ಕಳೇನ ಸಮನ್ವಿತಂ ।
ನಿರೀಕ್ಷ್ಯ ಮುದಮುದ್ಭೂತಾಂ ರಕ್ಷಿತುಂ ನಾಶಕತ್ತದಾ ॥ ೪೧ ॥

---

೩೬. ಆಗ ಮತ್ತೊಬ್ಬ ಬ್ರಾಹ್ಮಣನು ಹಿಂದೆ ಕೊಟ್ಟುದರ ಫಲವಷ್ಟು ಇದು. ಯಾರು ಬ್ರಾಹ್ಮಣರಿಗೆ ದಾನಮಾಡುತ್ತಾರೆಯೋ ಅವರು ಇಂತಹದನ್ನು ಹೊಂದುತ್ತಾರೆ.

೩೭. ಯಾರು ನೈವೇದ್ಯ ಮುಂತಾದುವುಗಳಿಂದ ಹರಿಯನ್ನು ಪೂಜಿಸುವುದಿಲ್ಲವೋ ಅವರಿಗೆ ಈ ರೀತಿಯಾದ ಅನ್ನವು ಕಣ್ಣಿಗೂ ಕಾಣಿಸುವುದಿಲ್ಲ.

೩೮. ಯಾರು ಬ್ರಾಹ್ಮಣರಿಗೆ ನಾನಾಬಗೆಯ ಭೋಜನಗಳನ್ನು ಮಾಡಿಸುತ್ತಾರೆಯೋ ಅವರು ಪಾಪಿಗಳಿಗೆ ದುರ್ಲಭವಾದ ಇಂತಹ ಊಟವನ್ನು ಮಾಡುತ್ತಾರೆ.

೩೯. ಈರೀತಿಯಾದ ಮೃಷ್ಟಾನ್ನವನ್ನುಂಡ ಬ್ರಾಹ್ಮಣರು ಮಂಟಪಗಳಲ್ಲಿದ್ದುಕೊಂಡು ವಾದವಿವಾದವನ್ನು ಮಾಡುತ್ತಾರೆ.

೪೦. ಕೆಲವರು ಕುಣಿಯುತ್ತಾರೆ, ಕೆಲವರು ನಗುತ್ತಾರೆ, ಕೆಲವರು ದಾನ ಮಾಡುತ್ತಾರೆ, ಈರೀತಿ ಸಂತೋಷದಿಂದಿರುವಲ್ಲಿಗೆ ಶತ್ರುಘ್ನನು ಬಂದನು.

೪೧. ಪುಷ್ಕಳನೊಡನೆ ಬರುತ್ತಿರುವ ಶತ್ರುಘ್ನನನ್ನು ನೋಡಿ ಉಂಟಾದ ಸಂತೋಷವನ್ನು ಮುಚ್ಚಿಕೊಳ್ಳಲು ರಾಮನಿಗೆ ಸಾಧ್ಯವಾಗಲಿಲ್ಲ.

**ಯಾವದುತ್ತಿಷ್ಠತೇ ರಾಮೋ ಭ್ರಾತರಂ ಹಯಪಾಲಕಂ ।**
**ತಾವದ್ರಾಮಪದೇ ಲಗ್ನಃ ಶತ್ರುಘ್ನೋ ಭ್ರಾತೃವತ್ಸಲಃ ॥ ೪೨ ॥**

**ಪಾದಪ್ರಪತಿತಂ ವೀಕ್ಷ್ಯ ಭ್ರಾತರಂ ವಿನಯಾನ್ವಿತಂ ।**
**ಪರಿರೇಭೇ ದೃಢಂ ಪ್ರೀತಃ ಕ್ಷತಸಂಶೋಭಿತಾಂಗಕಂ ॥ ೪೩ ॥**

**ಅಶ್ರೂಣಿ ಬಹುಧಾ ಮುಂಚನ್ ಹರ್ಷಾಚ್ಛಿರಸಿ ರಾಘವಃ ।**
**ಅತ್ಯಂತಂ ಪರಮಾನಂದಂ ಮುದಂ ವಚನದೂರಗಾಂ ॥ ೪೪ ॥**

**ಪುಷ್ಕಲಂ ಸ್ವೀಯಪದಯೋರ್ನಮ್ರಂ ವಿನಯವಿಹ್ವಲಂ ।**
**ಸುದೃಢಂ ಭುಜಯೋರ್ಮಧ್ಯೇ ವಿನೀಯಾಪೀಡಯದ್ಭೃಶಂ ॥ ೪೫ ॥**

**ಹನುಮಂತಂ ತಥಾ ವೀರಂ ಸುಗ್ರೀವಂ ಚಾಂಗದಂ ತಥಾ ।**
**ಲಕ್ಷ್ಮೀನಿಧಿಂ ಜನಕಜಂ ಪ್ರತಾಪಾಗ್ರ್ಯಂ ರಿಪುಂತಪಂ ॥ ೪೬ ॥**

**ಸುಬಾಹುಂ ಸುಮದಂ ವೀರಂ ವಿಮಲಂ ನೀಲರತ್ನಕಂ ।**
**ಸತ್ಯವಂತಂ ವೀರಮಣಿಂ ಸುರಥಂ ರಾಮಸೇವಕಂ ॥ ೪೭ ॥**

---

೪೨. ರಾಮನು ಕುದುರೆಯ ರಕ್ಷಕನಾದ ಶತ್ರುಘ್ನನನ್ನು ಎದ್ದು ಸಂಭಾಷಿಸು ವಷ್ಟರಲ್ಲಿಯೇ ರಾಮನ ಪಾದಕ್ಕೆ ಶತ್ರುಘ್ನನು ನಮಸ್ಕರಿಸಿದನು.

೪೩. ಶತ್ರುಘ್ನನು ಪಾದಕ್ಕೆ ಬಿದ್ದು ವಿನಯದಿಂದಿರುವುದನ್ನು ನೋಡಿ ಸಂತೋಷದಿಂದ ಆಲಿಂಗಿಸಿಕೊಂಡನು.

೪೪. ಸಂತೋಷದಿಂದ ಕಣ್ಣೀರನ್ನು ತಲೆಯ ಮೇಲೆ ಸುರಿಸುತ್ತಾ ಬಾಯಲ್ಲಿ ಹೇಳಲಸಾಧ್ಯವಾದ ಸಂತೋಷವನ್ನು ಹೊಂದಿದನು.

೪೫. ಪಾದಗಳಲ್ಲಿ ನಮಸ್ಕರಿಸಿ ನಮ್ರನಾಗಿರುವ ಪುಷ್ಕಳನನ್ನು ಭುಜಗಳಿಂದ ಅಪ್ಪಿಕೊಂಡನು.

೪೬-೪೭. ಹನುಮಂತ, ಸುಗ್ರೀವ, ಅಂಗದ, ಲಕ್ಷ್ಮೀನಿಧಿ, ಪ್ರತಾಪಾಗ್ರ್ಯ, ರಿಪುಂತಪ, ಸುಬಾಹು, ಸುಮದ, ವಿಮಲ, ನೀಲರತ್ನ, ಸತ್ಯವಂತ, ವೀರಮಣಿ,

ಅನ್ಯಾನಪಿಮಹಾಭಾಗಾನ್ರಘುನಾಥಃ ಸ್ವಯಂ ತತಃ ।
ಪರಿರೇಭೇ ದೃಢಂ ಸ್ನಿಗ್ಧಾನ್ಪಾದಯೋಃ ಪ್ರಣತಾನ್ಸ್ವಕಾನ್ ॥ ೪೮ ॥

ಸುಮತಿಶ್ಚೈರಘೋರ್ನಾಥಂ ಭಕ್ತಾನುಗ್ರಹಕಾರಕಂ ।
ಪರಿರಭ್ಯ ದೃಢಂ ಪ್ರೀತಃ ಸಮ್ಮುಖೇತಿಷ್ಠದನ್ತಿಕೇ ॥ ೪೯ ॥

ತದಾ ರಾಮೋ ನಿಜಾಮಾತ್ಯಂ ವೀಕ್ಷ್ಯ ಸನ್ನಿಧಿಮಾಗತಂ ।
ಉವಾಚ ಪರಮಪ್ರೀತ್ಯಾ ಮಂತ್ರಿಣಂ ವದತಾಂ ವರಃ ॥ ೫೦ ॥

॥ ಶ್ರೀರಾಮ ಉವಾಚ ॥

ಸುಮತೇ ಮಂತ್ರಿಣಾಂ ಶ್ರೇಷ್ಠ ಶಂಸ ಮೇ ವಾಗ್ಮಿನಾಂ ವರ ।
ಕ ಏತೇ ಭೂಮಿಪಾಸ್ಸರ್ವೇ ಕಥಮತ್ರ ಸಮಾಗತಾಃ ॥ ೫೧ ॥

ಕುತ್ರ ಕುತ್ರ ಹಯಃ ಪ್ರಾಪ್ತಃ ಕೇನ ಕೇನ ನಿಯಂತ್ರಿತಃ ।
ಕಥಂ ವೈ ಮೋಚಿತೋ ಭ್ರಾತ್ರಾ ಮಹಾಬಲಸುಶಾಲಿನಾ ॥ ೫೨ ॥

॥ ಶೇಷ ಉವಾಚ ॥

ಇತ್ಯುಕ್ತೋ ಮಂತ್ರಿಣಾಂ ಶ್ರೇಷ್ಠಃ ಸುಮತಿಃ ಪ್ರಾಹ ರಾಘವಂ ।
ಮೇಘಗಂಭೀರಯಾ ವಾಣ್ಯಾ ನಾದಯಂಸ್ತಂ ಮಹಾಬಲಂ ॥ ೫೩ ॥

---

ಸುರಥ ಇವರನ್ನೂ ಇನ್ನೂ ಅನೇಕರನ್ನೂ ರಘುನಾಥನು ತಾನಾಗಿಯೇ ಪ್ರೀತಿಸಿ ಆಲಿಂಗಿಸಿಕೊಂಡನು, ಅವರೂ ನಮಸ್ಕರಿಸಿದರು.

೪೯. ಸುಮತಿಯು ಆ ಭಕ್ತವತ್ಸಲನಾದ ರಾಮನನ್ನು ಚೆನ್ನಾಗಿ ಆಲಿಂಗಿಸಿಕೊಂಡು ಹತ್ತಿರದಲ್ಲಿಯೇ ಕುಳಿತನು.

೫೦. ಮಂತ್ರಿಯು ಹತ್ತಿರ ಬಂದುದನ್ನು ನೋಡಿ ಪ್ರೀತಿಯಿಂದ ಇಂತೆಂದನು.

೫೧. ಶ್ರೀರಾಮನು ಹೇಳಿದನು :—ಎಲೈ ಮಂತ್ರಿಶ್ರೇಷ್ಠನಾದ ಸುಮತಿಯೇ ಈ ರಾಜರೆಲ್ಲ ಯಾರು ? ಇಲ್ಲಿಗೇಕೆ ಬಂದರು.

೫೨. ಕುದುರೆ ಎಲ್ಲೆಲ್ಲಿಗೆ ಹೋಗಿದ್ದಿತು ? ಯಾರಾರು ಕಟ್ಟಿದರು ? ಶತ್ರುಘ್ನನು ಹೇಗೆ ಬಿಡಿಸಿದನು ?

೫೩. ಹೀಗೆ ಕೇಳಲು, ರಾಘವನಿಗೆ ಮೇಘದ ಸದ್ದಿನ ಸದ್ದಿನಂತೆ ಧ್ವನಿ ಮಾಡುತ್ತಾ ಸುಮತಿಯು ಹೇಳಿದನು.

॥ ಸುಮತಿರುವಾಚ ॥

ಸರ್ವಜ್ಞಸ್ಯ ಪುರಸ್ತೇಽದ್ಯ ಮಯಾ ಕಥಮುದೀರ್ಯತೇ ।
ಮಾಂ ಲೋಕರೀತ್ಯಾ ಪೃಚ್ಛಸಿ ಸರ್ವಂ ತ್ವಂ ವೇತ್ಸಿ ಸರ್ವದೃಕ್ ॥ ೫೪ ॥

ತಥಾಪಿ ತವ ನಿರ್ದೇಶಂ ಶಿರಸ್ಯಾಧಾಯ ಸರ್ವದಾ ।
ಬ್ರವೀಮಿ ತಚ್ಛೃಣುಷ್ವಾದ್ಯ ಸರ್ವರಾಜಶಿರೋಮಣೇ ॥ ೫೫ ॥

ತ್ವತ್ಪ್ರಸಾದಾದಹೋ ಸ್ವಾಮಿನ್ಸರ್ವತ್ರ ಜಗತೀತಲೇ ।
ಪರಿಬಭ್ರಾಮ ತೇ ವಾಹೋ ಭಾಲಮಿತ್ರಸುಶೋಭಿತಃ ॥ ೫೬ ॥

ನ ಕಶ್ಚಿತ್ತಂ ನಿಜಗ್ರಾಹ ಸ್ವಮಾನಬಲದರ್ಪಿತಃ ।
ಸ್ವಂ ಸ್ವಂ ರಾಜ್ಯಂ ಸಮರ್ಪ್ಯಾಥ ಪ್ರಣೇಮುಸ್ತೇ ಪದಾಂಬುಜಂ ॥ ೫೭ ॥

ಕೋ ವಾ ರಾವಣದೈತ್ಯೇಂದ್ರನಿಹಂತುರ್ವಾಜಿಸತ್ತಮಂ ।
ಗೃಹ್ಣಾತಿ ವಿಜಯಾಕಾಂಕ್ಷೀ ಜರಾಮರಣವರ್ಜಿತಃ ॥ ೫೮ ॥

---

೫೪. ಸುಮತಿಯು ಹೇಳಿದನು :—ನೀನು ಸರ್ವಜ್ಞನು, ನಿನ್ನ ಎದುರಿಗೆ ಏನೆಂದು ಹೇಳಲಿ ? ನೀನು ನನ್ನನ್ನು ಲೋಕರೀತಿಯಿಂದ ಕೇಳುತ್ತೀಯೆ, ನೀನೆಲ್ಲ ವನ್ನೂ ಬಲ್ಲೆ.

೫೫. ಆದರೂ ನಿನ್ನ ಅಪ್ಪಣೆಯನ್ನು ಶಿರಸಾವಹಿಸಿ ಹೇಳುತ್ತೇನೆ ಕೇಳು.

೫೬. ಕುದುರೆಯು ಹಣೆಯಲ್ಲಿ ಪಟ್ಟವನ್ನು ಕಟ್ಟಿಕೊಂಡು ನಿನ್ನ ಅನುಗ್ರಹ ದಿಂದ ಎಲ್ಲಾ ಕಡೆಯಲ್ಲಿಯೂ ಸುತ್ತಿತು.

೫೭. ಯಾರೂ ತಮ್ಮ ಬಲದಿಂದ ಗರ್ವಿತರಾಗಿ ಕಟ್ಟಲಿಲ್ಲ. ರಾಜರೆಲ್ಲರೂ ತಮ್ಮ ತಮ್ಮ ರಾಜ್ಯವನ್ನು ಸಮರ್ಪಿಸಿ ನಮಸ್ಕರಿಸಿದರು.

೫೮. ರಾವಣಾಂತಕನಾದ ನಿನ್ನ ಕುದುರೆಯನ್ನು ದೇವತೆಯಲ್ಲದೆ ಮತ್ತಾರು ಕಟ್ಟಿಯಾರು ?

ಅಹಿಚ್ಛತ್ರಾಂ ಗತಸ್ತಾವತ್ತವ ವಾಜೀ ಮನೋಹರಃ ।
ತದ್ರಾಜಾ ಸುಮದಶ್ಶ್ರುತ್ವಾ ಹಯಂ ಪ್ರಾಪ್ತಂ ತವ ಪ್ರಭೋ ॥ ೫೯ ॥

ಸಪುತ್ರಸ್ಸಬಲಸ್ಸರ್ವಸ್ಸೈನ್ಯೇನ ಬಲಿನಾ ವೃತಃ ।
ಸರ್ವಂ ಸಮರ್ಪಯಾಮಾಸ ರಾಜ್ಯಂ ನಿಹತಕಂಟಕಂ ॥ ೬೦ ॥

ಯೋ ರಾಜಾ ಜಗತಾಂ ನೇತ್ರೀಂ ಮಾತರಂ ಜಗದಂಬಿಕಾಂ ।
ಪ್ರಸಾದ್ಯ ಚಿರಮಾಯುಷ್ಮಾಂಲ್ಲೇಭೇ ರಾಜ್ಯಮಕಂಟಕಂ ॥ ೬೧ ॥

ಏಷ ತ್ವಾಂ ತು ಪ್ರಣಮತಿ ಸುಮದಃ ಪ್ರಭುಸೇವಿತಂ ।
ತಂ ಗೃಹಾಣ ಕೃಪಾದೃಷ್ಟ್ಯಾ ಚಿರಾದ್ದರ್ಶನಕಾಂಕ್ಷಕಂ ॥ ೬೨ ॥

ತತಸ್ಸುಬಾಹುಭೂಪಸ್ಯ ನಗರೇ ಬಲಪೂರಿತೇ ।
ದಮನಸ್ತಸ್ಯ ವೈ ಪುತ್ರಃ ಪ್ರಜಗ್ರಾಹ ಹಯೋತ್ತಮಂ ॥ ೬೩ ॥

ತೇನ ಸಾಕಂ ಮಹದ್ಯುದ್ಧಂ ಬಭೂವ ದಮನೇನ ಚ ।
ಪುಷ್ಕಳೋ ಜಯಮಾಪೇದೇ ಸಂಮೂರ್ಛ್ಯ ಸುಭುಜಾತ್ಮಜಂ ॥ ೬೪ ॥

ತತಸ್ಸುಬಾಹುಸ್ಸಂಕ್ರುದ್ಧೋ ರಣೇ ಪವನಜಂ ಬಲಾತ್ ।
ಯುಯುಧೇ ತವ ಪಾದಾಬ್ಜಸೇವಕಂ ಬಲಿನಾಂ ವರಂ ॥ ೬೫ ॥

---

೫೯-೬೦. ನಿನ್ನ ಕುದುರೆಯು ಅಹಿಚ್ಛತ್ರಪುರಕ್ಕೆ ಹೋಗಲು ಅಲ್ಲಿನ ರಾಜನಾದ ಸುಮದನು ಪುತ್ರ ಸೈನ್ಯ ರಾಜ್ಯಗಳನ್ನು ಸಮರ್ಪಿಸಿದನು.

೬೧-೬೨. ಈ ಸುಮದನು ಬಹು ದಿನಗಳಿಂದ ಪಾರ್ವತಿಯನ್ನು ಪ್ರಸನ್ನ ಮಾಡಿಕೊಂಡು ರಾಜ್ಯವನ್ನು ಸುಖವಾಗಿ ಆಳುತ್ತಿದ್ದನು. ಆ ಸುಮದನು ನಿನ್ನನ್ನು ನಮಸ್ಕರಿಸುತ್ತಾನೆ. ಕೃಪೆಯಿಂದ ಸ್ವೀಕರಿಸು, ಬಹು ದಿನದಿಂದ ನಿನ್ನ ದರ್ಶನಾಕಾಂಕ್ಷಿಯಾಗಿದ್ದಾನೆ.

೬೩-೬೪. ಅನಂತರ ಸುಬಾಹುವಿನ ಪಟ್ಟಣಕ್ಕೆ ಹೋಯಿತು. ಅಲ್ಲಿ ಅವನ ಮಗನಾದ ದಮನನು ಕಟ್ಟಿದನು. ಅವನೊಡನೆ ಪುಷ್ಕಳನು ಯುದ್ಧಮಾಡಿ ಅವನನ್ನು ಮೂರ್ಛೆಕೆಡವಿ ಜಯಹೊಂದಿದನು.

೬೫. ಅನಂತರ ಸುಬಾಹುವು ಹನುಮಂತನೊಡನೆ ಯುದ್ಧಮಾಡಿದನು.

ತಸ್ಯ ಪಾದಾಹತೋ ಜ್ಞಾನಂ ಪ್ರಾಪ್ಯ ಶಾಪತಿರಸ್ಕೃತಂ ।
ತುಭ್ಯಂ ಸಮರ್ಪ್ಯ ಸಕಲಂ ವಾಜಿನಃ ಪಾಲಕೋಽಭವತ್ ॥ ೬೬ ॥

ಏಷ ತ್ವಾಂ ಸುಭುಜೋ ರಾಜಾ ಪ್ರಣಮತ್ಯುನ್ನತಾಂಗಕಃ ।
ಕೃಪಾದೃಷ್ಟ್ಯಾಭಿಷಿಂಚ ತ್ವಂ ಸುಬಾಹುಂ ರಣಕೋವಿದಂ ॥ ೬೭ ॥

ತತೋ ಮುಕ್ತೋ ಹಯೋ ರೇವಾಹ್ರದೇ ಸ ನಿಮಮಜ್ಜ ಹ ।
ತತ್ರ ಪ್ರಾಪ್ತಂ ಮೋಹನಾಸ್ತ್ರಂ ಶತ್ರುಘ್ನೇನ ಬಲೀಯಸಾ ॥ ೬೮ ॥

ತತೋ ದೇವಪುರೇ ಪ್ರಾಗಾಚ್ಛಿವವಾಸವಿಭೂಷಿತೇ ।
ತತ್ರತ್ಯಂ ತು ವಿಜಾನಾಸಿ ಯತಸ್ತ್ವಂ ತತ್ರ ಚಾಗತಃ ॥ ೬೯ ॥

ವಿದ್ಯುನ್ಮಾಲೀ ಹತೋ ದೈತ್ಯಃ ಸತ್ಯವಾನ್ಸಂಗತಸ್ತತಃ ।
ಸುರಥೇನ ಸಮಂ ಯುದ್ಧಂ ಜಾನಾಸಿ ತ್ವಂ ಮಹಾಮತೇ ॥ ೭೦ ॥

ತತಃ ಕುಂಡಲಕಾನ್ಮುಕ್ತೋ ಹಯೋ ಬಭ್ರಾಮ ಸರ್ವತಃ ।
ನ ಕಶ್ಚಿತ್ತಂ ನಿಜಗ್ರಾಹ ಸ್ವವೀರ್ಯಬಲದರ್ಪಿತಃ ॥ ೭೧ ॥

---

೬೬. ಆ ಹನುಮನ ಪಾದದಿಂದ ಒಡೆತ ತಿಂದು ಜ್ಞಾನವು ಸರಿಯಾಗಿ ಬಂದು ಎಲ್ಲವನ್ನೂ ನಿನಗೆ ಸಮರ್ಪಿಸಿ ಕುದುರೆಯನ್ನು ಕಾಯುತ್ತಾ ಹಿಂದೆ ಬಂದನು.

೬೭. ಈ ಸುಭುಜನೆಂಬುವನು ನಿನ್ನನ್ನು ನಮಸ್ಕರಿಸುತ್ತಾನೆ. ಈ ಸುಬಾಹು ವನ್ನು ಕೃಪೆಯಿಂದ ನೋಡು.

೬೮. ಕುದುರೆಯು ಅಲ್ಲಿಂದ ಹೊರಟು ರೇವಾನದಿಯ ನೀರಿನಲ್ಲಿ ಮುಳು ಗಿತು. ಅಲ್ಲಿ ಬಲಿಷ್ಠನಾದ ಶತ್ರುಘ್ನನಿಂದ ಮೋಹನಾಸ್ತ್ರವು ಹೊಂದಲ್ಪಟ್ಟಿತ್ತು.

೬೯. ಅನಂತರ ಶಿವನೇ ವಾಸವಾಗಿರುವ ದೇವಪುರಕ್ಕೆ ಹೋಯಿತು. ಅಲ್ಲಿಗೆ ನೀನು ಬಂದದ್ದರಿಂದ ಅದೆಲ್ಲವೂ ನಿನಗೇ ಗೊತ್ತು.

೭೦. ವಿದ್ಯುನ್ಮಾಲಿಯೆಂಬ ರಾಕ್ಷಸನನ್ನು ಕೊಂದು ಸತ್ಯವಂತನೊಡನೆ ಸೇರಿ ದೆವು. ಅನಂತರ ಸುರಥನೊಡನೆ ಯುದ್ಧ ನಡೆಯಿತು. ಅಲ್ಲಿಗೆ ನೀನೇ ಬಂದಿದ್ದೆ.

೭೧-೭೨. ಕುಂಡಲಕ ನಗರದಿಂದ ಹೊರಟ ಕುದುರೆಯು ಎಲ್ಲಾ ಕಡೆಯ ಲ್ಲಿಯೂ ಸುತ್ತಿತು, ಒಬ್ಬನೂ ಹಿಡಿಯಲಿಲ್ಲ. ಹಾಗೆಯೇ ವಾಲ್ಮೀಕಿಯ ಆಶ್ರಮಕ್ಕೆ ಬರಲು ಅಲ್ಲಿ ನಡೆದ ಆಶ್ಚರ್ಯವನ್ನು ಕೇಳು.

ವಾಲ್ಮೀಕೇರಾಶ್ರಮೋ ರಮ್ಯೋ ಹಯಃ ಪ್ರಾಪ್ತೋಮನೋರಮಃ ।
ತತ್ರ ಯತ್ಕೌತುಕಂ ಜಾತಂ ತಚ್ಛೃಣುಷ್ವ ನರೋತ್ತಮ ॥ ೭೨ ॥

ತತ್ರಾರ್ಭಕಸ್ತವ ಸಾರೂಪ್ಯಂ ಬಿಭ್ರತ್ ಷೋಡಶವಾರ್ಷಿಕಃ ।
ಜಗ್ರಾಹ ವೀಕ್ಷ್ಯ ಪತ್ರಾಂಕಂ ವಾಜಿನಂ ಬಲಿಸತ್ತಮಃ ॥ ೭೩ ॥

ತತ್ರ ಕಾಲಜಿತಾ ಯುದ್ಧಂ ಮಹಜ್ಜಾತಂ ನರೋತ್ತಮ ।
ನಿಹತಸ್ತೇನ ವೀರೇಣ ಖಡ್ಗೇನ ಶಿತಧಾರಿಣಾ ॥ ೭೪ ॥

ಅನೇಕೇ ನಿಹತಾಸ್ಸಂಖ್ಯೇ ಪುಷ್ಕಲಾದ್ಯಾ ಮಹಾಬಲಾಃ ।
ಮೂರ್ಛಿತಂ ಚಾಪಿ ಶತ್ರುಘ್ನಂ ಚಕ್ರೇ ವೀರಶಿರೋಮಣಿಃ ॥ ೭೫ ॥

ತದಾ ರಾಜಾ ಮಹದ್ದುಃಖಂ ವಿಚಾರ್ಯ ಹೃದಿ ಸಂಯುಗೆ ।
ಕೋಪೇನ ಮೂರ್ಛಿತಂ ಚಕ್ರೇ ವೀರೋ ಹಿ ಬಲಿನಾಂ ವರಂ ॥ ೭೬ ॥

ಸ ಯಾವನ್ಮೂರ್ಛಿತೋ ರಾಜ್ಞಾ ತಾವದನ್ಯಸ್ಸಮಾಗತಃ ।
ತೇನೈತೇನ ಚ ಸಂಜೀವ್ಯ ನಾಶಿತಂ ಕಟಕಂ ತವ ॥ ೭೭ ॥

---

೭೩. ಅಲ್ಲಿ ಒಬ್ಬ ಬಾಲನು ನಿನ್ನಂತೆಯೇ ಇದ್ದನು. ಅವನಿಗೆ ಹದಿನಾರು ವರ್ಷ. ಹಣೆಯ ಪಟ್ಟವನ್ನಿರುವುದನ್ನು ಓದಿ ಕುದುರೆಯನ್ನು ಹಿಡಿದನು.

೭೪. ಅಲ್ಲಿ ಕಾಲಜಿತ್ತು ಮಹಾಯುದ್ಧವನ್ನು ಮಾಡಿದನು. ಆ ಶತ್ರು ವೀರನು ಇವನನ್ನು ಕೊಂದುಹಾಕಿದನು.

೭೫. ಪುಷ್ಕಳನೇ ಮುಂತಾದ ಅನೇಕ ವೀರರನ್ನು ಆ ವೀರನು ಕೊಂದು ಬಿಟ್ಟನು. ಶತ್ರುಘ್ನನನ್ನೂ ಕೂಡ ಮೂರ್ಛೆ ಕೆಡವಿದನು.

೭೬. ಆಗ ಶತ್ರುಘ್ನನು ಯೋಚನೆಮಾಡಿ ಆ ಹುಡುಗನನ್ನು ಯುದ್ಧದಲ್ಲಿ ಮೂರ್ಛಿತನನ್ನಾಗಿಮಾಡಿದನು.

೭೭. ಅವನು ಮೂರ್ಛೆ ಬಿದ್ದಮೇಲೆ ಮತ್ತೊಬ್ಬ ಹುಡುಗನು ಬಂದನು. ಅಷ್ಟರೊತ್ತಿಗೆ ಇವನು ಎಚ್ಚೆತ್ತನು. ಇಬ್ಬರೂ ಸೇರಿಕೊಂಡು ನಿನ್ನ ಸೈನ್ಯವನ್ನೆಲ್ಲಾ ನಾಶಮಾಡಿದರು.

ಸರ್ವೇಷಾಂ ಮೂರ್ಛಿತಾನಾಂ ತು ಶಸ್ತ್ರಾಣ್ಯಾಭರಣಾನಿ ಚ ।
ಗೃಹೀತ್ವಾ ವಾನರೌ ಬದ್ಧ್ವಾ ಜಗ್ಮತುಸ್ಸ್ವಾಶ್ರಮಂ ಪ್ರತಿ ॥ ೭೮ ॥

ಕೃಪಾಂ ಕೃತ್ವಾ ಪುನಸ್ತೇನ ದತ್ತೋಽಶ್ವೋ ಯಜ್ಞಿಯೋ ಮಹಾನ್ ।
ಜೀವನಂ ಪ್ರಾಪಿತಂ ಸರ್ವಂ ಕಟಕಂ ನಷ್ಟಜೀವಿತಂ ॥ ೭೯ ॥

ವಯಂ ನೀತ್ವಾ ತತೋ ವಾಹಂ ಪ್ರಾಪ್ತಾಸ್ತವ ಸಮೀಪಕೇ ।
ಏತದೇವ ಮಯಾ ಜ್ಞಾತಂ ತದುಕ್ತಂ ತೇ ಪುರೋ ವಚಃ ॥ ೮೦ ॥

ಇತಿ ಶ್ರೀಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧೇ
ಸು ಮ ತಿ ನಿ ವೇ ದ ನಂ ನಾ ಮ
ಪಂಚಷಷ್ಟಿತಮೋಽಧ್ಯಾಯಃ.

---

೭೮. ಅಲ್ಲಿ ಎಲ್ಲರನ್ನೂ ಮೂರ್ಛೆಗೆಡವಿ, ಅವರ ಆಭರಣಗಳನ್ನೂ, ಶಸ್ತ್ರಗಳನ್ನೂ ತೆಗೆದುಕೊಂಡು ಹನುಮ ಸುಗ್ರೀವ ಕಪಿಗಳನ್ನೂ ಕಟ್ಟಿ, ತಮ್ಮ ಆಶ್ರಮಕ್ಕೆ ಕೊಂಡುಹೋದರು.

೭೯. ಕೃಪೆಯನ್ನು ಮಾಡಿ ಆ ಹುಡುಗರು ಯಜ್ಞಾಶ್ವವನ್ನು ಹಿಂದಕ್ಕೆ ಕೊಟ್ಟರು. ಎಲ್ಲಾ ಸೈನ್ಯದವರಿಗೂ ಪ್ರಾಣವೂ ಬರುವಂತೆ ಮಾಡಿದರು.

೮೦. ಅನಂತರ ಕುದುರೆಯನ್ನು ತೆಗೆದುಕೊಂಡು ನಿನ್ನ ಬಳಿಗೆ ಬಂದೆವು. ಇಷ್ಟೇ ನನಗೆ ಗೊತ್ತಿರುವುದು, ಅಷ್ಟನ್ನು ನಿನ್ನೆದುರಿಗೆ ಹೇಳಿದ್ದೇನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಸುಮತಿ ನಿವೇದನವೆಂಬ
ಅರವತ್ತೈದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಟ್‌ಷಷ್ಟಿತಮೋಽಧ್ಯಾಯಃ

---

॥ ಶೇಷ ಉವಾಚ ॥

ಕಥಿತೌ ವೈ ಸುಮತಿನಾ ವಾಲ್ಮೀಕೇರಾಶ್ರಮೇ ಶಿಶೂ ।
ಪುತ್ರೌ ಸ್ವೀಯಾವಿತಿ ಜ್ಞಾತ್ವಾ ವಾಲ್ಮೀಕಿಂ ಪ್ರತಿ ಸಂಜಗೌ ॥ ೧ ॥

॥ ಶ್ರೀರಾಮ ಉವಾಚ ॥

ಕೌ ಶಿಶೂ ಮಮ ಸಾರೂಪ್ಯಧಾರಕೌ ಬಲಿನಾಂ ವರೌ ।
ಕಿಮರ್ಥಂ ತಿಷ್ಠತಸ್ತತ್ರ ಧನುರ್ವಿದ್ಯಾವಿಶಾರದೌ ॥ ೨ ॥

ಅಮಾತ್ಯಕಥಿತೌ ಶ್ರುತ್ವಾ ವಿಸ್ಮಯೋ ಮಮ ಜಾಯತೇ ।
ಯೌ ಶತ್ರುಘ್ನಂ ಹನೂಮಂತಂ ಲೀಲಯಾಂಗ ಬಬಂಧತುಃ ॥ ೩ ॥

---

## ಅರವತ್ತಾರನೆಯ ಅಧ್ಯಾಯವು.

೧. ಶೇಷನು ಹೇಳಿದನು :—ವಾಲ್ಮೀಕಿಯ ಆಶ್ರಮದಲ್ಲಿ ಇಬ್ಬರು ಕುಮಾರರಾದ ಮಕ್ಕಳಿದ್ದರೆಂದ ಕೂಡಲೇ ಅವರು ತನ್ನ ಮಕ್ಕಳೆಂದೇ ತಿಳಿದು ವಾಲ್ಮೀಕಿಯನ್ನು ಕುರಿತೆಂದನು.

೨. ಶ್ರೀರಾಮನು ಕೇಳಿದನು :—ಎಲೈ ವಾಲ್ಮೀಕಿಯೇ ! ನನ್ನಂತಿರುವ ಬಲಿಷ್ಠರಾದ ಹುಡುಗರಾರು ? ಧನುರ್ವಿದ್ಯೆಯಲ್ಲಿ ವಿಶಾರದರಾಗಿ ಅಲ್ಲೇಕೆ ಇದ್ದಾರೆ? ಅಮಾತ್ಯನು ಹೇಳಿದುದನ್ನು ಕೇಳಿ ಆಶ್ಚರ್ಯವಾಗಿದೆ.

೩. ಶತ್ರುಘ್ನನನ್ನು ಜಯಿಸಿ ಹನುಮಂತನನ್ನು ಕಟ್ಟಿದವರೆಂದಮೇಲೆ ಅವರು ಬಹು ವೀರರು. ಅವರ ವಿಷಯವನ್ನು ಹೇಳು.

ತಸ್ಮಾಚ್ಛಂಸ ಮುನೇ ಸರ್ವಂ ಬಾಲಯೋಶ್ಚ ವಿಚೇಷ್ಟಿತಂ ।
ಯಥಾ ಮೇ ಪರಮಾ ಪ್ರೀತಿರ್ಭವತ್ಯೇವಮಭೀಪ್ಸಿತಾ ॥ ೪ ॥

ಇತಿ ತತ್ಕಥಿತಂ ಶ್ರುತ್ವಾ ರಾಜರಾಜಸ್ಯ ಧೀಮತಃ ।
ಉವಾಚ ಪರಮಂ ವಾಕ್ಯಂ ಸ್ಪಷ್ಟಾಕ್ಷರಸಮನ್ವಿತಂ ॥ ೫ ॥

॥ ವಾಲ್ಮೀಕಿರುವಾಚ ॥

ತವಾಂತರ್ಯಾಮಿಣೋ ನ್ನೃಣಾಂ ಕಥಂ ಜ್ಞಾನಂ ಹಿ ನೋ ಭವೇತ್ ।
ತಥಾಪಿ ಕಥಯಾಮ್ಯತ್ರ ತವ ಸಂತೋಷಹೇತವೇ ॥ ೬ ॥

ರಾಜನ್ದ್ವೌ ಬಾಲಕೌ ಮಹ್ಯಮಾಶ್ರಮೇ ಬಲಿನಾಂ ವರೌ ।
ತ್ವತ್ಸಾರೂಪ್ಯಧರೌ ಸ್ವಾಂಗಮನೋಹರವಪುರ್ಧರೌ ॥ ೭ ॥

ತ್ವಯಾ ಯದಾ ವನೇ ತ್ಯಕ್ತಾ ಜಾನಕೀ ವೈ ನಿರಾಗಸೀ ।
ಅಂತರ್ವತ್ನೀ ವನೇ ಘೋರೇ ವಿಲಪಂತೀ ಮುಹುರ್ಮುಹುಃ ॥ ೮ ॥

ಕುರರೀಮಿವ ದುಃಖಾರ್ತಾಂ ವೀಕ್ಷ್ಯಾಹಂ ತತ್ರ ಮೋಹಳಾಂ ।
ಜನಕಸ್ಯ ಸುತಾಂ ಪುಣ್ಯಾಮಾಶ್ರಮೇ ತ್ವಾನಯಂ ತದಾ ॥ ೯ ॥

---

೪. ಅದನ್ನು ಕೇಳಿ ನನಗೇಕೋ ಬಹು ಪ್ರೀತಿಯುಂಟಾಗುತ್ತಿರುವುದಲ್ಲಾ!

೫. ರಾಮನ ಈ ಮಾತನ್ನು ಕೇಳಿ ವಾಲ್ಮೀಕಿಯು ಸ್ಪಷ್ಟನಾಗಿ ಇಂತೆಂದನು.

೬. ವಾಲ್ಮೀಕಿಯು ಹೇಳಿದನು :—ಅಂತರ್ಯಾಮಿಯಾದ ನಿನಗೆ ಮನುಷ್ಯರ ಚರಿತ್ರೆಯು ಗೊತ್ತಿಲ್ಲದಿರಲಾರದು. ಆದರೂ ನಿನ್ನ ಸಂತೋಷಕ್ಕೋಸ್ಕರ ಹೇಳುತ್ತೇನೆ.

೭. ರಾಜನೇ, ನನ್ನ ಆಶ್ರಮದಲ್ಲಿ ಬಲಿಷ್ಠರಾದ, ನಿನ್ನಂತೆ ಕಾಂತಿ ಅವಯವ ಸನ್ನಿವೇಶವುಳ್ಳ ಇಬ್ಬರು ಮಕ್ಕಳಿದ್ದಾರೆ.

೮. ತಪ್ಪಿಲ್ಲದ ಸೀತೆಯನ್ನು ನೀನು ಕಾಡಿನಲ್ಲಿ ಬಸುರಿಯಾಗಿದ್ದಾಗ ಬಿಟ್ಟೆಯಷ್ಟೆ! ಆಕೆ ಬಾರಿ ಬಾರಿಗೂ ದುಃಖಿಸುತ್ತಿದ್ದಳು.

೯. ಕುರರಿಯಂತೆ ದುಃಖಪಡುತ್ತಾ ಮೂರ್ಛಿತಳಾಗುತ್ತಿದ್ದ ಆ ಪುಣ್ಯತಮೆಯಾದ ಸೀತೆಯನ್ನು ನನ್ನ ಆಶ್ರಮಕ್ಕೆ ಕರೆದುಕೊಂಡು ಹೋದೆನು.

ತಸ್ಯಾಃ ಪರ್ಣಕುಟೀ ರಮ್ಯಾ ರಚಿತಾ ಮುನಿಪುತ್ರಕೈಃ ।
ತಸ್ಯಾಮುಭೂತಾಂ ಪುತ್ರೌ ದ್ವೌ ಭಾಸಯಂತೌ ದಿಶೋ ದಶ ॥ ೧೦ ॥

ತಯೋರಕರವಂ ನಾಮ ಕುಶೋ ಲವ ಇತಿ ಸ್ಫುಟಂ ।
ವವೃಧಾತೇಽನಿಶಂ ತತ್ರ ಶುಕ್ಲಪಕ್ಷಶಶೀ ಯಥಾ ॥ ೧೧ ॥

ಕಾಲೇನೋಪನಯಾವ್ಯಾನಿ ಕರ್ಮಾಣಿ ಕೃತವಾನಹಂ ।
ವೇದಾನ್ ಸಾಂಗಾನಹಂ ಸರ್ವಾನ್ಗ್ರಾಹಯಾಮಾಸ ಭೂಪತೇ ॥ ೧೨ ॥

ಸರ್ವಾಣಿ ಸರಹಸ್ಯಾನಿ ಶೃಣುಷ್ವ ಮುಖತೋ ಮಮ ।
ಆಯುರ್ವೇದಂ ಧನುರ್ವಿದ್ಯಾಂ ಶಸ್ತ್ರವಿದ್ಯಾಂ ತಥೈವ ಚ ॥ ೧೩ ॥

ವಿದ್ಯಾಂ ಜಾಲಂಧರೀಂ ಚಾಥ ಸಂಗೀತಕುಶಲೌ ಕೃತೌ ।
ಗಂಗಾಕೂಲೇ ಗಾಯಮಾನೌ ಲತಾಕುಂಜವನೇಷು ಚ ॥ ೧೪ ॥

ಚಂಚಲೌ ಚಲಚಿತ್ತೌ ಚ ಸರ್ವವಿದ್ಯಾವಿಶಾರದೌ ।
ತದಾಹಮತಿಸಂತೋಷಂ ಪ್ರಾಪ್ತಃ ಪರಮಬಾಲಯೋಃ ॥ ೧೫ ॥

ದತ್ವಾ ಸರ್ವಾಣಿ ಶಸ್ತ್ರಾಣಿ ಮಸ್ತಕೇ ನಿಹಿತಃ ಕರಃ ।
ಅತೀವ ಗಾನಕುಶಲೌ ದೃಷ್ಟ್ವಾ ಲೋಕಾ ವಿಸಿಷ್ಮಿರೇ ॥ ೧೬ ॥

---

೧೦. ಋಷಿಪುತ್ರರು ಅವಳಿಗೆ ಒಳ್ಳೆಯ ಪರ್ಣಶಾಲೆಯನ್ನು ಕಟ್ಟಿಕೊಟ್ಟರು. ಅವಳಲ್ಲಿ ಇಬ್ಬರು ಉತ್ತಮವಾದ ಮಕ್ಕಳು ಹುಟ್ಟಿದರು.

೧೧. ಅವರಿಗೆ ಕುಶಲವರೆಂದು ನಾಮಕರಣಮಾಡಿದೆನು. ಶುಕ್ಲಪಕ್ಷದ ಚಂದ್ರನಂತೆ ಬೆಳೆದರು.

೧೨. ಕಾಲಕ್ಕೆ ಸರಿಯಾಗಿ ಉಪನಯನಮಾಡಿದೆನು. ಸಾಂಗವಾದ ವೇದಾಧ್ಯಯನವನ್ನೂ ಮಾಡಿಸಿದ್ದೇನೆ.

೧೩. ರಹಸ್ಯದಿಂದ ಕೂಡಿರುವ ವಿದ್ಯೆಗಳೆಲ್ಲವನ್ನೂ ಹೇಳುತ್ತೇನೆ, ಕೇಳು.

೧೪. ಆಯುರ್ವೇದ (ವೈದ್ಯವಿದ್ಯೆ) ಧನುರ್ವಿದ್ಯೆ, ಶಸ್ತ್ರವಿದ್ಯೆ, ಜಲಂಧರ ವಿದ್ಯೆ, ಸಂಗೀತವಿದ್ಯೆಗಳಲ್ಲಿಯೂ, ಕುಶಲರನ್ನಾಗಿ ಮಾಡಿದ್ದೇನೆ. ಯಾವಾಗಲೂ ಗಂಗೆಯ ದಡದಲ್ಲಿ ಲತಾಕುಂಜಗಳಲ್ಲಿ ಹಾಡುತ್ತಿರುತ್ತಾರೆ.

೧೫-೧೬. ಅವರು ಚಂಚಲರು ನಿಂತಜಾಗದಲ್ಲಿ ನಿಲ್ಲುವುದಿಲ್ಲ. ಸರ್ವ ವಿದ್ಯೆಗಳನ್ನೂ ಬಲ್ಲವರು. ಸಂಗೀತವಿದ್ಯೆಯಲ್ಲಂತೂ ಅತಿಕುಶಲರು. ನಾನು ಆ ಹುಡುಗರಿಬ್ಬರನ್ನೂ ನೋಡಿ ಬಹಳವಾಗಿ ಸಂತೋಷಗೊಂಡಿದ್ದೇನೆ.

ಷಡ್ಜಮಧ್ಯಮಗಾಂಧಾರಸರ್ವವಿದ್ಯಾವಿಶಾರದೌ ।
ತಥಾವಿಧೌ ವಿಲೋಕ್ಯಾಹಂ ಗಾಪಯಾಮಿ ಮನೋಹರಂ ॥ ೧೭ ॥

ಭವಿಷ್ಯಜ್ಞಾನಯೋಗಾಚ್ಚ ಕೃತಂ ರಾಮಾಯಣಂ ಶುಭಂ ।
ಮೃದಂಗಪಣವಾದ್ಯಂ ಚ ಯಂತ್ರವೀಣಾವಿಶಾರದೌ ॥ ೧೮ ॥

ವನೇ ವನೇ ಚ ಗಾಯಂತೌ ಮೃಗಪಕ್ಷಿವಿಮೋಹಕೌ ।
ಅದ್ಭುತಂ ಗೀತಮಾಧುರ್ಯಂ ತದಾ ರಾಮ ಕುಮಾರಯೋಃ ॥ ೧೯ ॥

ಶ್ರೋತುಂ ತೌ ವರುಣೋ ಬಾಲಾವಾನಿನಾಯ ವಿಭಾವರೀಂ ।
ಮನೋಹಾರಿವಯೋರೂಪೌ ಗಾನವಿದ್ಯಾಬ್ಧಿಪಾರಗೌ ॥ ೨೦ ॥

ಕುಮಾರೌ ಜಗದುಸ್ತತ್ರ ಲೋಕೇಶಾದೇಶತಃ ಕಲಂ ।
ಪರಮಂ ಮಧುರಂ ರಮ್ಯಂ ಪವಿತ್ರಂ ಚರಿತಂ ತವ ॥ ೨೧ ॥

ಶುಶ್ರಾವ ವರುಣಸ್ಸಾರ್ಧಂ ಕುಟುಂಬೇನ ಚ ಗಾಯಕೈಃ ।
ಶೃಣನ್ನೇವ ಗತಸ್ತೃಪ್ತಿಂ ಮಿತ್ರೇಣ ವರುಣಸ್ಸಹ ॥ ೨೨ ॥

---

೧೭. ಷಡ್ಜ, ಮಧ್ಯಮ, ಗಾಂಧಾರಗಳನ್ನು ಚೆನ್ನಾಗಿ ಬಲ್ಲರು. ಅದನ್ನು ತಿಳಿದು ನಾನು ಚೆನ್ನಾಗಿ ಹಾಡಿಸುತ್ತಿದ್ದೇನೆ.

೧೮. ಭವಿಷ್ಯಜ್ಞಾನವಿದ್ದುದರಿಂದ ರಾಮಾಯಣವನ್ನು ಬರೆದೆನು. ಅದನ್ನು ಕಲಿಸಿದ್ದೇನೆ. ಮೃದಂಗ, ಪಣವ, ವೀಣೆ, ಮುಂತಾದುವುಗಳಲ್ಲಿ ಗಟ್ಟಿಗರನ್ನಾಗಿ ಮಾಡಿದ್ದೇನೆ.

೧೯. ಪ್ರತಿ ವನದಲ್ಲಿಯೂ ಕೂಡ ಹಾಡುತ್ತಿರುವರು. ಅವರ ಗಾನವು ಮೃಗಪಕ್ಷಿಗಳಿಗೂ ಮೋಹಕವಾಗಿದೆ. ಎಲೈ ರಾಮನೇ ! ಕುಮಾರರ ಗೀತದ ಮಾಧುರ್ಯವು ಬಹು ಚೆನ್ನಾಗಿದೆ.

೨೦. ವರುಣನು ಆ ಮನೋಹರರೂ, ಸುಂದರರೂ ಆದ ಮಕ್ಕಳನ್ನು ಒಂದು ರಾತ್ರಿಯಲ್ಲಿ ಹಾಡಲು ಕರೆಸಿದ್ದನು. ಆ ವರುಣನ ಅಪ್ಪಣೆಯಂತೆ ಅವರು ಅಲ್ಲಿ ಹಾಡಿದರು.

೨೧-೨೨. ಉತ್ತಮವಾದ ಮಧುರವಾದ ರಮ್ಯವಾದ ನಿನ್ನ ಚರಿತ್ರೆಯನ್ನು ಹಾಡಿಸಿ ಸ್ನೇಹಿತರೊಡನೆ ಕೇಳುತ್ತಿದ್ದಂತೆಯೇ ವರಣನು ತೃಪ್ತಿಹೊಂದಿದನು.

ಸುಧಾತೋಽಪಿ ರಸಸ್ವಾದು ಚರಿತಂ ರಘುನಂದನ ।
ಗಾನಾನಂದಮಹಾಲೋಭಸ್ತೃಪ್ತಃ ಸ್ರಾಹೇಂದ್ರಿಯಕ್ರಿಯಃ ॥ ೨೩ ॥

ಪ್ರತ್ಯಾಗಂತುಂ ದಿದೇಶಾಸೌ ಕುಮಾರೌ ನ ಹಿ ತಾವಕೌ ।
ರಮಣೀಯಮಹಾಭೋಗೈರ್ಲೋಭಿತಾವಪಿ ಬಾಲಕೌ ॥ ೨೪ ॥

ಚಾಲಿತೌ ನ ಗುರೋಶ್ಚಾತ್ಮಮಾತುಃ ಪಾದಾಂಬುಜಸ್ಮೃತೇಃ ।
ಅಹಂ ಚಾಪಿ ಗತಃ ಪಶ್ಚಾದ್ವರುಣಾಲಯಮುತ್ತಮಂ ॥ ೨೫ ॥

ವರುಣಃ ಪ್ರೇಮಗಳಿತಃ ಪೂಜಾಂ ಚಕ್ರೇ ಮಮ ಪ್ರಭೋಃ ।
ಪೃಚ್ಛತೇ ಜನ್ಮಕರ್ಮಾದಿ ಸರ್ವಜ್ಞಾಯಾಪಿ ಬಾಲಯೋಃ ॥ ೨೬ ॥

ವರುಣಾಯಾಬ್ರುವಂ ಸರ್ವಂ ಜನ್ಮವಿದ್ಯಾದ್ಯುಪಾಗಮಂ ।
ಶ್ರುತ್ವಾ ಸೀತಾಸುತೌ ದೇವಃ ಸ ಚಕ್ರೇಂಬರಭೂಷಣೈಃ ॥ ೨೭ ॥

ದೇವದತ್ತಮಿತಿ ಗ್ರಾಹ್ಯಮಿತಿ ಮದ್ವಾಕ್ಯಗೌರವಾತ್ ।
ಆದತ್ತಂ ರಾಜಪುತ್ರಾಭ್ಯಾಂ ಯದ್ದತ್ತಂ ವರುಣೇನ ತತ್ ॥ ೨೮ ॥

---

೨೩. ಎಲೈ ರಾಮನೇ! ನಿನ್ನ ಚರಿತ್ರೆಯು ಅಮೃತಕ್ಕಿಂತಲೂ ಮಧುರವಾದುದು. ಗಾನದಿಂದಲೂ ಕೂಡಿದ್ದುದರಿಂದಲೂ ಬಹು ಸಂತೋಷಪಟ್ಟನು.

೨೪. ಆ ಹುಡುಗರಿಗೆ ಉತ್ತಮವಾದ ಭೋಗಗಳನ್ನು ಕಲ್ಪಿಸಿ, ಹಿಂತಿರುಗಲು ಅಪ್ಪಣೆಯನ್ನೇ ಕೊಡಲಿಲ್ಲ ಗುರುವಿನ ಅಪ್ಪಣೆಯನ್ನೂ ತಾಯಿಯನ್ನೂ ಸ್ಮರಿಸಿಕೊಂಡರೂ ಕಳುಹಿಸಲೇ ಇಲ್ಲ.

೨೫. ಅನಂತರ ನಾನೇ ವರುಣನ ಮನೆಗೆ ಹೋದೆನು.

೨೬. ವರುಣನು ಪ್ರೇಮದಿಂದ ನನ್ನನ್ನು ಗೌರವಿಸಿದನು. ಬಾಲಕರ ವಿಷಯವನ್ನು ತಿಳಿದುಕೊಳ್ಳಲು, ಅವರು ಬಾಲಕರಾಗಿದ್ದರೂ ಇಷ್ಟು ಬುದ್ಧಿವಂತರಾಗಲು ಕಾರಣವೇನೆಂಬುದಕ್ಕೆ ಜನ್ಮಕರ್ಮಗಳನ್ನು ಕೇಳಿದನು.

೨೭. ಜನ್ಮ, ವಿದ್ಯೆಗಳೆಲ್ಲವನ್ನೂ ವರುಣನಿಗೆ ಹೇಳಿದೆನು. ಇವರು ಸೀತೆಯ ಮಕ್ಕಳೆಂದು ತಿಳಿದು ಉಡಿಗೆ ತೊಡಿಗೆಗಳನ್ನು ಅವರಿಗೆ ಕೊಟ್ಟು ಬಹು ಗೌರವಿಸಿದನು.

೨೮. ದೇವತೆಗಳು ಕೊಟ್ಟುದ್ದೆಂದು ತೆಗೆದುಕೊಳ್ಳಿರೆಂದು ನಾನು ಹೇಳಲು, ನನ್ನ ಮಾತಿನ ಮೇಲಿನ ಗೌರವದಿಂದ ಆ ರಾಜಪುತ್ರರು ತೆಗೆದುಕೊಂಡರು.

ಪ್ರಸನ್ನೇನ ತಯೋರ್ವಾದ್ಯಗಾನವಿದ್ಯಾವಯೋಗುಣೈಃ ।
ತತೋ ಮಾಮಬ್ರವೀತ್ಸೀತಾಮುದ್ದಿಶ್ಯ ವರುಣಃ ಕೃತೀ ॥ ೨೯ ॥

ಸೀತಾ ಪತಿವ್ರತಾಧುರ್ಯಾ ಶೀಲರೂಪವಯೋನ್ವಿತಾ ।
ವೀರಪುತ್ರಾ ಮಹಾಭಾಗಾ ತ್ಯಾಗಂ ನಾರ್ಹತಿ ಕರ್ಹಿಚಿತ್ ॥ ೩೦ ॥

ಮಹತೀ ಹಾನಿರೇತಸ್ಯಾಸ್ತ್ಯಾಗೇ ಹಿ ರಘುನಂದನ ।
ಸಿದ್ಧೀನಾಂ ಪರಮಾ ಸಿದ್ಧಿರೇಷಾ ತೇ ಹ್ಯನಪಾಯಿನೀ ॥ ೩೧ ॥

ಪಾಮರೈರ್ಮಹಿಮಾ ನಾಸ್ಯಾ ಜ್ಞಾಯತೇ ಯದಿ ದೂಷಿತೈಃ ।
ಕಾ ಹಾನಿಸ್ತಾವತಾ ರಾಮ ಪುಣ್ಯಶ್ರವಣಕೀರ್ತನ ॥ ೩೨ ॥

ಅಸ್ಮತ್ಸಾಕ್ಷಿಕಮೇವಾಸ್ಯಾಃ ಪಾವನಂ ಚರಿತಂ ಸದಾ ।
ಸದ್ಯಸ್ತೇ ಸಿದ್ಧಿಮಾಯಾಂತಿ ಯೇ ಸೀತಾಪದಚಿಂತಕಾಃ ॥ ೩೩ ॥

ಯಸ್ಯಾಸ್ಸಂಕಲ್ಪಮಾತ್ರೇಣ ಜನ್ಮಸ್ಥಿತಿಲಯಾದಿಕಾಃ ।
ಭವಂತಿ ಜಗತಾಂ ನಿತ್ಯಂ ವ್ಯಾಪಾರಾ ಐಶ್ವರಾ ಅಮೀ ॥ ೩೪ ॥

---

೨೯. ಆ ಮಕ್ಕಳ ಮಾತು, ವಾದ್ಯಗಾನಗಳನ್ನು ಕೇಳಿ ಸಂತೋಷಗೊಂಡ ವರುಣನು ಸೀತೆಯನ್ನು ಕುರಿತು ಹೇಳೆಂದು ನನಗೆ ಹೇಳಿದನು.

೩೦. ಸೀತೆಯು ಪತಿವ್ರತೆಯರಲ್ಲಿ ಶ್ರೇಷ್ಠಳು, ಶೀಲರೂಪ ವಯಸ್ಸುಗಳು ಚೆನ್ನಾಗಿವೆ. ವೀರರಾದ ಮಕ್ಕಳನ್ನು ಪಡೆದಿದ್ದಾಳೆ. ಈಕೆಯನ್ನು ಬಿಡಲೇ ಕೂಡದು.

೩೧. ಈ ಸೀತೆಯನ್ನು ಬಿಟ್ಟುದರಿಂದ ಬಹು ನಷ್ಟವು. ಈಕೆಯು ಸಿದ್ಧಿಗಳಿಗೆಲ್ಲ ಸಿದ್ಧಿಯು, ಬಿಡಲ್ಪಡತಕ್ಕವಳಲ್ಲ,

೩೨. ಪಾಮರರಿಗೆ ಈಕೆಯ ಮಹಿಮೆಯು ಗೊತ್ತಾಗುವುದಿಲ್ಲ. ಅವರು ದೂಷಿಸಿದುದರಿಂದ ಈಕೆಗೆ ಹಾನಿಯೇನು?

೩೩. ನಾವುಗಳು ಕಂಡಹಾಗೆ ಈಕೆಯು ಪಾವನವು. ಯಾರು ಈ ಸೀತೆಯನ್ನು ಸ್ಮರಿಸುತ್ತಾರೆಯೋ ಅವರು ಒಡನೆ ಸಿದ್ಧಿಯನ್ನು ಹೊಂದುತ್ತಾರೆ.

೩೪. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಈಶ್ವರನು ಮಾಡುವಂತೆಯೇ ಈಕೆಯು ಸಂಕಲ್ಪ ಮಾತ್ರದಿಂದಲೇ ಮಾಡಬಲ್ಲಳು.

ಸೀತಾ ಮೃತ್ಯುಸ್ಸುಧಾ ಚೇಯಂ ತಪತ್ಯೇಷಾ ಚ ವರ್ಷತಿ ।
ಸ್ವರ್ಗೋ ಮೋಕ್ಷಸ್ತಪೋ ಯೋಗೋ ದಾನಂ ಚ ತವ ಜಾನಕೀ ॥ ೩೫ ॥

ಬ್ರಹ್ಮಾಣಂ ಶಿವಮನ್ಯಾಂಶ್ಚ ಲೋಕಪಾಲಾನ್ಮರುದಾದಿಕಾನ್ ।
ಕರೋತ್ಯೇಷಾ ಕರೋತ್ಯೇವ ನ ಚ ಸೀತಾ ತವ ಪ್ರಿಯಾಂ ॥ ೩೬ ॥

ತ್ವಂ ಪಿತಾ ಸರ್ವಲೋಕಾನಾಂ ಸೀತಾ ಚ ಜನನೀತ್ಯತಃ ।
ಕುದೃಷ್ಟಿರತ್ರ ತು ಕ್ಷೇಮಯೋಗ್ಯಾ ನ ತವ ಕರ್ಹಿಚಿತ್ ॥ ೩೭ ॥

ವೇತ್ತಿ ಸೀತಾಂ ಸದಾ ಶುದ್ಧಾಂ ಸರ್ವಜ್ಞೋ ಭಗವಾನ್ಸ್ವಯಂ ।
ಭವಾನಪಿ ಸುತಾಂ ಭೂಮೇಃ ಪ್ರಾಣಾದಪಿ ಗರೀಯಸೀಂ ॥ ೩೮ ॥

ಆದರ್ತವ್ಯಾ ತ್ವಯಾ ತಸ್ಮಾತ್ಪ್ರಿಯಾ ಶುದ್ಧೇತಿ ಜಾನಕೀ ।
ನ ಚ ಶಾಪಪರಾಭೂತಿಃ ಸೀತಾಯಾಂ ತ್ವಯಿ ವಾ ವಿಭೋ ॥ ೩೯ ॥

ಇಮಾನಿ ಮಮ ವಾಕ್ಯಾನಿ ವಾಚ್ಯಾನಿ ಜಗತೀಪತಿಂ ।
ರಾಮಂ ಪ್ರತಿ ತ್ವಯಾ ಸಾಕ್ಷಾದ್ವಾಲ್ಮೀಕೇ ಮುನಿಸತ್ತಮ ॥ ೪೦ ॥

---

೩೫. ಸೀತೆಯೇ ಯಮನು. ಆಕೆಯೇ ಅಮೃತವು. ಅವಳೇ ಸೂರ್ಯನು, ಪರ್ಜನ್ಯನು, ಸ್ವರ್ಗ, ಮೋಕ್ಷ, ತಪಸ್ಸು, ದಾನಗಳೂ ಆಕೆಯೇ.

೩೬. ಬ್ರಹ್ಮ, ಈಶ್ವರ, ಲೋಕಪಾಲರುಗಳನ್ನು ಇವಳು ಸೃಷ್ಟಿ ಮಾಡಬಲ್ಲಳು. ಆದರೆ ನಿನ್ನ ಪ್ರಿಯೆಯಾದ ಈಕೆಯು ಹಾಗೆ ಮಾಡುತ್ತಿಲ್ಲ.

೩೭. ಲೋಕಕ್ಕೆಲ್ಲಾ ನೀನೇ ತಂದೆ, ಸೀತೆಯು ತಾಯಿಯು. ಈಕೆಯ ವಿಷಯದಲ್ಲಿ ಕೆಟ್ಟ ಭಾವನೆಯು ನಿನಗೆ ಯೋಗ್ಯವೂ ಅಲ್ಲ, ಕ್ಷೇಮವೂ ಅಲ್ಲ.

೩೮. ಸರ್ವಜ್ಞನಾದ ಭಗವಂತನಾದ ನೀನು ಸೀತೆಯು ಸದಾ ಶುದ್ಧಳೆಂದು ಬಲ್ಲೆ. ಮತ್ತು ಭೂಮಿಯ ಮಗಳೆಂಬುದನ್ನೂ, ಪ್ರಾಣಕ್ಕಿಂತಲೂ ಪ್ರಿಯಳೆಂಬುದನ್ನೂ ಬಲ್ಲೆಯಷ್ಟೆ.

೩೯. ಆದ್ದರಿಂದ ಸೀತೆಯು ಶುದ್ಧಳೆಂದು ನೀನು ಆದರಿಸಬೇಕು. ಶಾಪವು ನಿನ್ನಲ್ಲಾಗಲೀ, ಸೀತೆಯಲ್ಲಾಗಲೀ ಫಲಿಸದೇ ಬಿಡದು.

೪೦. ಈ ನನ್ನ ಮಾತುಗಳನ್ನು ರಾಮನಿಗೆ ನೀನು ಪ್ರತ್ಯಕ್ಷವಾಗಿ ಹೇಳಬೇಕು.

ಇತ್ಯುಕ್ತೋ ವರುಣೇನಾಹಂ ಸೀತಾಸಂಗ್ರಹಕಾರಣಾತ್ ।
ಏವಮೇವ ಹಿ ಸರ್ವೈಶ್ಚ ಲೋಕಪಾಲೈರಪಿ ಪ್ರಭೋ ॥ ೪೧ ॥

ಶ್ರುತಂ ರಾಮಾಯಣೋದ್ಗಾನಂ ಪುತ್ರಾಭ್ಯಾಂ ತೇ ಸುರಾಸುರೈಃ ।
ಗಂಧರ್ವೈರಪಿ ಸರ್ವೈಶ್ಚ ಕೌತುಕಾವಿಷ್ಟಮಾನಸೈಃ ॥ ೪೨ ॥

ಪ್ರಸನ್ನಾ ಏವ ಸರ್ವೇಽಪಿ ಪ್ರಶಶಂಸುಃ ಸುತೌ ಚ ತೇ ।
ತ್ರೈಲೋಕ್ಯಂ ಮೋಹಿತಂ ತಾಭ್ಯಾಂ ರೂಪಗಾನವಯೋಗುಣೈಃ ॥ ೪೩ ॥

ದತ್ತಂ ಯಲ್ಲೋಕಪಾಲೈಸ್ತೇ ಸುತಾಭ್ಯಾಂ ಸ್ವೀಕೃತಂ ಹಿ ತತ್ ।
ಋಷಿಭಿಶ್ಚ ವರಾ ಆಭ್ಯಾಮನ್ಯೇಭ್ಯಃ ಕೀರ್ತಿರೇವ ಚ ॥ ೪೪ ॥

ಏಕರಾಮಂ ಜಗತ್ಸರ್ವಂ ಪೂರ್ವಂ ಮುನಿವಿಲೋಕಿತಂ ।
ತ್ರಿರಾಮಮಧುನಾ ಜಾತಂ ಸುತಾಭ್ಯಾಂ ತೇಽಖಿಲೇಪ್ಸಿತಂ ॥ ೪೫ ॥

ಏಕಕಾಮಪರಾಭೂತಿರ್ಲೋಕೇ ಪೂರ್ವಮವೇಕ್ಷಿತಾ ।
ಕಾಮೈಶ್ಚತುರ್ಭಿರದ್ಯಾಯಂ ಜೀಯತೇ ಚ ಯತಸ್ತತಃ ॥ ೪೬ ॥

---

೪೧. ಸೀತೆಯನ್ನು ನೀನು ಸ್ವೀಕರಿಸಲು, ವರುಣನು ಈ ರೀತಿ ನನ್ನ ಮುಖ ದಿಂದ ಹೇಳೆಂದು ಹೇಳಿರುವನು, ಲೋಕಪಾಲರೆಲ್ಲರೂ ಹಾಗೆಯೇ ಹೇಳುತ್ತಾರೆ.

೪೨. ರಾಮಾಯಣಗಾನವನ್ನು ದೇವತೆಗಳು, ಅಸುರರು, ಗಂಧರ್ವರು. ಮನುಷ್ಯರು ಎಲ್ಲರೂ ಕೇಳಿದ್ದಾರೆ.

೪೩. ಅವರೆಲ್ಲರೂ ಪ್ರಸನ್ನರಾಗಿ ಹುಡುಗರನ್ನು ಹೊಗಳಿದರು, ಅವರ ರೂಪ ವಯಸ್ಸು ಗುಣಗಳಿಂದ ಮೂರು ಲೋಕವೂ ಮೋಹಗೊಂಡಿತು.

೪೪. ಲೋಕಪಾಲರು ಕೊಟ್ಟುದನ್ನು ತೆಗೆದುಕೊಂಡುದು ಸರಿಯಾದುದು, ಋಷಿಗಳಿಂದ ತೆಗೆದುಕೊಂಡದು ಶ್ರೇಷ್ಠವು, ಇತರರು ಕೊಟ್ಟುದು ಕೀರ್ತಿಗೆ ಮಾತ್ರ ಬೇಕಾದುದು.

೪೫. ಋಷಿಗಳೆಲ್ಲರೂ ಪ್ರಪಂಚದಲ್ಲಿ ಒಬ್ಬ ರಾಮನನ್ನೇ ನೋಡಿದ್ದರು. ಈಗ ಮೂರು ಜನ ರಾಮರಾದರು. ಆ ಮೂರು ಜನ ರಾಮರಾಗುವುದಕ್ಕೆ ನಿನ್ನ ಮಕ್ಕಳೇ ಕಾರಣರಲ್ಲವೇ ?

೪೬. ಲೋಕವೆಲ್ಲವನ್ನೂ ಪೂರ್ವದಲ್ಲಿ ಒಬ್ಬ ರಾಮನು ಜಯಿಸಿದುದನ್ನು ಎಲ್ಲರೂ ನೋಡಿದ್ದರು. ಈ ನಾಲ್ಕು ಕಾಮುಂದಿರು ಎಲ್ಲಾ ಕಡೆಯಲ್ಲೂ ಜಯಿಸು

ಸರ್ವತ್ರಾನ್ಯತ್ರ ರಾಜೇಂದ್ರ ರಾಮಪುತ್ರೌ ಕುಶೀಲವೌ ।
ಗೀಯತೇ ಅತ್ರ ಸಂಕೋಚಃ ಕಿಂ ಕೃತೋ ವಿದುಷಿ ತ್ವಯಿ ॥ ೪೭ ॥

ಕೃತೇಷು ತವ ಸರ್ವೇಷು ಶ್ರೂಯತೇ ಮಹತೀ ಸ್ತುತಿಃ ।
ತ್ಯಾಗಾದನ್ಯತ್ರ ಸೀತಾಯಾಃ ಪುಣ್ಯಶ್ಲೋಕಶಿರೋಮಣೇ ॥ ೪೮ ॥

ತ್ವಯಾ ತ್ರೈಲೋಕ್ಯನಾಥೇನ ಗಾರ್ಹಸ್ಥ್ಯಮನುಕುರ್ವತಾ ।
ಅಂಗೀಕಾರ್ಯೌ ಸುತೌ ರಾಮ ವಿದ್ಯಾಶೀಲಗುಣಾನ್ವಿತೌ ॥ ೪೯ ॥

ನ ತೌ ಸ್ವಾಂ ಮಾತರಂ ಹಿತ್ವಾ ಸ್ಥಾಸ್ಯತೋ ಭವದಂತಿಕೇ ।
ಜನನ್ಯಾ ಸಹಿತೌ ತಸ್ಮಾದಾಕಾರ್ಯೌ ಭವತಾ ಸುತೌ ॥ ೫೦ ॥

ದತ್ತ ಏವ ತಯಾ ಪ್ರಾಣಃ ಸೇನಾಸಂಜೀವನಾತ್ಪುನಃ ।
ಪ್ರತ್ಯಯಸ್ಸರ್ವಲೋಕಾನಾಂ ಪಾವನಃ ಪತತಾಮಪಿ ॥ ೫೧ ॥

---

ತ್ತಿದ್ದೀರಿ. (ರಾಮ, ಕುಶ, ಲವ, ಕಾಮ, ಈ ನಾಲ್ಕು ಮಂದಿ ಕಾಮರೆಂದು ತಿಳಿಯಬೇಕು.)

೪೭. ಎಲೈ ರಾಮನೇ! ರಾಜಪುತ್ರರಾದ ಗಾಯಕರು ಎಲ್ಲ ಕಡೆಯಲ್ಲೂ ಗಾನಮಾಡುತ್ತಿರುವಾಗ ವಿದ್ವಾಂಸನಾದ ನೀನು ಮಾತ್ರ ಇಲ್ಲೇಕೆ ಅದನ್ನು ಮಾಡಿಸಲು ಸಂಕೋಚಪಡುತ್ತೀಯೆ?

೪೮. ನಿನ್ನ ಚರಿತ್ರೆಯಲ್ಲೆಲ್ಲಾ ಹೊಗಳಿಕೆಯೇ ಇದೆ. ಸೀತಾತ್ಯಾಗ ಒಂದು ಮಾತ್ರ ತೆಗಳಿಕೆ.

೪೯. ಮೂರು ಲೋಕಕ್ಕೂ ಒಡೆಯನಾದ ನೀನು ಗೃಹಸ್ಥಾಶ್ರಮವನ್ನು ಅನುಕರಿಸುತ್ತಿರುವಾಗ ಶೀಲಗುಣವಂತರಾದ ಆ ಮಕ್ಕಳನ್ನು ನೀನು ಅಂಗೀಕರಿಸಬೇಕು.

೫೦. ಅವರು ತಮ್ಮ ತಾಯಿಯನ್ನು ಬಿಟ್ಟು ನಿನ್ನ ಬಳಿಯಿರುವುದಿಲ್ಲ. ಅದ್ದರಿಂದ ಅವರನ್ನೂ ಅವರ ತಾಯಿಯೊಡನೆ ಕರೆಸು.

೫೧. ನಿನ್ನ ಸೇನೆಯನ್ನು ಬದುಕಿಸಿದುದರಿಂದಲೇ ಅವಳು ಪ್ರಾಣವನ್ನು ಕೊಟ್ಟಿದ್ದಾಳೆ. ಅದೇನೇ ಅಯೋಗ್ಯರಿಗೂ ಯೋಗ್ಯರಿಗೂ ಕೂಡ ನಂಬಿಕೆಯಲ್ಲವೇ?

ನಾಜ್ಞಾತಂ ತೇ ನ ಚಾಸ್ಮಾಕಂ ನಾಮರಾಣಾಂ ಚ ಮಾನದ ।
ಶುದ್ಧಾ ತಸ್ಯಾಸ್ತು ಲೋಕಾನಾಂ ಯನ್ನಷ್ಟಂ ತದಿಹ ಧ್ರುವಂ ॥ ೫೨ ॥

॥ ಶೇಷ ಉವಾಚ ॥

ಇತಿ ವಾಲ್ಮೀಕಿನಾ ರಾಮಃ ಸರ್ವಜ್ಞೋಽಪ್ಯವಬೋಧಿತಃ ।
ಸ್ತುತ್ವಾ ನತ್ವಾ ಚ ವಾಲ್ಮೀಕಿಂ ಪ್ರತ್ಯುವಾಚ ಸ ಲಕ್ಷ್ಮಣಂ ॥ ೫೩ ॥

ಗಚ್ಛ ತಾತಾಧುನಾ ಸೀತಾಮಾನೇತುಂ ಧರ್ಮಚಾರಿಣೀಂ ।
ಸಪುತ್ರಾಂ ರಥಮಾಸ್ಥಾಯ ಸುಮಿತ್ರಸಹಿತಸ್ಸಖೇ ॥ ೫೪ ॥

ಶ್ರಾವಯಿತ್ವಾ ಮಮೇತಾನಿ ಮುನೇಶ್ಚ ವಚನಾನ್ಯಪಿ ।
ಸಂಬೋಧ್ಯ ಚ ಪುರೀಮೇತಾಂ ಸೀತಾಂ ಪ್ರತ್ಯಾನಯಾಶು ತಾಂ ॥ ೫೫ ॥

॥ ಲಕ್ಷ್ಮಣ ಉವಾಚ ॥

ಯಾಸ್ಯಾಮಿ ತವ ಸಂದೇಶಾತ್ಸರ್ವೇಷಾಂ ವಃ ಪ್ರಿಯಾದ್ವಿಭೋ ।
ದೇವ್ಯಾಯಾಸ್ಯತಿ ಚೇದ್ದೇವ ಯಾತ್ರಾ ಮೇ ಸಫಲಾ ತತಃ ॥ ೫೬ ॥

---

೫೨. ನಿನಗೆ ಅದು ಗೊತ್ತಿಲ್ಲದಿಲ್ಲ, ನಮಗೂ ಗೊತ್ತಿಲ್ಲದಿಲ್ಲ. ದೇವತೆಗಳಿಗೂ ಅದು ತಿಳಿದಿದೆ, ಆದರೆ ಜನಗಳಿಗೆ ಅವರಲ್ಲೂ ಸಾಧಾರಣ ಜನಗಳಿಗೆ ಮಾತ್ರ ಯಾವುದು ಮರೆತಿತ್ತೋ ಅದು ಈಗ ಸ್ಥಿರಪಟ್ಟಿತು.

೫೩. ಶೇಷನು ಹೇಳಿದನು :—ಸರ್ವಜ್ಞನಾದರೂ ರಾಮನಿಗೆ ಈ ರೀತಿ ವಾಲ್ಮೀಕಿಯು ಜ್ಞಾಪಿಸಿದನು. ರಾಮನು ಕೂಡ ವಾಲ್ಮೀಕಿಯನ್ನು ನಮಸ್ಕರಿಸಿ, ಹೊಗಳಿ ಲಕ್ಷ್ಮಣನಿಗಿಂತೆಂದನು.

೫೪-೫೫. ಎಲೈ ಲಕ್ಷ್ಮಣನೇ, ಈಗ ನೀನು ಸುಮಂತ್ರನೊಡನೆ ವಾಲ್ಮೀಕಿಯ ಆಶ್ರಮಕ್ಕೆ ಹೋಗು. ಅಲ್ಲಿ ನನ್ನ ಮತ್ತು ವಾಲ್ಮೀಕಿ ಋಷಿಗಳ ಮಾತನ್ನು ಅವರಿಗೆ ತಿಳಿಸಿ ಮಕ್ಕಳೊಡನೆ ಆ ಸೀತೆಯನ್ನು ಅವರ ಸ್ನೇಹಿತರಾದ ಸುಮಿತ್ರರನ್ನೂ ರಥದಲ್ಲಿ ಕೂರಿಸಿಕೊಂಡು ಕರೆದುಕೊಂಡು ಬಾ. ಎಂದನು.

೫೬-೫೭. ಲಕ್ಷ್ಮಣನನು ಹೇಳಿದನು :—ಸ್ವಾಮಿ ! ನಿನ್ನ ಅಪ್ಪಣೆಯನ್ನು ಶಿರಸಾವಹಿಸಿ ಎಲ್ಲರ ಇಷ್ಟದಂತೆಯೂ ಸಹ ನಾನು ಹೋಗುತ್ತೇನೆ. ದೇವಿಯು ಬಂದ ಪಕ್ಷದಲ್ಲಿ ನನ್ನ ಶ್ರಮವೂ ನನ್ನ ಯಾತ್ರೆಯೂ ಸಫಲವಾಗುತ್ತವೆ, ನನ್ನ

ಯದಿ ಸಾ ಮಾಹ್ಯಸೂಯೈವ ಪೂರ್ವದೋಷವಶಾತ್ಸತೀ ।
ಅನಾಗತಾ ದೇವ ತಸ್ಯಾಃ ಕ್ಷಮಸ್ವಾಗಂತುಕಂ ತು ಮಾಂ ॥ ೫೭ ॥

ಇತ್ಯುಕ್ತ್ವಾ ಲಕ್ಷ್ಮಣೋ ರಾಮಂ ರಥೇ ಸ್ಥಿತ್ವಾ ನೃಪಾಜ್ಞಯಾ ।
ಸುಮಿತ್ರಮುನಿಶಿಷ್ಯಾಭ್ಯಾಂ ಯುತೋಽಗಾದ್ವನಿತಾಶ್ರಮಂ ॥ ೫೮ ॥

ಕಥಂ ಪ್ರಸಾದನೀಯಾ ಸ್ಯಾತ್ಸೀತಾ ಭಗವತೀ ಮಯಾ ।
ಪೂರ್ವದೋಷಂ ವಿಜಾನಾತಿ ರಾಮಾಧೀನಸ್ಯ ಮೇ ಸದಾ ॥ ೫೯ ॥

ಏವಂ ಸಂಚಿಂತಯನ್ನಂತರ್ಹರ್ಷಸಂಕೋಚಮಧ್ಯಗಃ ।
ಲಕ್ಷ್ಮಣಃ ಪ್ರಾಪ ಸೀತಾಯಾ ಆಶ್ರಮಂ ಶ್ರಮನಾಶನಂ ॥ ೬೦ ॥

ರಥಾತ್ತೀರ್ಣೋಽಶ್ರುಧಾವರುದ್ಧ್ಯಾರಾದಶ್ರುರುದ್ಧವಿಲೋಚನಃ ।
ಆರ್ಯೇ ಪೂಜ್ಯೇ ಭಗವತಿ ಶುಭೇ ಇತಿ ವದನ್ಮುಹುಃ ॥ ೬೧ ॥

ಪಪಾತ ಪಾದಯೋಸ್ತಸ್ಯಾ ವೇಪಮಾನಾಖಿಲಾಂಗಕಃ ।
ಉತ್ಥಾಪಿತಸ್ತಯಾ ದೇವ್ಯಾ ಪ್ರೀತಿವಿಹ್ವಲಯಾ ಸ ಚ ॥ ೬೨ ॥

---

ಮೇಲೇನೋ ಆಕೆಗೆ ಹೊಟ್ಟೇಕಿಚ್ಚಿರುವುದಿಲ್ಲ. ಒಂದು ವೇಳೆ ಹಿಂದಿನ ರೋಷವನ್ನು ಮನಸ್ಸಿನಲ್ಲಿಟ್ಟುಕೊಂಡು ಬಾರದಿದ್ದರೆ, ನಾನೊಬ್ಬನೇ ಬಂದರೆ ನನ್ನನ್ನು ಕ್ಷಮಿಸು.

೫೮. ಲಕ್ಷ್ಮಣನು ರಾಮನಿಗೆ ಹೀಗೆ ಹೇಳಿ ಸುಮಿತ್ರನೊಡನೆಯೂ ಶಿಷ್ಯರೊಡನೆಯೂ ರಥದಲ್ಲಿ ಕುಳಿತು ಆಶ್ರಮಕ್ಕೆ ಹೊರಟನು.

೫೯. ಸೀತೆಯನ್ನು ಹೇಗೆ ಪ್ರಸನ್ನಳನ್ನಾಗಿಮಾಡಿಕೊಳ್ಳಲಿ ? ರಾಮನ ಅಧೀನನಾದ ನನ್ನ ಹಿಂದಿನ ತಪ್ಪನ್ನು ಆಕೆ ಬಲ್ಲಳು.

೬೦. ಹೀಗೆ ಯೋಚಿಸುತ್ತಾ ಸಂತೋಷ ಸಂಕೋಚಗಳ ಮಧ್ಯದಲ್ಲಿದ್ದುಕೊಂಡು, ಲಕ್ಷ್ಮಣನು ಸೀತೆಯ ಆಶ್ರಮಕ್ಕೆ ಹೋದನು.

೬೧-೬೨. ರಥದಿಂದಿಳಿದು ಕಣ್ಣೀರಿನಿಂದ ಕೂಡಿದ ಕಣ್ಣುಳ್ಳವನಾಗಿ ಆರ್ಯೆ, ಪೂಜ್ಯೆ, ಭಗವತಿ, ಶುಭೆ ಎಂದು ಕೂಗುತ್ತಾ ಬಂದನು. ಮತ್ತು ನಡುಗುತ್ತಾ ಆಕೆಯ ಪಾದಗಳ ಮೇಲೆ ಬಿದ್ದನು. ಅನಂತರ ಆಕೆಯು ಪ್ರೀತಿಯಿಂದ ಎಬ್ಬಿಸಿದಳು.

**॥ ಸೀತೋವಾಚ ॥**

**ಕಿಮರ್ಥಮಾಗತಸ್ತ್ವಮ್ಯ ವನಂ ಮುನಿಜನಪ್ರಿಯಂ ।**
**ಆಸ್ತೇ ಸ ಕುಶಲೀ ದೇವಃ ಕೌಸಲ್ಯಾಶುಕ್ತಿಮೌಕ್ತಿಕಃ ॥ ೬೩ ॥**

**ಅರೋಷೋ ಮಯಿ ಕಚ್ಚಿತ್ಸ ಕೀರ್ತ್ಯಾ ಕೇವಲಯಾ ಹೃತಃ ।**
**ಕೀರ್ತ್ಯತೇ ಸರ್ವಲೋಕೈಶ್ಚ ಕಲ್ಯಾಣಗುಣಸಾಗರಃ ॥ ೬೪ ॥**

**ಅಕೀರ್ತಿಭೀತಿಮಾಪನ್ನೋ ಹಂತುಂ ಮಾಂ ತ್ವಾಂ ನಿಯುಕ್ತವಾನ್ ।**
**ಯದಿ ತತೋಽಪಿ ಲೋಕೇಷು ಕೀರ್ತಿಸ್ತಸ್ಯಾಮಲಾ ಭವೇತ್ ॥ ೬೫ ॥**

**ಮೃತ್ವಾಪಿ ಪತಿಸತ್ಕೀರ್ತಿಂ ಕುರ್ವತ್ಯಾ ಮೇ ಹಿ ಸುಸ್ಥಿರಾಂ ।**
**ಪತಿಸಾಮೀಪ್ಯಮೇವಾಶು ಭೂಯಾದೇವ ಹಿ ದೇವರ ॥ ೬೬ ॥**

**ತ್ಯಕ್ತಯಾಪಿ ಮಯಾ ತೇನ ನಾಸೌ ತ್ಯಕ್ತೋ ಮನಾಗಪಿ ।**
**ಫಲಂ ಹಿ ಸಾಧನಾಯತ್ತಂ ಹೇತುಃ ಫಲವಶೋ ನ ತು ॥ ೬೭ ॥**

---

೬೩. ಸೀತೆಯು ಹೇಳಿದಳು:—ಎಲೈ! ಲಕ್ಷ್ಮಣನೇ, ನೀನು ಇಲ್ಲಿಗೆ ಬಂದ ಕಾರಣವೇನು? ಆ ಶ್ರೀರಾಮನು ಸೌಖ್ಯವೆಂದಿರುತ್ತಾನೆಯೇ?

೬೪. ಆ ಶ್ರೀರಾಮನು ನನ್ನಲ್ಲಿ ಕೋಪವನ್ನು ಬಿಟ್ಟಿದ್ದಾನೆಯೇ? ಎಲ್ಲ ಜನಗಳೂ ಅವನನ್ನು ಕೀರ್ತಿಸುತ್ತಾರೆಯೇ?

೬೫. ಅಪಕೀರ್ತಿಯ ಹೆದರಿಕೆಯಿಂದ ನನ್ನನ್ನು ಕೊಲ್ಲಲು ನಿನ್ನನ್ನು ಕಳುಹಿಸಿದನು.

೬೬. ಆದ್ದರಿಂದ ಅವನಿಗೆ ಕೀರ್ತಿಯು ಹೆಚ್ಚುವ ಪಕ್ಷದಲ್ಲಿ ಸತ್ತಾದರೂ ಅವನ ಕೀರ್ತಿಯನ್ನು ಹೆಚ್ಚಿಸುತ್ತೇನೆ ಅನಂತರ ಆ ಪತಿಯ ಸಾನ್ನಿಧ್ಯವು ಬೇಗ ಸಿಕ್ಕುವುದು.

೬೭. ಅವನು ನನ್ನನ್ನು ಬಿಟ್ಟರೂ ನಾನು ಸ್ವಲ್ಪವೂ ಆತನನ್ನು ಬಿಟ್ಟಿರುವುದಿಲ್ಲ. ಫಲ ಬರಬೇಕಾದರೆ ಕಾರಣವಿದ್ದೇ ತೀರಬೇಕು ಕಾರಣವಿದ್ದರೆ ಫಲ ಬರಲೇಬೇಕೆಂಬ ನಿಯಮವಿಲ್ಲ.

ಕೌಸಲ್ಯಾ ಶಲ್ಯಶೂನ್ಯಾಸೌ ಕೃಪಾಪೂರ್ಣಾ ಸದಾ ಮಯಿ ।
ಆಸ್ತೇ ಕುಶಲಿನೀ ಯಸ್ಯಾಃ ಪುತ್ರಸ್ತ್ರೈಲೋಕ್ಯಪಾಲಕಃ ॥ ೬೮ ॥

ಸರ್ವೇ ಕುಶಲಿನಸ್ಸಂತಿ ಭರತಾದ್ಯಾಶ್ಚ ಬಾಂಧವಾಃ ।
ಸುಮಿತ್ರಾ ಚ ಮಹಾಭಾಗಾ ಯಸ್ಯಾಃ ಪ್ರಾಣಾಧಿಕಂ ಪ್ರಿಯಾ ॥ ೬೯ ॥

ಮದ್ವತ್ಕಿಂ ತ್ವಮಪಿ ತ್ಯಕ್ತಃ ಸರ್ವಲೋಕೇಷು ಕೀರ್ತಯೇ ।
ರಾಜ್ಞಃ ಕಿಂ ದುಸ್ತ್ಯಜಂ ತಸ್ಯ ಸ್ವಾತ್ಮಾಪಿ ಯಸ್ಯ ನ ಪ್ರಿಯಃ ॥ ೭೦ ॥

ಇತ್ಯೇವಂ ಬಹುಧಾ ಪೃಷ್ಟಸ್ತಯಾ ರಾಮಾನುಜಸ್ಸ ತಾಂ ।
ಉವಾಚ ಕುಶಲೀ ದೇವಃ ಕುಶಲಂ ತ್ವಯಿ ಪೃಚ್ಛತಿ ॥ ೭೧ ॥

ಕೌಸಲ್ಯಾ ಚ ಸುಮಿತ್ರಾ ಚ ಯಾಶ್ಚಾನ್ಯಾ ರಾಜಯೋಷಿತಃ ।
ಪಪ್ರಚ್ಛುಃ ಕುಶಲಂ ದೇವಿ ಪ್ರೀತ್ಯಾ ತ್ವಾಮಾಶಿಷಾ ಸಹ ॥ ೭೨ ॥

ಕುಶಲಪ್ರಶ್ನಪೂರ್ವಂ ಹಿ ತವ ಪಾದಾಭಿವಂದನಂ ।
ನಿವೇದಯಾಮಿ ಶತ್ರುಘ್ನಭರತಾಭ್ಯಾಂ ಕೃತಂ ಶುಭೇ ॥ ೭೩ ॥

---

೬೮. ಕೃಪೆಯಿಂದ ಕೂಡಿರುವ ಕೌಸಲ್ಯೆಗೆ ದುಃಖವಿಲ್ಲವೇ? ಆ ತ್ರಿಲೋಕಾಧಿಪತಿಯ ತಾಯಿಯು ಕ್ಷೇಮವೇ?

೬೯. ಭರತನೇ ಮೊದಲಾದ ಬಂಧುಗಳು ಕ್ಷೇಮವೇ? ನನ್ನನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಕಾಣುತ್ತಿದ್ದ ಆ ಸುಮಿತ್ರೆಯು ಚೆನ್ನಾಗಿರುವಳೇ?

೭೦. ಕೀರ್ತಿಗೋಸ್ಕರ ರಾಮನು ನನ್ನಂತೆ ನಿನ್ನನ್ನೂ ಬಿಟ್ಟುಬಿಟ್ಟನೇ? ಆ ರಾಜನು ಕೀರ್ತಿಗೋಸ್ಕರ ಯಾವುದನ್ನಾದರೂ ಬಿಡುತ್ತಾನೆ. ತನ್ನ ಪ್ರಾಣವೇ ಲಕ್ಷ್ಯವಿಲ್ಲ.

೭೧. ಇದೇ ಮುಂತಾಗಿ ಕೇಳಲು, ಲಕ್ಷ್ಮಣನು ಹೇಳಿದನು. ಆ ದೇವನು ಕುಶಲಿಯು. ನಿನ್ನ ಕುಶಲವನ್ನು ಕೇಳಿದನು.

೭೨. ಕೌಸಲ್ಯೆ ಸುಮಿತ್ರೆಯೇ ಮೊದಲಾದವರು ನಿನ್ನ ಕುಶಲವನ್ನು ಪ್ರೀತಿಯಿಂದ ಕೇಳಿ ಆಶೀರ್ವದಿಸಿದರು.

೭೩. ಭರತ ಶತ್ರುಘ್ನರು ಕುಶಲ ಪ್ರಶ್ನೆಯನ್ನು ಕೇಳಿ ನಿನಗೆ ಪಾದಾಭಿವಂದನವನ್ನು ಹೇಳಿದರು.

ಗುರುಭಿರ್ಗುರುಪತ್ನೀಭಿಃ ಸರ್ವಾಭಿರಪಿ ತೇ ಶುಭೇ ।
ದತ್ತಾಶೀಃ ಕುಶಲಪ್ರಶ್ನಃ ಕೃತಶ್ಚ ತ್ವಯಿ ಜಾನಕಿ ॥ ೭೪ ॥

ಆಕಾರಯತಿ ದೇವಸ್ತ್ವಾಂ ನಿರ್ವ್ಯಲೀಕಃ ಕೃತಾತ್ಮವಾನ್ ।
ಅಲಬ್ಧಾತ್ಮರತಿಸ್ತ್ವತ್ತೋಽನ್ಯತ್ರ ಸರ್ವತ್ರ ಭಾಮಿನಿ ॥ ೭೫ ॥

ಶೂನ್ಯಾ ಏವ ದಿಶಸ್ಸರ್ವಾಸ್ತ್ವಾಂ ವಿನಾ ಜನಕಾತ್ಮಜೇ ।
ಪಶ್ಯನ್ ರೋದಿತಿ ನಾಥೋ ನೋ ರೋದಯನ್ನಿತರಾನಪಿ ॥ ೭೬ ॥

ಯತ್ರ ದೇವಿ ಸ್ಥಿತಾಸಿ ತ್ವಂ ನಿತ್ಯಂ ಸ್ಮರತಿ ರಾಘವಃ ।
ಅಶೂನ್ಯಂ ತು ತಮೇವಾಸೌ ಮನ್ಯಮಾನೋ ವಿದೇಹಜೇ ॥ ೭೭ ॥

ಧನ್ಯೋಽಯಮಾಶ್ರಮೋ ಜಾತೋ ವಾಲ್ಮೀಕೇರ್ಯತ್ರ ಜಾನಕೀ ।
ಕಾಲಂ ಕ್ಷಪತಿ ವಾರ್ತಾಭಿರ್ಮದೀಯಾಭಿರ್ವದನ್ನಿತಿ ॥ ೭೮ ॥

ಉಕ್ತವಾನ್ಯದ್ರುದನ್ಕಿಂಚಿತ್ಸ್ವಾಮೀ ನಸ್ತ್ವಯಿ ತಚ್ಛೃಣು ।
ವ್ಯಕ್ತೀಭವತಿ ವಕ್ತುರ್ಯದ್ಧೃದ್ಗತಂ ತದಸಂಶಯಂ ॥ ೭೯ ॥

---

೭೪. ಗುರುಗಳು ಗುರುಪತ್ನೀಯರು ಎಲ್ಲರೂ ಆಶೀರ್ವದಿಸಿ ಕುಶಲವನ್ನು ಕೇಳಿದರು.

೭೫. ತನ್ನನ್ನು ತಾನು ತಿಳಿದುಕೊಂಡ, ಅಪ್ರಿಯವನ್ನು ಬಿಟ್ಟ, ದೇವನಾದ ಶ್ರೀರಾಮನು ನಿನ್ನನ್ನು ಕರೆಯುತ್ತಾನೆ. ಆವನು ನಿನ್ನನ್ನು ಬಿಟ್ಟ ಮೇಲೆ ಯಾವ ವಿಷಯದಲ್ಲಿಯೂ ಸುಖಿಯಾಗಿಲ್ಲ.

೭೬. ನೀನಿಲ್ಲದುದರಿಂದ ದಿಕ್ಕೇ ಆತನಿಗೆ ಶೂನ್ಯವಾಗಿವೆ. ನೋಡುತ್ತಿದ್ದಂತೆಯೇ ತಾನು ದುಃಖಿಸುತ್ತಾ ಇತರರೂ ದುಃಖಿಸುವಂತೆ ಮಾಡುತ್ತಾನೆ.

೭೭. ನೀನಿದ್ದ ಸ್ಥಳವನ್ನು ದಿನವೂ ರಾಘವನು ಸ್ಮರಿಸಿಕೊಳ್ಳುತ್ತಾನೆ. ಆ ಜಾಗದಲ್ಲಿ ನೀನು ಇರುವಂತೆಯೇ ತಿಳಿದು ನಡೆಯುತ್ತಿದ್ದಾನೆ.

೭೮. ವಾಲ್ಮೀಕಿಯ ಆಶ್ರಮದಲ್ಲಿ ಸೀತೆಯು ಇದ್ದುಕೊಂಡು ನನ್ನ ಮಾತುಗಳಿಂದ ಕಾಲವನ್ನು ಕಳೆಯುತ್ತಿರುವುದರಿಂದ ಆ ಆಶ್ರಮವು ಧನ್ಯವೆನ್ನುತ್ತಿದ್ದಾನೆ.

೭೯. ಆ ರಾಮನು ಅಳುತ್ತಲೇ ಇವೆಲ್ಲವನ್ನೂ ನನ್ನಲ್ಲಿ ಹೇಳಿದುದರಿಂದ ಆವನ ಮನಸ್ಸಿನಲ್ಲಿರುವ ದುಃಖವೂ ಪ್ರೀತಿಯೂ ಗೊತ್ತಾಗುತ್ತಿವೆ.

ಲೋಕೋ ವದತಿ ಮಾಮೇವ ಸರ್ವೇಷಾಮೀಶ್ವರೇಶ್ವರಂ ।
ಅಹಂ ತ್ವದೃಷ್ಟಮೇವೈಷಾಂ ಸ್ವತಂತ್ರಂ ಕಾರಣಂ ಬ್ರುವೇ ॥ ೪೦ ॥

ಅದೃಷ್ಟಮೇವ ಕಾರ್ಯೇಷು ಸರ್ವೇಶೋಽಪ್ಯನುಗಚ್ಛತಿ ।
ಈಶನೀಯಾಃ ಕುತೋ ನೈತದನ್ವೀಯುಃ ಸುಖದುಃಖಯೋಃ ॥ ೪೧ ॥

ಧನುರ್ಭಂಗೇ ಮತೇರ್ಭ್ರಂಶೇ ಕೈಕೇಯ್ಯಾ ಮರಣೇ ಪಿತುಃ
ಅರಣ್ಯಗಮನೇ ತತ್ರ ಹರಣೇ ತವ ವಾರಿಧೇಃ ॥ ೪೨ ॥

ತರಣೇ ರಕ್ಷಸಾಂ ಭರ್ತುರ್ಮಾರಣೇಽಪಿ ರಣೇ ರಣೇ ।
ಸಹಾಯೀಭವನೇ ಮಹ್ಯಮೃಕ್ಷವಾನರರಾಕ್ಷಸಾಂ ॥ ೪೩ ॥

ಲಾಭೇ ತವ ಪ್ರತಿಜ್ಞಾಯಾಃ ಸತ್ಯತ್ವೇ ಚ ಸತೀಮಣೇ ।
ಪುನಃ ಸ್ವಬಂಧುಸಂಬಂಧೇ ರಾಜ್ಯಪ್ರಾಪ್ತೌ ಚ ಭಾಮಿನಿ ॥ ೪೪ ॥

ಪುನಃ ಪ್ರಿಯಾವಿಯೋಗೇ ಚ ಕಾರಣಂ ಯದವಾರಣಂ ।
ಪ್ರಸೀದತಿ ತದೇವಾದ್ಯ ಸಂಯೋಗೇ ಪುನರಾವಯೋಃ ॥ ೪೫ ॥

---

೪೦. ಲೋಕದಲ್ಲೆಲ್ಲರೂ ನನ್ನನ್ನು ಪರಮೇಶ್ವರನೆಂದೂ ಚಿತ್ಸ್ವರೂಪನೆಂದೂ ಹೇಳುತ್ತಾರೆ. ನಾನು ಇದೆಲ್ಲವೂ ಅದೃಷ್ಟಾಧೀನವೆಂದು ಅದಕ್ಕೆ ಕಾರಣವನ್ನು ಹೇಳುತ್ತೇನೆ.

೪೧. ಸರ್ವೇಶನೂ ಕೂಡ ತನ್ನ ಕಾರ್ಯದಲ್ಲಿ ಅದೃಷ್ಟವನ್ನು ಅನುಸರಿಸಬೇಕು. ಸುಖದುಃಖಗಳನ್ನು ಮತ್ತೊಬ್ಬರಿಂದ ಹೊಂದತಕ್ಕವರಲ್ಲಿ ಹೇಳತಕ್ಕದ್ದೇನು ?

೪೨-೪೫. ಜನಕನ ಮನೆಯಲ್ಲಿ ನಡೆದ ಧನುರ್ಭಂಗ, ಕೈಕೇಯಿಯ ಬುದ್ಧಿಯ ವೈಕಲ್ಯ, ತಂದೆಯ ಮರಣ, ಅರಣ್ಯವಾಸ, ಅಲ್ಲಿ ಸೀತೆಯ ಹರಣ, ಸಮುದ್ರವನ್ನು ದಾಟಿದುದು, ಯುದ್ಧದಲ್ಲಿ ರಾವಣನ ಹನನ, ಕಪಿ ರಾಕ್ಷಸರು ನನಗೆ ಸಹಾಯಮಾಡಿದುದು, ರಾಜ್ಯ ಲಾಭ, ಮತ್ತೆ ನಿನ್ನನ್ನು ಬಿಟ್ಟದು, ಇವುಗಳಲ್ಲಿ ದೈವದ ಕಾರಣವು ಅನಿವಾರ್ಯವಾದುದು. ಅದೇ ಕಾರಣವು ಪುನಃ ನಮ್ಮಿಬ್ಬರ ಸೇರುವಿಕೆಯಲ್ಲೂ ಎದ್ದು ನಿಲ್ಲುತ್ತದೆ.

ವೇದೋಽನ್ಯಥಾ ಕೃತೋ ಯೇನ ಲೋಕೋತ್ಪತ್ತಿಲಯೋ ಯತಃ ।
ಲೋಕಾಸನುಗತಸ್ತಸ್ಮಾತ್ಕಾರಣಂ ಪ್ರಥಮಂ ತ್ವಹಂ ॥ ೮೬ ॥

ಅದೃಷ್ಟಮನುವರ್ತಂತೇ ಲೋಕಾಸ್ಸಂಪ್ರತಿಬೋಧಕಾಃ ।
ಭೋಗೇನ ಕ್ಷೀಯತೇಽದೃಷ್ಟಂ ತತ್ತು ಭುಕ್ತಂ ತ್ವಯಾ ವನೇ ॥ ೮೭ ॥

ಸ್ನೇಹೋಽಕಾರಣಕಸ್ಸೀತೇ ವರ್ಧಮಾನೋ ಮಮ ತ್ವಯಿ ।
ಲೋಕಾದೃಷ್ಟೇ ತಿರಸ್ಕೃತ್ಯ ತ್ವಾಮಾಹ್ವ **ಯತ** ಆದರಾತ್ ॥ ೮೮ ॥

ಶಂಕಿತೇನಾಪಿ ದೋಷೇಣ ಸ್ನೇಹಸ್ಯೈರ್ಮಲ್ಯಮುಜ್ಞನಂ ।
ಭವತೀತಿ ಸ ವೈ ಶುದ್ಧ ಆಸ್ವಾದ್ಯೋ ವಿಬುಧೈಸ್ಸದಾ ॥ ೮೯ ॥

ಸ್ನೇಹಶುದ್ಧಿರಿಯಂ ಭದ್ರೇ ಕೃತಾ ಮೇ ತ್ವಯಿ ನಾನ್ಯಥಾ ।
ಮಂತವ್ಯಂ ರಕ್ಷಿತೋಽಸ್ಯೇಷ ಲೋಕಶ್ಶಿಷ್ಟಾನುವರ್ತಿನಾ ॥ ೯೦ ॥

---

೮೬. ಯಾವನು ವೇದವನ್ನೇ ಮಾರ್ಪಡಿಸಿದನೋ, ಯಾವನು ಲೋಕದ ಉತ್ಪತ್ತಿ ಲಯಗಳಿಗೆ ಕಾರಣನೋ, ಅದನ್ನು ಜನಗಳು ತಿಳಿದಿಲ್ಲ. ಅದು ಅದೃಷ್ಟವನ್ನೇ ಕಾರಣವನ್ನಾಗಿ ತೋರಿಸುತ್ತದೆ. ಅವನ್ನು ತಿಳಿಯದ ಲೋಕವು ನನ್ನನ್ನು ಕಾರಣವನ್ನಾಗಿ ಹೇಳುತ್ತದೆ.

೮೭. ಯಾವ ಪ್ರಾಣಿಯೇ ಆಗಲಿ ಅದೃಷ್ಟವನ್ನು ಅನುಸರಿಸಿಯೇ ತೀರಬೇಕು. ಆ ಅದೃಷ್ಟವು ಭೋಗದಿಂದ ನಾಶವಾಗುತ್ತದೆ. ಆ ಅದೃಷ್ಟವು ನೀನು ಕಾಡಿನಲ್ಲಿ ಅನುಭವಿಸಿ ಕಳೆದುಹೋಯಿತು.

೮೮. ಎಲೈ ಸೀತೆಯೇ, ನನಗೂ ನಿನಗೂ ಅಕಾರಣವಾದ ಸ್ನೇಹವು ಬೆಳೆಯಿತು. ಆ ಸ್ನೇಹವು ಈಗ ಲೋಕ ಅದೃಷ್ಟಗಳನ್ನು ತಿರಸ್ಕರಿಸಿ ನಿನ್ನನ್ನು ಪ್ರೀತಿಯಿಂದ ಕರೆಯುತ್ತದೆ.

೮೯. ಮನುಷ್ಯನಲಿ ದೋಷದ ಶಂಕೆಯುಂಟಾದರೂ ಸ್ನೇಹದಿಂದ ಅದನ್ನು ಶುದ್ಧಿಮಾಡಿಕೊಳ್ಳಬೇಕು. ಅದೇನೇ ಪಂಡಿತರು ಮೆಚ್ಚತಕ್ಕ ದಾರಿ.

೯೦. ಆ ಸ್ನೇಹದ ಶುದ್ಧಿಯನ್ನು ನಿನ್ನ ವಿಷಯದಲ್ಲಿ ನಾನು ಮಾಡಿಕೊಂಡೇನೇ ಹೊರತು ಬೇರೆಯಲ್ಲವೆಂದು ತಿಳಿ. ಜನವು ಶಿಷ್ಟರನ್ನೇ ಅನುಸರಿಸುವುದರಿಂದ ನಮ್ಮ ಆಚರಣೆಯು ಆ ಲೋಕವನ್ನು ಕಾಪಾಡಿದಂತಾಯಿತು.

ತ್ವಯೋರ್ನಿಂದಯಾ ದೇವಿ ಸರ್ವಾವಸ್ಥಾಸು ಶುದ್ಧಯೋಃ ।
ಲೋಕೋ ನಶ್ಯೇದ್ಧಿ ಸಂಮೂಢಶ್ಚರಿತ್ರೈರ್ಮಹತಾಮಯಂ　　॥ ೯೧ ॥

ಆವಯೋರುಜ್ಜ್ವಲಾ ಕೀರ್ತಿರಾವಯೋರುಜ್ಜ್ವಲೋ ರಸಃ ।
ಆವಯೋರುಜ್ಜ್ವಲೌ ವಂಶಾವಾವಯೋರುಜ್ಜ್ವಲಾಃ ಕ್ರಿಯಾಃ　　॥ ೯೨ ॥

ಭವೇಯುರಾವಯೋಃ ಕೀರ್ತಿಗಾಯಕಾ ಉಜ್ಜ್ವಲಾ ಭುವಿ ।
ಆವಯೋರ್ಭಕ್ತಿಮಂತೋ ಯೇ ತೇ ಯಾಸ್ಯಂತಂ ಭವಾಂಬುಧೇಃ ॥೯೩॥

ಇತ್ಯುಕ್ತ್ವಾ ಭವತೀ ತೇನ ಪ್ರೀಯಮಾಣೇನ ತೇ ಗುಣೈಃ ।
ಪತ್ಯುಃ ಪದಾಂಬುಜಂ ದ್ರಷ್ಟುಂ ಕರೋತು ಸದಯಂ ಮನಃ　　॥ ೯೪ ॥

ವಾಸಾಂಸಿ ರಮಣೀಯಾನಿ ಭೂಷಣಾನಿ ಮಹಾಂತಿ ಚ ।
ಅಂಗರಾಗಸ್ತಥಾ ಗಂಧಾ ಮನೋಜ್ಞಾಸ್ತ್ವಯಿ ಯೋಜಿತಾಃ　　॥ ೯೫ ॥

---

೯೧. ನಾವು ಸರ್ವ ಪ್ರಕಾರದಿಂದಲೂ ಶುದ್ಧರಾಗಿರಬೇಕು. ಲೋಕವು ನಿಂದಿಸುವುದನ್ನು ತಪ್ಪಿಸಿಕೊಂಡು ನಾವು ಶುದ್ಧಿ ಹೊಂದಬೇಕು. ಹಾಗಿಲ್ಲದಿದ್ದರೆ ತಿಳಿವಳಿಕೆಯಿಲ್ಲದೇ ಈ ಲೋಕವು ಮಹಾತ್ಮರ ಚರಿತ್ರೆಯನ್ನೇ ಅನುಸರಿಸಿಕ್ಕೊಂಡು ಅದನ್ನೇ ಪ್ರಮಾಣವನ್ನಾಗಿಟ್ಟುಕ್ಕೊಂಡು ನಡೆಯುವುದರಿಂದ ನಮ್ಮ ನಡತೆಯು ಲೋಕಕ್ಕೆ ಮೇಲ್ಪಂಕ್ತಿಯಾದುದರಿಂದ ನಮ್ಮ ತಪ್ಪಿನಿಂದ ಲೋಕವು ನಾಶವಾದೀತು.

೯೨-೯೩. ನಮ್ಮ ಕೀರ್ತಿಯೂ, ನಮ್ಮ ರಸವೂ. ವಂಶವೂ, ನಮ್ಮ ಕೆಲಸಗಳೂ, ಬಹು ಪ್ರಕಾಶವಾಗುತ್ತವೆ. ನಮ್ಮ ಕೀರ್ತಿಯನ್ನು ಗಾನಮಾಡುವವರು ಉಜ್ವಲರಾಗಿ ಗಾನಮಾಡುತ್ತಾರೆ. ನಮ್ಮಲ್ಲಿ ಯಾರು ಭಕ್ತಿಯನ್ನಿಟ್ಟಿರುವರೋ ಅವರು ಸಂಸಾರಸಾಗರವನ್ನು ದಾಟುತ್ತಾರೆ.

೯೪. ಸಂತೋಷಗೊಂಡು ರಾಮನು ನಿನ್ನ ವಿಷಯದಲ್ಲಿ ಹೀಗೆಂದು ಹೇಳಿದ್ದಾನೆ. ಆದ್ದರಿಂದ ಗಂಡನ ಪಾದಕಮಲವನ್ನು ನೋಡಲು ಮನಸ್ಸಿನಲ್ಲಿ ದಯೆಯಿಡು.

೯೫. ಒಳ್ಳೆಯ ಬಟ್ಟೆಗಳನ್ನೂ, ಉತ್ತಮವಾದ ಒಡವೆಗಳನ್ನೂ, ಅಂಗರಾಗ ಸುಗಂಧಗಳನ್ನೂ ನಿನಗೆ ಕೊಟ್ಟು ಕಳುಹಿಸಿದ್ದಾನೆ.

ರಥೋ ದಾಸ್ಯಶ್ಚ ರಾಮೇಣ ಪ್ರೇಷಿತಾ ಉತ್ಸವಾಯ ತೇ ।
ಛತ್ರಂ ಚ ಚಾಮರೇ ಶುಭ್ರೇ ಗಜಾ ಅಶ್ವಾಶ್ಚ ಶೋಭನೇ ॥ ೯೬ ॥

ಸ್ತೂಯಮಾನಾ ದ್ವಿಜಶ್ರೇಷ್ಠೈಃ ಸೂತಮಾಗಧವಂದಿಭಿಃ ।
ವಂದ್ಯಮಾನಾ ಪುರಸ್ತ್ರೀಭಿಃ ಸೇವ್ಯಮಾನಾ ಚ ಯೋದ್ಧೃಭಿಃ ॥ ೯೭ ॥

ಪುಷ್ಪೈಸ್ಸಂಛಾದ್ಯಮಾನಾ ಚ ದೇವದೇವಾಂಗನಾದಿಭಿಃ ।
ಧನಾದಿ ದದತೀ ತೇಭ್ಯೋ ದ್ವಿಜಾತಿಭ್ಯೋ ಯಥೋಚಿತಂ ॥ ೯೮ ॥

ಗಜಾರೂಢೌ ಕುಮಾರೌ ಚ ಪುರಸ್ಕೃತ್ಯ ಜನೇಶ್ವರಿ ।
ಮಯಾನುಗಮ್ಯಮಾನಾ ಚ ಗಚ್ಛಾಯೋಧ್ಯಾಂ ನಿಜಾಂ ಪುರೀಂ ॥ ೯೯ ॥

ತ್ವಯಿ ತತ್ರ ಗತಾಯಾಂ ತು ಸಂಗತಾಯಾಂ ಪ್ರಿಯೇಣ ತೇ ।
ಸರ್ವಾಸಾಂ ರಾಜನಾರೀಣಾಮಾಗತಾನಾಂ ಚ ಸರ್ವತಃ ॥ ೧೦೦ ॥

ಸರ್ವಮುನಿಪತ್ನೀನಾಂ ಕೌಸಲ್ಯಾನಾಂ ತಥಾ ಮುಖೇ ।
ಮಂಗಳೈರ್ವಾದ್ಯಗೀತಾದ್ಯೈರ್ಭವತ್ವದ್ಯ ಮಹೋತ್ಸವಃ ॥ ೧೦೧ ॥

---

೯೬. ರಥ, ದಾಸಿಯರು, ಛತ್ರ, ಚಾಮರ, ಆನೆ ಕುದುರೆಗಳನ್ನು ರಾಮನು ಕಳುಹಿಸಿರುವನು.

೯೭-೯೯. ಬ್ರಾಹ್ಮಣರಾದ ಹೊಗಳು ಭಟರುಗಳಿಂದ ಹೊಗಳಲ್ಪಡುತ್ತ, ಪಟ್ಟಣ ಸ್ತ್ರೀಯರಿಂದ ನಮಸ್ಕರಿಸಲ್ಪಡುತ್ತ, ಮುದುಕಿಯರಿಂದ ಸೇವಿಸಲ್ಪಡುತ್ತಾ, ದೇವತಾಸ್ತ್ರೀಯರಿಂದ ಪುಷ್ಪವೃಷ್ಟಿಮಾಡಿಸಿಕೊಳ್ಳುತ್ತಾ, ಅಲ್ಲಲ್ಲಿ ಬಂದ ಬ್ರಾಹ್ಮಣರಿಗೆ ಅವರ ಯೋಗ್ಯತೆಗೆ ತಕ್ಕಂತೆ ಹಣವನ್ನು ಕೊಡುತ್ತಾ, ಆನೆಯ ಮೇಲೆ ಕೂರಿಸಿ ಮಕ್ಕಳನ್ನು ಮುಂದೆ ಬಿಟ್ಟುಕೊಂಡು ನೀನು ಹಿಂದಿರುತ್ತ, ನಿನ್ನ ಹಿಂದೆ ನಾನು ಬರುತ್ತಿರುವುದು ರಮ್ಯವಾಗಿರಲು ಅಯೋಧ್ಯೆಗೆ ಹೊರಡು.

೧೦೦-೧೦೧. ನೀನು ಅಲ್ಲಿಗೆ ಹೋಗಿ ಪ್ರಿಯನೊಡನೆ ಸೇರಿದ ಮೇಲೆ ಎಲ್ಲಾ ಕಡೆಯಿಂದ ಬಂದಿರುವ ರಾಜಸ್ತ್ರೀಯರಿಗೂ, ಋಷಿಪತ್ನಿಯರಿಗೂ, ಕೋಸಲ ದೇಶದವರಿಗೂ ಮಹಾಸಂತೋಷವಾಗಲಿ.

॥ ಶೇಷ ಉವಾಚ ॥

ಇತಿ ವಿಜ್ಞಾಪನಾಂ ದೇವೀ ಶ್ರುತ್ವಾ ಸೀತಾ ತಮೂಹ ಚ ।
ನಾಹಂ ಕೀರ್ತಿಕರೀ ರಾಜ್ಞೋ ನಾಪಿ ಕೀರ್ತಿಃ ಸ್ವಯಂ ತ್ವಹಂ ॥ ೧೦೨ ॥

ಕಿಂ ಮಯಾ ತಸ್ಯ ಸಾಧ್ಯಂ ಸ್ಯಾದ್ಧರ್ಮಕಾಮಾರ್ಥಶೂನ್ಯಯಾ ।
ಸತ್ಯೇವಂ ಭವತಾಂ ಭೂಪೇ ಕೋ ವಿಶ್ವಾಸೋ ನಿರಂಕುಶೇ ॥ ೧೦೩ ॥

ಪ್ರತ್ಯಕ್ಷಾ ವಾ ಪರೋಕ್ಷಾ ವಾ ಭರ್ತುರ್ದೋಷಾ ಮನಸ್ಸ್ಥಿತಾಃ ।
ನ ವಾಚ್ಯಾ ಜಾತು ಮಾದೃಶ್ಯಾ ಕಲ್ಯಾಣಕುಲಜಾತಯಾ ॥ ೧೦೪ ॥

ಪಾಣಿಗ್ರಹಣಕಾಲೇ ಮೇ ಯದ್ರೂಪೋ ಹೃದಯೇ ಸ್ಥಿತಃ ।
ತದ್ರೂಪೋ ಹೃದಯಾನ್ನಾಸೌ ಕದಾಚಿದಪಸರ್ಪತಿ ॥ ೧೦೫ ॥

ಲಕ್ಷ್ಮಣೇಮೌ ಕುಮಾರೌ ಮೇ ತತ್ತೇಜೋಂಶಸಮುದ್ಭವೌ ।
ವಂಶಾಂಕುರೌ ಮಹಾವೀರೌ ಧನುರ್ವಿದ್ಯಾವಿಶಾರದೌ ॥ ೧೦೬ ॥

---

೧೦೨-೧೦೩. ಶೇಷನು ಹೇಳಿದನು :—ದೇವಿಯು ಈ ರೀತಿಯಾದ ವಿಜ್ಞಾಪನೆಯನ್ನು ಕೇಳಿ, ನಾನು ರಾಜನಿಗೆ ಕೀರ್ತಿ ತರತಕ್ಕವಳಲ್ಲ, ನಾನು ಕೀರ್ತಿರೂಪಳೂ ಅಲ್ಲ. ಧರ್ಮ, ಅರ್ಥ, ಕಾಮಗಳಿಂದ ಶೂನ್ಯಳಾದ ನನ್ನಿಂದ ಅವನಿಗೇನು ಉಪಕಾರವಾದೀತು ? ಇದಿರಲಿ, ನಿರಂಕುಶಾಧಿಕಾರಿಯಾದ ನಿಮ್ಮ ರಾಜನಲ್ಲಿ ನಂಬಿಕೆಯಾದರೂ ಯಾವುದಿದೆ ?

೧೦೪. ಪ್ರತ್ಯಕ್ಷವಾಗಿ ಕಾಣುತ್ತಿರಲಿ, ಪರೋಕ್ಷವಾಗಿ ತಿಳಿದಿರಲಿ, ಗಂಡನ ದುರ್ನಡತೆಯನ್ನು ಉತ್ತಮಕುಲದಲ್ಲಿ ಹುಟ್ಟಿದ ನನ್ನಂತಹವಳು ಹೇಳಬಾರದು.

೧೦೫. ಪಾಣಿಗ್ರಹಣ ಕಾಲದಲ್ಲಿ ಯಾವ ರೀತಿಯಾಗಿ ವಿಶ್ವಾಸದಿಂದ ಹೃದಯದಲ್ಲಿ ಪತಿಯ ಆಕಾರವನ್ನು ಧರಿಸಿದೆನೋ ಈಗಲೂ ಅದೇ ಆಕಾರವನ್ನು ಹೃದಯದಲ್ಲಿ ಧ್ಯಾನಿಸುತ್ತಿರುವೆನು. ಅಂತಹ ರೂಪವನ್ನು ಹೃದಯದಲ್ಲಿ ಧ್ಯಾನಿಸುತ್ತಿರುವೆನು. ಅಂತಹ ರೂಪವು ಹೃದಯದಿಂದ ಹೊರಟುಹೋಗಿಲ್ಲ.

೧೦೬-೧೦೭. ಅಯ್ಯಾ ಲಕ್ಷ್ಮಣ ! ಈ ಇಬ್ಬರು ಮಕ್ಕಳು ರಾಮನ ತೇಜಸ್ಸಿನಿಂದ ಹುಟ್ಟಿದವರು, ವಂಶವನ್ನು ಬೆಳಸುವವರು, ವೀರರು, ಧನುರ್ವಿದ್ಯಾವಿಶಾರದರು. ಇವರನ್ನು ತಂದೆಯ ಬಳಿಗೆ ಕರೆದುಕೊಂಡು ಹೋಗಿ ಪ್ರಯತ್ನದಿಂದ ಪುಷ್ಟಿಸಿ

ನೀತ್ವಾ ಪಿತುಸ್ಸಮೀಪಂ ತು ಲಾಲನೀಯೌ ಪ್ರಯತ್ನತಃ ।
ತಪಸಾರಾಧಯಿಷ್ಯಾಮಿ ರಾಮಂ ಕಾಮಮಿಹ ಸ್ಥಿತಾ ॥ ೧೦೭ ॥

ವಾಚ್ಯಂ ತ್ವಯಾ ಮಹಾಭಾಗ ಪೂಜ್ಯಪಾದಾಭಿವಂದನಂ ।
ಸರ್ವೇಭ್ಯಃ ಕುಶಲಂ ಚಾಪಿ ಗತ್ವೇತೋ ಮದಪೇಕ್ಷಯಾ ॥ ೧೦೮ ॥

ಪುತ್ರೌ ಸಮಾದಿಶತ್ಸೀತಾ ಗಚ್ಛತಂ ಪಿತುರಂತಿಕಂ ।
ಶುಶ್ರೂಷಣೀಯ ಏವಾಸೌ ಭವದ್ಭ್ಯಾಂ ಸ್ವಪದಪ್ರದಃ ॥ ೧೦೯ ॥

ಆಜ್ಞಪ್ತಾವಪ್ಯನಿಚ್ಛಂತೌ ತೌ ಕುಮಾರೌ ಕುಶೀಲವೌ ।
ವಾಲ್ಮೀಕಿವಚನಾತ್ತತ್ರ ಜಗ್ಮತುಶ್ಚ ಸಲಕ್ಷ್ಮಣೌ ॥ ೧೧೦ ॥

ವಾಲ್ಮೀಕೇರೇವ ಪಾದಾಬ್ಜಸಮೀಪಂ ತತ್ಸುತೌ ಗತೌ ।
ಲಕ್ಷ್ಮಣೋಽಪಿ ವವಂದೇ ತಂ ಗತ್ವಾ ಬಾಲಕಸಂಯುತಃ ॥ ೧೧೧ ॥

ವಾಲ್ಮೀಕಿರ್ಲಕ್ಷ್ಮಣಸ್ತೌ ಚ ಕುಮಾರೌ ಮಿಲಿತಾ ಅಮೀ ।
ಸಭಾಯಾಂ ಸಂಸ್ಥಿತಂ ರಾಮಂ ಜ್ಞಾತ್ವಾ ಜಗ್ಮತುರುತ್ಸುಕಾಃ ॥ ೧೧೨ ॥

---

ಕಾಪಾಡಿರಿ. ನಾನು ಈ ಆಶ್ರಮದಲ್ಲಿಯೇ ಇದ್ದುಕೊಂಡು ತಪಸ್ಸಿನಿಂದ ಆ ರಾಮನನ್ನು ಆರಾಧಿಸುತ್ತೇನೆ.

೧೦೮. ಇಲ್ಲಿಂದ ಹೋದಮೇಲೆ ಪೂಜ್ಯರಿಗೆಲ್ಲಾ ನಮಸ್ಕಾರವನ್ನೂ ಮಿಕ್ಕವರಿಗೆ ಕುಶಲವನ್ನೂ ಸಹ ತಿಳಿಸು.

೧೦೯. ಮಕ್ಕಳನ್ನು ಕರೆದು ಮಕ್ಕಳಿರಾ! ತಂದೆಯ ಬಳಿಗೆ ಹೋಗಿರಿ. ಅವನನ್ನು ಶುಶ್ರೂಷೆಮಾಡಿ. ನಿಮಗೆ ರಾಜ್ಯವನ್ನು ಕೊಡುತ್ತಾನೆಂದಳು.

೧೧೦. ಸೀತೆಯು ಅಪ್ಪಣೆಮಾಡಿದರೂ ಆ ಮಕ್ಕಳು ಒಲ್ಲದಿರಲು ವಾಲ್ಮೀಕಿಯ ಮಾತಿನಂತೆ ಲಕ್ಷ್ಮಣನ ಜೊತೆಯಲ್ಲಿ ಹೊರಟರು.

೧೧೧. ಅಯೋಧ್ಯೆಗೆ ಈ ಹುಡುಗರೂ ಲಕ್ಷ್ಮಣನೂ ಹೋದರು. ಅವರ ಹುಡುಗರು ವಾಲ್ಮೀಕಿಯ ಬಳಿಗೆ ಹೋದರು. ಲಕ್ಷ್ಮಣನೂ ಆ ವಾಲ್ಮೀಕಿಯ ಬಳಿಗೆ ಹೋಗಿ ನಮಸ್ಕರಿಸಿದನು.

೧೧೨. ಅನಂತರ ಸಭೆಯಲ್ಲಿರುವ ರಾಮನ ಬಳಿಗೆ ವಾಲ್ಮೀಕಿ, ಲಕ್ಷ್ಮಣ, ಹುಡುಗರೂ ಹೋದರು.

ಲಕ್ಷ್ಮಣಃ ಪ್ರಣಿಪತ್ಯಾಥ ಸೀತಾವಾಕ್ಯಾದಿ ಸರ್ವಶಃ ।
ಕಥಯಾಮಾಸ ರಾಮಾಯ ಹರ್ಷಶೋಕಯುತಸ್ಸುಧೀಃ ॥ ೧೧೩ ॥

ಸೀತಾಸಂದೇಶವಾಕ್ಯೇಭ್ಯೋ ರಾಮೋ ಮೂರ್ಛಾಂ ಸಮನ್ವಭೂತ್ ।
ಸಂಜ್ಞಾಮವಾಪ್ಯ ಚೋವಾಚ ಲಕ್ಷ್ಮಣಂ ನಯಕೋವಿದಂ ॥ ೧೧೪ ॥

॥ ಶ್ರೀರಾಮ ಉವಾಚ ॥

ಗಚ್ಛ ಮಿತ್ರ ಪುನಸ್ತತ್ರ ಯತ್ನೇನ ಮಹತಾ ಚ ತಾಂ ।
ಶೀಘ್ರಮಾನಯ ಭದ್ರಂ ತೇ ಮದ್ವಾಕ್ಯಾನಿ ನಿವೇದ್ಯ ಚ ॥ ೧೧೫ ॥

ಅರಣ್ಯೇ ಕಿಂ ತಪಸ್ಯಂತ್ಯಾ ಗತಿರನ್ಯಾ ವಿಚಿಂತಿತಾ ।
ಶ್ರುತಾ ದೃಷ್ಟಾಥವಾ ಮುಕ್ತೇ ಯನ್ನಾಗಚ್ಛಸಿ ಜಾನಕೀ ॥ ೧೧೬ ॥

ತ್ವದಿಚ್ಛಯಾ ತ್ವಮೇವೇತೋ ಗತಾರಣ್ಯಂ ಮುನಿಪ್ರಿಯಂ ।
ಪೂಜಿತಾ ಮುನಿಪತ್ನ್ಯಸ್ತಾ ದೃಷ್ಟಾ ಮುನಿಗಣಾಸ್ತ್ವಯಾ ॥ ೧೧೭ ॥

---

೧೧೩. ಲಕ್ಷ್ಮಣನು ರಾಮನಿಗೆ ನಮಸ್ಕರಿಸಿ ಹರ್ಷದಿಂದಲೂ ಶೋಕದಿಂದಲೂ ಕೂಡಿ ಅವನಿಗೆ ಎಲ್ಲವನ್ನೂ ಹೇಳಿದನು.

೧೧೪. ಸೀತೆಯು ಹೇಳಿ ಕಳುಹಿಸಿದ ಮಾತಿನಿಂದ ರಾಮನು ಮೂರ್ಛಿತನಾದನು. ಜ್ಞಾನ ಬಂದನಂತರ ಲಕ್ಷ್ಮಣನಿಗಿಂತೆಂದನು.

೧೧೫. ಶ್ರೀರಾಮನು ಹೇಳಿದನು :—ಎಲೈ ಮಿತ್ರನೇ ! ಮತ್ತೆ ಆಶ್ರಮಕ್ಕೆ ಹೋಗಿ ನನ್ನ ಮಾತುಗಳನ್ನು ಹೇಳಿ ಆಕೆಯನ್ನು ಹೇಗಾದರೂ ಮಾಡಿ ಕರೆದುಕೊಂಡು ಬಾ.

೧೧೬. ಎಲೈ ಸೀತೆಯೇ ! ಅರಣ್ಯದಲ್ಲಿಯೇ ತಪಸ್ಸನ್ನು ಮಾಡುತ್ತಿರುವುದರಿಂದ ಮೋಕ್ಷಕ್ಕೆ ಬೇರೆ ದಾರಿಯನ್ನು ಹುಡುಕಿದೆಯೇನು ? ನಾನು ಅಂತಹದನ್ನು ತೋರಿಸಿದ್ದೇನೆಯೇ ಅಥವಾ ಹೇಳಿದ್ದೇನೆಯೇ ? ನೀನೇತಕ್ಕೆ ಬರಲೊಲ್ಲೆ ?

೧೧೭. ನಿನ್ನ ಇಚ್ಛೆಯಿಂದಲೇ ನೀನು ಮುನಿಪ್ರಿಯವಾದ ಅರಣ್ಯಕ್ಕೆ ಹೋದೆ. ಮುನಿಪತ್ನಿಯರನ್ನು ನೋಡಿದುದೂ ಆಯಿತು. ಪೂಜಿಸಿದುದೂ ಆಯಿತು ನಿನ್ನ ಇಷ್ಟಾರ್ಥವು ನೆರವೇರಿತು. ಈಗೇಕೆ ಬರಲೊಲ್ಲೆ ?

ಪೂರ್ಣೋ ಮನೋರಥಸ್ತೇऽದ್ಯ ಕಿಂ ನಾಗಚ್ಛಸಿ ಭಾಮಿನಿ ।
ನ ದೋಷಂ ಮಯಿ ಪಶ್ಯೇಸ್ತ್ವಂ ಸ್ವಾತ್ಮೇಚ್ಛಯಾ ವಿಲೋಕನಾತ್॥೧೧೮॥

ಗತ್ವಾ ಗತ್ವಾಥ ವಾಮೋರು ಪತಿರೇವ ಗತಿಸ್ಸ್ತ್ರಿಯಾಃ ।
ನಿರ್ಗುಣೋऽಪಿ ಗುಣಾಂಭೋಧಿಃ ಕಿಂ ಪುನರ್ಮನಸೇಪ್ಸಿತಃ ॥ ೧೧೯ ॥

ಯಾ ಯಾ ಕ್ರಿಯಾ ಕುಲಸ್ತ್ರೀಣಾಂ ಸಾ ಸಾ ಪತ್ಯುಃ ಪ್ರತುಷ್ಟಯೇ ।
ಪೂರ್ವಮೇವ ಪ್ರತುಷ್ಟೋऽಹಮದ್ಯ ತು ಸುತರಾಂ ತ್ವಯಿ ॥ ೧೨೦ ॥

ಯಾಗೋ ಜಪಸ್ತಪೋ ದಾನಂ ವ್ರತಂ ತೀರ್ಥಂ ದಯಾದಿಕಂ ।
ದೇವಾಶ್ಚ ಮಯಿ ಸಂತುಷ್ಟೇ ತುಷ್ಟಮೇತದಸಂಶಯಂ ॥ ೧೨೧ ॥

॥ ಶೇಷ ಉವಾಚ ॥

ಇತಿ ಸಂದೇಶಮಾಪೀಯ ಸೀತಾಂ ಪ್ರತಿ ಜಗತ್ಪತೇಃ ।
ಆಹ ಲಕ್ಷ್ಮಣ ಆತ್ಮೇಶಮಾನತಃ ಪ್ರಣಯಾದ್ಧರೌ ॥ ೧೨೨ ॥

---

೧೧೮. ನನ್ನಲ್ಲಿಯೇನೂ ತಪ್ಪಿಲ್ಲ, ನಿನ್ನ ಇಚ್ಛೆಯಂತೆ ಮುನಿಪತ್ನಿಯರನ್ನು ನೋಡಿ ಬರಲು ಕಳುಹಿಸಿದೆನು ಅಷ್ಟೆ!

೧೧೯. ಹಾಗೆಯೇ ನೋಡುತ್ತಾ ಹೋದರೆ ಗಂಡನೇ ಹೆಂಡತಿಗೆ ಗತಿಯು. ನಿರ್ಗುಣನಾದರೂ ಅವನೇ ಗುಣಪೂರ್ಣನು. ಹೀಗಿರುವಲ್ಲಿ ಮನಸ್ಸಿನಂತೆ ದೊರೆತಿರುವ ಗಂಡನಲ್ಲಿ ಹೇಳತಕ್ಕದ್ದೇನಿದೆ?

೧೨೦. ಸ್ತ್ರೀಯರು ಯಾವ ಕೆಲಸಮಾಡಿದರೂ ಅದು ಗಂಡನನ್ನು ತೃಪ್ತಿಪಡಿಸುವುದಾಗಿರಬೇಕು. ನಾನು ಮೊದಲೇ ಸಂತೋಷಪಟ್ಟಿದ್ದೇನೆ. ಈಗಲಂತೂ ಬಹಳವಾಗಿ ಸಂತೋಷಪಟ್ಟಿದ್ದೇನೆ.

೧೨೧. ನಾನು ಸಂತೋಷಪಟ್ಟರೆ ನಿನ್ನ **ಯಾಗ** ಜಪ, ತಪಸ್ಸು, ದಾನ, ವ್ರತ, ತೀರ್ಥ, ದಯೆ ಮುಂತಾದುವುಗಳು ಸಾರ್ಥಕವಾಗುತ್ತವೆ. ನಾನು ಸಂತೋಷಪಟ್ಟರೆ ದೇವರೂ ಕೂಡ ಸಂತೋಷಹೊಂದುತ್ತಾನೆ, ಸಂಶಯವಿಲ್ಲ.

೧೨೨. ಶೇಷನು ಹೇಳಿದನು:—ಸೀತೆಗೆ ಹೇಳಬೇಕಾದ ಮಾತನ್ನು ಕೇ- ಲಕ್ಷ್ಮಣನು ನಮ್ರನಾಗಿ ರಾಮನಲ್ಲಿ ಇಂತೆಂದನು.

॥ ಲಕ್ಷ್ಮಣ ಉವಾಚ ॥

ಸೀತಾನಯನಮುದ್ದಿಶ್ಯ ಪ್ರಸನ್ನಸ್ತ್ವಂ ಯದೂಚಿವಾನ್ ।
ಕಥಯಿಷ್ಯಾಮಿ ತ್ವದ್ವಾಕ್ಯಂ ವಿನಯೇನ ಸಮನ್ವಿತಂ ॥ ೧೨೩ ॥

ಇತ್ಯುಕ್ತ್ವಾ ಪಾದಯೋರ್ನತ್ವಾ ರಘುನಾಥಸ್ಯ ಲಕ್ಷ್ಮಣಃ ।
ಜಗಾಮ ತ್ವರಿತಸ್ಸೀತಾಂ ರಥೇ ತಿಷ್ಠನ್ಮಹಾಜವೇ ॥ ೧೨೪ ॥

ವಾಲ್ಮೀಕಿಶ್ಶಿಶ್ರಿಯಯುತೌ ವೀಕ್ಷ್ಯ ರಾಮಪುತ್ರೌ ಮಹೌಜಸೌ ।
ಉವಾಚ ಸ್ಮಿತಮಾಧಾಯ ಮುಖಂ ಕೃತ್ವಾ ಮನೋಹರಂ ॥ ೧೨೫ ॥

॥ ವಾಲ್ಮೀಕಿರುವಾಚ ॥

ಯುವಾಂ ಪ್ರಗಾಯತಾಂ ಪುತ್ರೌ ರಾಮಚಾರಿತ್ರಮುದ್ಭುತಂ ।
ವೀಣಾಂ ವೈ ವಾದಯಂತೌ ವಾಂ ಕಲಗಾನೇನ ಶೋಭಿತಂ ॥ ೧೨೬ ॥

ಇತ್ಯುಕ್ತೌ ತೌ ಸುತೌ ರಾಮಚರಿತ್ರಂ ಬಹುಪುಣ್ಯದಂ ।
ಅಗಾಯತಾಂ ಮಹಾಭಾಗೌ ಸುವಾಕ್ಯಪದಚಿತ್ರಿತಂ ॥ ೧೨೭ ॥

---

೧೨೩. ಸೀತೆಯನ್ನುದ್ದೇಶಿಸಿ ಪ್ರೀತಿಯಿಂದ ನೀನು ಹೇಳಿದ ಮಾತನ್ನು ಆಕೆಗೆ ವಿನಯದಿಂದ ಹೇಳುತ್ತೇನೆ.

೧೨೪. ಲಕ್ಷ್ಮಣನು ಹೀಗೆಂದು ಹೇಳಿ ನಮಸ್ಕರಿಸಿ, ಸೀತೆಯನ್ನು ಕರೆತರಲು ವೇಗವುಳ್ಳ ರಥದಲ್ಲಿ ಕುಳಿತು ಹೊರಟನು.

೧೨೫. ವಾಲ್ಮೀಕಿಯು ತೇಜಸ್ವಿಗಳಾದ ಆ ಬಾಲಕರನ್ನು ನೋಡಿ ಸಂತೋಷ ಮುಖದಿಂದ ಇಂತೆಂದನು.

೧೨೬. ವಾಲ್ಮೀಕಿಯು ಹೇಳಿದರು :—ಎಲೈ ಬಾಲಕರಿರಾ! ವೀಣೆಯನ್ನು ವಾದಿಸುತ್ತಾ ಮಧುರಧ್ವನಿಯಿಂದ ರಾಮ ಚರಿತ್ರೆಯನ್ನು ಹಾಡಿರಿ.

೧೨೭. ಹೀಗೆ ಹೇಳಲು ಆ ಬಾಲಕರು ಆ ರಾಮಾಯಣವನ್ನು ಚೆನ್ನಾಗಿ ಗಾನಮಾಡಿದರು.

ಯಸ್ಮಿನ್ಧರ್ಮವಿಧಿಸ್ಸಾಕ್ಷಾತ್ಪಾತಿವ್ರತ್ಯಂ ತು ಯತ್ಸ್ಥಿತಂ ।
ಭ್ರಾತೃಸ್ನೇಹೋ ಮಹಾನ್ಯತ್ರ ಗುರುಭಕ್ತಿಸ್ತಥೈವ ಚ ॥ ೧೨೮ ॥

ಸ್ವಾಮಿಸೇವಕಯೋರ್ಯತ್ರ ನೀತಿರ್ಮೂರ್ತಿಮತೀ ಕಿಲ ।
ಅಧರ್ಮಕರ್ಕಶಾಸ್ತ್ರೀವ್ರಃ ಯತ್ರ ಸಾಕ್ಷಾದ್ರಘೂದ್ವಹಾತ್ ॥ ೧೨೯ ॥

ತದ್ಗಾನೇನ ಜಗದ್ವ್ಯಾಪ್ತಂ ದಿವಿ ದೇವಾ ಅಪಿ ಸ್ಮಿತಾಃ ।
ಕಿನ್ನರಾ ಅಪಿ ಯದ್ಗಾನಂ ಶ್ರುತ್ವಾ ಮೂರ್ಛಾಮಿತಾಃ ಕ್ಷಣಾತ್ ॥ ೧೩೦ ॥

ವೀಣಾಯಾ ರಣಿತಂ ಶ್ರುತ್ವಾ ತಾಳಮಾನೇನ ಶೋಭಿತಂ ।
ನಿಖಿಲಾ ಪರಿಷತ್ತತ್ರ ಶಾಲಭಂಜೀವ ಚಿತ್ರಿತಾ ॥ ೧೩೧ ॥

ಹರ್ಷಾದಶ್ರೂಣಿ ಮುಂಚಂತಿ ರಾಮಾದ್ಯಾ ಭೂಮಿಪಾಸ್ತದಾ ।
ತದ್ಗಾನಪಂಚಮಾಲಾಪಮೋಹಿತಾಶ್ಚಿತ್ರಿತೋಪಮಾಃ ॥ ೧೩೨ ॥

ತತ್ರ ರಾಮಸ್ಸುತೌ ದೃಷ್ಟ್ವಾ ಮಹಾಗಾನವಿಮೋಹಕೌ ।
ಅದಾತ್ತಾಭ್ಯಾಂ ಸುವರ್ಣಸ್ಯ ಲಕ್ಷಂ ಲಕ್ಷಂ ಪೃಥಕ್ಪೃಥಕ್ ॥ ೧೩೩ ॥

---

೧೨೮-೧೨೯. ಧರ್ಮದ ವಿಧಿಗಳೂ ಪಾತಿವ್ರತ್ಯದ ಮಹಿಮೆಯೂ, ಭ್ರಾತೃಸ್ನೇಹವೂ, ಗುರುಭಕ್ತಿಯೂ, ಸ್ವಾಮಿಸೇವಕರ ನೀತಿಯೂ, ಅಧರ್ಮಿಗಳ ಶಿಕ್ಷೆಯೂ ಯಾವ ರಾಮಾಯಣದಲ್ಲಿ ಸಾಕ್ಷಾತ್ತಾಗಿವೆಯೋ ಅದನ್ನು ಹಾಡಿದರು.

೧೩೦. ಆ ಗಾನವು ಜಗತ್ತನ್ನೇ ವ್ಯಾಪಿಸಿತು. ಅಂತರಿಕ್ಷದಲ್ಲಿ ದೇವತೆಗಳು ಸಂತೋಷಪಟ್ಟರು. ಕಿನ್ನರರೂ ಕೂಡ ಆ ಗಾನವನ್ನು ಕೇಳಿ ಕ್ಷಣಕಾಲ ಸಂತೋಷ ಮೂರ್ಛೆಯನ್ನು ಅನುಭವಿಸಿದರು.

೧೩೧. ತಾಳಲಯಗಳಿಂದ ಕೂಡಿದ ವೀಣೆಯ ಧ್ವನಿಯನ್ನು ಕೇಳಿ ಅಲ್ಲಿನ ಸಭೆಯು ಚಿತ್ರಿಸಿದ ಬೊಂಬೆಗಳಂತಿದ್ದಿತು.

೧೩೨. ಅಲ್ಲಿದ್ದ ರಾಮನೇ ಮುಂತಾದ ರಾಜರು, ಅವರ ಗಾನದ ಪಂಚಮಾಲಾಪನೆಯನ್ನು ಕೇಳಿ ಚಿತ್ರಿಸಿದಂತಾಗಿ ಸಂತೋಷದಿಂದ ಕಣ್ಣೀರು ಸುರಿಸುತ್ತಿದ್ದರು.

೧೩೩. ಆಗ ರಾಮನು ಮಕ್ಕಳ ಗಾನಕ್ಕೆ ಸಂತುಷ್ಟನಾಗಿ ಅವರಿಗೊಬ್ಬೊಬ್ಬರಿಗೂ ಒಂದೊಂದು ಲಕ್ಷ ವರಹಗಳನ್ನು ಕೊಟ್ಟನು.

ತದಾ ದಾನಪರಂ ದೃಷ್ಟ್ವಾ ವಾಲ್ಮೀಕಿಂ ಮುನಿಸತ್ತಮಂ ।
ಅಬ್ರೂತಾಂ ಪ್ರಹಸಂತೌ ತೌ ಕಿಂಚಿದ್ವಕ್ರಭ್ರುವೋರ್ಧರೌ ॥ ೧೩೪ ॥

॥ ಕುಶಲವಾವೂಚತುಃ ॥

ಮುನೇ ಮಹಾನಯೋಽನೇನ ಕ್ರಿಯತೇ ಭೂಮಿಪೇನ ವೈ ।
ಯುವಾವಾಭ್ಯಾಂ ಸುವರ್ಣಾನಿ ದಾತುಮಿಚ್ಛತಿ ಲೋಭಯನ್ ॥ ೧೩೫ ॥

ಪ್ರತಿಗ್ರಹೋ ಬ್ರಾಹ್ಮಣಾನಾಂ ಶಸ್ಯತೇ ನೇತರೇಷು ವೈ ।
ಪ್ರತಿಗ್ರಹಪರೋ ರಾಜಾ ನರಕಾಯೈವ ಕಲ್ಪತೇ ॥ ೧೩೬ ॥

ಆವಯೋಃ ಕೃಪಯಾ ಮುಕ್ತಂ ರಾಜ್ಯಂ ಭುಂಕ್ತೇ ಮಹೀಪತಿಃ ।
ಕಥಂ ದಾತುಂ ಸುವರ್ಣಾನಿ ವಾಂಛತಿ ಶ್ರೇಯಸಾಂಚಿತಃ ॥ ೧೩೭ ॥

ಇತ್ಯುಕ್ತವಂತೌ ತೌ ದೃಷ್ಟ್ವಾ ವಾಲ್ಮೀಕಿಃ ಕೃಪಯಾ ಯುತಃ ।
ಅಶಂಸದ್ಯುಷ್ಮತ್ಪಿತರಂ ಜಾನೀಥಾ ನೀತಿವಿತ್ತಮೌ ॥ ೧೩೮ ॥

---

೧೩೪. ರಾಮನು ದಾನಮಾಡಲು ಆ ಹುಡುಗರು ನಗುತ್ತಾ ಹುಬ್ಬು ಗಂಟಿಕ್ಕಿಕೊಂಡು ವಾಲ್ಮೀಕಿಯನ್ನು ನೋಡುತ್ತಾ ಇಂತೆಂದರು.

೧೩೫. ಕುಶಲವರು ಹೇಳಿದರು :—ಎಲೈ ಋಷಿಯೇ ! ನಮಗೆ ಹಣವನ್ನು ಕೊಡುತ್ತಾ, ಆಸೆ ತೋರಿಸುತ್ತಾ, ಈ ರಾಜನು ಅನ್ಯಾಯವನ್ನು ಮಾಡುತ್ತಿದ್ದಾನೆ.

೧೩೬. ದಾನ ತೆಗೆದುಕೊಳ್ಳುವುದು ಬ್ರಾಹ್ಮಣನಿಗೆ ಯೋಗ್ಯವಾಗಿದೆ. ಕ್ಷತ್ರಿಯನು ದಾನ ತೆಗೆದುಕೊಂಡರೆ ನರಕಭಾಗಿಯಾಗುತ್ತಾನೆ.

೧೩೭. ನಾವು ಕೃಪೆಯಿಂದ ಈ ರಾಜ್ಯವನ್ನು ಕೊಡುವ ಮೊತ್ತಿಗೆ ಈ ರಾಜ್ಯವನ್ನು ಅನುಭವಿಸುತ್ತಿದ್ದಾನೆ. ಶ್ರೇಯಸ್ಸನ್ನು ಕೋರತಕ್ಕ ಈತನು ದಾನಕೊಡುವುದಕ್ಕೆ ಬರುತ್ತಾನಲ್ಲ .

೧೩೮. ಇಂತು ಹೇಳಿದ ಆ ಮಕ್ಕಳಿಗೆ ವಾಲ್ಮೀಕಿಯು ದಯಾಯುಕ್ತನಾಗಿ ಇವನು ನಿಮ್ಮ ತಂದೆಯೆಂದು ತಿಳಿಯಿರಿ ಎಂದು ಹೇಳಿದನು.

ಇತಿ ಶ್ರುತ್ವಾ ಮುನೇರ್ವಾಕ್ಯಂ ಬಾಲಕೌ ಪಿತೃಪಾದಯೋಃ ।
ಲಗ್ನೌ ವಿನಯಸಂಯುಕ್ತೌ ಮಾತೃಭಕ್ತ್ಯತಿನಿರ್ಮಲೌ ॥ ೧೩೯ ॥

ರಾಮೋ ಬಾಲೌ ದೃಢಂ ಸ್ವಾಂಗೇ ಪರಿರಭ್ಯ ಮುದಾನ್ವಿತಃ ।
ಮೇನೇ ಸ್ವೀಯೌ ತದಾ ಧರ್ಮೌ ಮೂರ್ತಿಮಂತಾವುಪಸ್ಥಿತೌ ॥ ೧೪೦ ॥

ಸಭಾಪಿ ರಾಮಸುತಯೋರ್ವೀಕ್ಷ್ಯ ವಕ್ತ್ರೇ ಮನೋರಮೇ ।
ಜಾನಕೀಪತಿಭಕ್ತಿತ್ವಂ ಸತ್ಯಂ ಮೇನೇ ಮುನೀಶ್ವರ ॥ ೧೪೧ ॥

॥ ವ್ಯಾಸ ಉವಾಚ ॥

ಇತಿ ಶೇಷಮುಖಪ್ರೋಕ್ತಂ ಶ್ರುತ್ವಾ ವಾತ್ಸ್ಯಾಯನೋಽಬ್ರವೀತ್ ।
ರಾಮಾಯಣಂ ಶ್ರೋತುಮನಾಃ ಸರ್ವಧರ್ಮಸಮನ್ವಿತಂ ॥ ೧೪೨ ॥

॥ ವಾತ್ಸ್ಯಾಯನ ಉವಾಚ ॥

ಕಸ್ಮಿನ್ಕಾಲೇ ಕೃತಂ ಸ್ವಾಮಿನ್ರಾಮಾಯಣಮಿದಂ ಮಹತ್ ।
ಕಸ್ಮಾಚ್ಚಕಾರ ಕಿಂತತ್ರ ವರ್ಣನಂ ಕಿಂ ವದಸ್ವ ತತ್ ॥ ೧೪೩ ॥

॥ ಶೇಷ ಉವಾಚ ॥

ಏಕದಾ ಗತವಾನ್ವಿಪ್ರೋ ವಾಲ್ಮೀಕಿರ್ವಿಪಿನಂ ಮಹತ್ ।
ಯತ್ರ ತಾಲಾಸ್ತಮಾಲಾಶ್ಚ ಕಿಂಶುಕಾ ಯತ್ರ ಪುಷ್ಪಿತಾಃ ॥ ೧೪೪ ॥

---

೧೩೯. ಈ ಋಷಿಯ ಮಾತನ್ನು ಕೇಳಿ ಆ ಹುಡುಗರು ತಂದೆಯ ಪಾದಕ್ಕೆ ನಮಸ್ಕರಿಸಿದರು.

೧೪೦. ರಾಮನು ಆ ಲವಕುಶರನ್ನು ದೃಢವಾಗಿ ತಬ್ಬಿಕೊಂಡು ತನ್ನ ಧರ್ಮವೇ ಈ ರೀತಿ ಅವತರಿಸಿರುವುದೆಂದು ತಿಳಿದುಕೊಂಡನು.

೧೪೧. ಆ ಸಭೆಯು ರಾಮನ ಮಕ್ಕಳ ಮುಖವನ್ನು ನೋಡುತ್ತಾ ಜಾನಕಿಯ ಪತಿಭಕ್ತಿತ್ವದಲ್ಲಿ ದೋಷವಿಲ್ಲವೆಂದು ತಿಳಿದುಕೊಂಡರು.

೧೪೨. ವ್ಯಾಸನು ಹೇಳಿದನು:—ವಾತ್ಸ್ಯಾಯನನು ರಾಮಾಯಣವನ್ನು ಕೇಳಬೇಕೆಂಬ ಇಚ್ಛೆಯಿಂದ ಶೇಷನನ್ನು ಕುರಿತಿಂತೆಂದನು.

೧೪೩. ಸ್ವಾಮಿ ರಾಮಾಯಣವನ್ನು ಯಾವಾಗ ಮಾಡಿದನು? ಏತಕ್ಕೆ ಮಾಡಿದನು? ಅಲ್ಲೇನು ವರ್ಣನೆಗಳಿರುವುವು ?

೧೪೪-೧೪೬. ಶೇಷನು ಹೇಳಿದನು :— ಒಂದು ಸಾರಿ ವಾಲ್ಮೀಕಿಯು ಒಂದು ದೊಡ್ಡ ಕಾಡಿಗೆ ಹೋದನು. ಅಲ್ಲಿ ತಾಳೆ, ಹೊಂಗೆ, ಮುತ್ತುಗ, ಇವೇ ಮೊದಲಾದ

**ಕೇತಕೀ ಯತ್ರ ರಜಸಾ ಕುರ್ವತೀ ಸೌರಭಂ ವನಂ ।**
**ಶಶಿಪ್ರಭೇವ ಮಹತೀ ದೃಶ್ಯತೇ ಶುಭ್ರವರ್ಣಭೃತ್ ॥ ೧೪೩ ॥**

**ಚಂಪಕೋ ಬಕುಳಶ್ಚಾಪಿ ಕೋವಿದಾರಃ ಕುರಂಟಕಃ ।**
**ಅನೇಕೇ ಪುಷ್ಪಿತಾ ಯತ್ರ ಪಾದಪಾಶ್ಶೋಭನೇ ವನೇ ॥ ೧೪೬ ॥**

**ಕೋಕಿಲಾನಾಂ ವಿರಾವೇಣ ಷಟ್ಪದಾನಾಂ ಚ ಶಬ್ದಿತೈಃ ।**
**ಸಂಘುಷ್ಟಂ ಸರ್ವತೋ ರಮ್ಯಂ ಮನೋಹರವಯೋನ್ವಿತಂ ॥ ೧೪೭ ॥**

**ತತ್ರ ಕ್ರೌಂಚಯುಗಂ ರಮ್ಯಂ ಕಾಮಬಾಣಪ್ರಪೀಡಿತಂ ।**
**ಪರಸ್ಪರಂ ಪ್ರಹೃಷ್ಟಿತಂ ರೇಮೇ ಸ್ನಿಗ್ಧತಯಾ ಸ್ಥಿತಂ ॥ ೧೪೮ ॥**

**ತದಾ ವ್ಯಾಧಸ್ಸಮಾಗತ್ಯ ತಯೋರೇಕಂ ಮನೋಹರಂ ।**
**ಜಘಾನ್ನಿರ್ದಯಃ ಕಶ್ಚಿನ್ಮಾಂಸಾಸ್ವಾದನಲೋಲುಪಃ ॥ ೧೪೯ ॥**

**ತದಾ ಕ್ರೌಂಚೀ ವ್ಯಾಧಹತಂ ಸ್ವಪತಿಂ ವೀಕ್ಷ್ಯ ದುಃಖಿತಾ ।**
**ವಿಲಲಾಪ ಭೃಶಂ ದುಃಖಾನ್ಮುಂಚತೀ ರಾವಮುಚ್ಚಕೈಃ ॥ ೧೫೦ ॥**

---

ಮರಗಳು ಹೂಬಿಟ್ಟು ಪ್ರಕಾಶಿಸುತ್ತಿದ್ದುವು. ತಾಳೆಯು ತನ್ನ ಧೂಳಿನಿಂದ ಆ ವನವನ್ನು ಸುವಾಸನೆಯುಳ್ಳದ್ದನ್ನಾಗಿ ಮಾಡಿದ್ದಿತು. ಹೂಬಿಟ್ಟಿರುವ ಆ ಕೇತಕಿಯು ಚಂದ್ರನ ಪ್ರಭೆಯಂತೆ ಪ್ರಕಾಶಿಸುತ್ತ, ಸಂಪಿಗೆ, ಪಗಡೆ, ಕಂಚುವಾಳ, ಕುರಂಟಕ ಇವೇ ಮುಂತಾದುವು ಹೂಬಿಟ್ಟು ಚೆನ್ನಾಗಿ ಕಾಣಿಸುತ್ತಿದ್ದುವು.

೧೪೭. ಕೋಗಿಲೆಗಳ ಕೂಗಿನಿಂದಲೂ, ದುಂಬಿಗಳ ಝೇಂಕಾರದಿಂದಲೂ, ಮನೋಹರವಾದ ಪಕ್ಷಿಗಳಿಂದಲೂ ಕೂಡಿದ್ದಿತು.

೧೪೮. ಅಲ್ಲಿ ಎರಡು ಕ್ರೌಂಚ ಪಕ್ಷಿಗಳು ಕಾಮಬಾಧೆಗೊಳಗಾಗಿ ಪರಸ್ಪರವಾಗಿ ಕ್ರೀಡಿಸುತ್ತಿದ್ದುವು.

೧೪೯. ಆಗ ಒಬ್ಬ ಬೇಡನು ಬಂದು ಅವುಗಳಲ್ಲಿ ಒಂದಾದ ಗಂಡು ಪಕ್ಷಿಯನ್ನು ಮಾಂಸದ ಆಸೆಯಿಂದ ಕೊಂದನು.

೧೫೦. ಆಗ ಹೆಣ್ಣು ಹಕ್ಕಿಯು ಸತ್ತ ತನ್ನ ಗಂಡನನ್ನು ನೋಡಿ ಗಟ್ಟಿಯಾಗಿ ಕೂಗುತ್ತಾ ಅತ್ತಿತು.

ತದಾ ಮುನಿಃ ಪ್ರಕುಪಿತೋ ನಿಷಾದಂ ಕ್ರೌಂಚಘಾತಕಂ ।
ಶಶಾಪ ವಾರ್ಯುಪಸ್ಪೃಶ್ಯ ಸರಿತಃ ಪಾವನಂ ಶುಭಂ ॥ ೧೫೧ ॥

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಶ್ಶಾಶ್ವತೀಸ್ಸಮಾಃ ।
ಯತ್ಕ್ರೌಂಚಪಕ್ಷಿಣೋರೇಕಮವಧೀಃ ಕಾಮಮೋಹಿತಂ ॥ ೧೫೨ ॥

ತದಾ ಪ್ರಬಂಧಂ ಶ್ಲೋಕಸ್ಯ ಜಾತಂ ಮತ್ವಾ ಹ್ಯನು ದ್ವಿಜಾಃ ।
ಊಚುರ್ಮುನಿಂ ಪ್ರಹೃಷ್ಟಾಸ್ತೇ ಶಂಸಂತಸ್ಸಾಧು ಸಾಧ್ವಿತಿ ॥ ೧೫೩ ॥

ಸ್ವಾಮಿನ್ ಶಾಪೋದಿತೇ ವಾಕ್ಯೇ ಭಾರತೀ ಶ್ಲೋಕಮಾತನೋತ್ ।
ಅತ್ಯಂತಂ ಮೋಹನೋ ಜಾತಃ ಶ್ಲೋಕೋಽಯಂ ಮುನಿಸತ್ತಮ ॥ ೧೫೪ ॥

ತದಾ ಮುನಿಃ ಪ್ರಹೃಷ್ಟಾತ್ಮಾ ಬಭೂವ ಬಾಡವರ್ಷಭಃ ।
ತಸ್ಮಿನ್ಕಾಲೇ ಸಮಾಗತ್ಯ ಬ್ರಹ್ಮಾ ಪುತ್ರೈಸ್ಸಮನ್ವಿತಃ ॥ ೧೫೫ ॥

---

೧೫೧. ಆ ಋಷಿಯು ಕೋಪಗೊಂಡು ಕೈಯ್ಯಲ್ಲಿ ನೀರನ್ನು ತೆಗೆದು ಆ ಬೇಡನನ್ನು ಶಪಿಸಿದನು.

೧೫೨. ಎಲೈ ನಿಷಾದನೇ! ಕಾಮದಿಂದ ಮೋಹಿತವಾದ ಆ ಕ್ರೌಂಚಪಕ್ಷಿಗಳಲ್ಲಿ ಒಂದನ್ನು ಕೊಂದೆಯಾದುದರಿಂದ ಬಹು ಕಾಲ ಬದುಕಬೇಡ. (ಇನ್ನೊಂದರ್ಥ) ಎಲೈ ಲಕ್ಷ್ಮೀಪತಿಯೇ ರಾವಣ ಮಂಡೋದರಿಯರೊಳಗೆ ಕಾಮಿಯಾಗಿ ಅಯೋಗ್ಯತನದಿಂದ ವರ್ತಿಸಿದ ರಾವಣನನ್ನು ಕೊಂದೆಯಾದುದರಿಂದ ನೀನು ಬಹು ಕಾಲ ಬದುಕು.

೧೫೩. ಈ ಬೈಗಳು ಶ್ಲೋಕವಾದುದನ್ನು ನೋಡಿ ಅಲ್ಲಿನ ಋಷಿಗಳು ಸಾಧು ಸಾಧು ಎಂದು ಹೊಗಳಿದರು.

೧೫೪. ಸ್ವಾಮಿ! ನೀನು ಕೊಟ್ಟ ಶಾಪದ ಮಾತಿನಲ್ಲಿ ಶ್ಲೋಕವೇ ಹೊರಟಿತು. ಅದು ಅತಿ ಹೃದ್ಯವಾಗಿದೆ.

೧೫೫. ಆ ಮಾತನ್ನು ಕೇಳಿ ಆ ಋಷಿಯು ಸಂತೋಷಗೊಂಡನು. ಅದೇ ಕಾಲದಲ್ಲಿ ಬ್ರಹ್ಮನು ಮಕ್ಕಳೊಡನೆ ಅಲ್ಲಿಗೆ ಬಂದನು.

ವಚೋ ಜಗಾದ ವಾಲ್ಮೀಕಿಂ ಧನ್ಯೋಽಸಿ ತ್ವಂ ಮುನೀಶ್ವರ ।
ಭಾರತೀ ತನ್ಮುಖೇ ಸ್ಥಿತ್ವಾ ಶ್ಲೋಕತ್ವಂ ಸಮುಪದ್ಯತ ॥ ೧೫೬ ॥

ತಸ್ಮಾದ್ರಾಮಾಯಣಂ ರಮ್ಯಂ ಕುರುಷ್ವ ಮಧುರಾಕ್ಷರಂ ।
ಯೇನ ತೇ ವಿಮಲಾ ಕೀರ್ತಿರಾಕಲ್ಪಾಂತಂ ಭವಿಷ್ಯತಿ ॥ ೧೫೭ ॥

ಧನ್ಯಾ ಸೈವ ಮುಖೇ ವಾಣೀ ರಾಮನಾಮ್ನಾ ಸಮನ್ವಿತಾ ।
ಅನ್ಯಾ ಕಾಮಕಥಾ ನೄಣಾಂ ಜನಯತ್ಯೇವ ಸೂತಕಂ ॥ ೧೫೮ ॥

ತಸ್ಮಾತ್ಕುರುಷ್ವ ರಾಮಸ್ಯ ಚರಿತಂ ಲೋಕವಿಶ್ರುತಂ ।
ಯೇನ ಸ್ಯಾತ್ಪಾಪಿನಾಂ ಪಾಪಹಾನಿರೇವ ಪದೇ ಪದೇ ॥ ೧೫೯ ॥

ಇತ್ಯುಕ್ತ್ವಾಽಂತರ್ದಧೇ ಸ್ರಷ್ಟಾ ಸರ್ವದೇವೈಸ್ಸಮನ್ವಿತಃ ।
ತತಸ್ಸ ಚಿಂತಯಾಮಾಸ ಕಥಂ ರಾಮಾಯಣಂ ಭವೇತ್ ॥ ೧೬೦ ॥

---

೧೫೬. ಆಗ ಬ್ರಹ್ಮನು ಎಲೈ ಋಷಿಯೇ, ನೀನು ಧನ್ಯನು. ಭಾರತಿಯು ನಿನ್ನ ಮುಖದಲ್ಲೇ ಇದ್ದುಕೊಂಡು ಶ್ಲೋಕವಾಗುವಿಕೆಯನ್ನು ಹೊಂದಿದಳೆಂದನು.

೧೫೭. ಆದ್ದರಿಂದ ಮಧುರವಾದ ಅಕ್ಷರದಿಂದ ರಾಮಾಯಣವನ್ನು ಬರೆ ಅದರಿಂದ ನಿನ್ನ ಕೀರ್ತಿಯು ಕಲ್ಪವು ಮುಗಿಯುವವರೆಗೂ ಇರುತ್ತದೆ.

೧೫೮. ರಾಮನಾಮದಿಂದ ಕೂಡಿದ ಅಕ್ಷರಗಳುಳ್ಳ ಮಾತೇ ಧನ್ಯವಾದುವು. ಆ ಕಥೆಯೇ ಕಥೆಯು, ಮಿಕ್ಕ ಕಥೆಗಳು ಕಾಮಕಥೆಗಳು ಅವು ಜನರಿಗೆ ಮೈಲಿಗೆಯ ನ್ನುಂಟುಮಾಡುತ್ತವೆ.

೧೫೯. ಆದ್ದರಿಂದ ಲೋಕಪ್ರಸಿದ್ಧವಾದ ರಾಮಚರಿತ್ರೆಯನ್ನು ಬರೆ. ಅದ ರಿಂದ ಪದಪದಕ್ಕೂ ಪಾಪಿಗಳ ಪಾಪಹಾನಿಯಾಗುತ್ತದೆ.

೧೬೦. ಹೀಗೆಂದು ಹೇಳಿ ಎಲ್ಲಾ ದೇವತೆಗಳೊಡನೆ ಬ್ರಹ್ಮನು ಹೊರಟು ಹೋದನು. ಅನಂತರ ರಾಮಾಯಣವನ್ನು ಹೇಗೆ ಮಾಡುವುದೆಂದು ವಾಲ್ಮೀಕಿಯು ಯೋಚಿಸಿದನು.

ತದಾ ಧ್ಯಾನಪರೋ ಜಾತೋ ನದ್ಯಾಸ್ತೀರೇ ಮನೋರಮೇ ।
ತಸ್ಯ ಚೇತಸ್ಯಸೌ ರಾಮಃ ಪ್ರಾದುರ್ಭೂತೋ ಮನೋಹರಃ ॥ ೧೬೧ ॥

ನೀಲೋತ್ಪಲದಳಶ್ಯಾಮಂ ರಾಮಂ ರಾಜೀವಲೋಚನಂ ।
ನಿರೀಕ್ಷ್ಯ ತಸ್ಯ ಚರಿತಂ ಭೂತಂ ಭಾವಿ ಭವಚ್ಚ ಯತ್ ॥ ೧೬೨ ॥

ತದಾತ್ಯಂತಂ ಮುದಂ ಪ್ರಾಪ್ತೋ ರಾಮಾಯಣಮಥಾಸೃಜತ್ ।
ಮನೋರಮಪದೈರ್ಯುಕ್ತಂ ವೃತ್ತೈರ್ಬಹುವಿಧೈರಪಿ ॥ ೧೬೩ ॥

ಷಟ್ಕಾಂಡಾನಿ ಸುರಮ್ಯಾಣಿ ಯತ್ರ ರಾಮಾಯಣೇಽನಘ
ಬಾಲಮಾರಣ್ಯಕಂ ಚಾನ್ಯತ್ಕಿಷ್ಕಿಂಧಾ ಸುಂದರಂ ತಥಾ ॥ ೧೬೪ ॥

ಯುದ್ಧಮುತ್ತರಮನ್ಯಚ್ಚ ಷಡೇತಾನಿ ಮಹಾಮತೇ ।
ಶೃಣುಯಾದ್ಯೋ ನರಃ ಪುಣ್ಯಾತ್ಸರ್ವಪಾಪೈಃ ಪ್ರಮುಚ್ಯತೇ ॥ ೧೬೫ ॥

ತತ್ರ ಬಾಲೇ ತು ಸಂತುಷ್ಟಃ ಪುತ್ರೇಷ್ಟ್ಯಾ ಚತುರಸ್ಸುತಾನ್ ।
ಪ್ರಾಪ ಪಂಕ್ತಿರಥಸ್ಸಾಕ್ಷಾದ್ಧರಿಂ ಬ್ರಹ್ಮ ಸನಾತನಂ ॥ ೧೬೬ ॥

---

೧೬೧. ಆಗ ಆ ನದಿಯ ದಡದಲ್ಲಿಯೇ ವಾಲ್ಮೀಕಿಯು ಧ್ಯಾನಮಾಡಿದನು. ಆಗ ಅವನು ಮನಸ್ಸಿನಲ್ಲಿ ಮನೋಹರನಾದ ರಾಮನು ಕಾಣಿಸಿಕೊಂಡನು.

೧೬೨. ನೀಲೋತ್ಪಲದಂತಿರುವ ಬಣ್ಣವುಳ್ಳ, ಕಮಲಾಕ್ಷನಾದ ರಾಮನನ್ನು ನೋಡಿ ಅವನ ಭೂತ, ವರ್ತಮಾನ ಭವಿಷ್ಯಚ್ಚರಿತೆಯನ್ನು ತಿಳಿದುಕೊಂಡನು.

೧೬೩. ಆಗ ಸಂತೋಷಗೊಂಡು ಮನೋಹರಪದಗಳಿಂದಲೂ, ಅನೇಕ ವೃತ್ತಗಳಿಂದಲೂ ಕೂಡಿದ ರಾಮಾಯಣವನ್ನು ಬರೆದನು.

೧೬೪-೧೬೫. ಬಾಲ, ಆರಣ್ಯಕ, ಕಿಷ್ಕಿಂಧಾ, ಸುಂದರ, ಯುದ್ಧ, ಉತ್ತರ ಕಾಂಡಗಳೆಂಬ ಆರು ಕಾಂಡದಿಂದ ಕೂಡಿರುವುದನ್ನಾಗಿ ಬರೆದನು. ಅದನ್ನು ಕೇಳಿದರೆ ಮನುಷ್ಯನ ಪಾಪವೆಲ್ಲವೂ ಹೋಗುತ್ತದೆ.

೧೬೬-೧೬೭. ದಶರಥನು ಪುತ್ರೇಷ್ಟಿಯಾಗಮಾಡಿ ನಾಲ್ಕು ಜನ ಮಕ್ಕಳನ್ನು ಪಡೆದುದು, ಅವರು ಹರಿಯ ಅವತಾರವೆಂಬುದು, ಆ ರಾಮನು ವಿಶ್ವಾಮಿತ್ರನ ಯಾಗಕ್ಕೆ ಹೋದುದು, ಹಾಗೆಯೇ ಸೀತೆಯ ಮದುವೆ, ಧನುರ್ಭಂಗ, ಭಾರ್ಗವನ

**ಸ ಕೌಶಿಕಮುಖಂ ಗತ್ವಾ ಸೀತಾಮುದ್ವಾಹ್ಯ ಭಾರ್ಗವಂ ।**
**ಆಗತ್ಯಪುರಮುತ್ಕೃಷ್ಟೋ ಯೌವರಾಜ್ಯಪ್ರಕಲ್ಪನಂ ॥ ೧೬೭ ॥**

**ಮಾತೃವಾಕ್ಯಾದ್ವನಂ ಪ್ರಾಗಾದ್ಗಂಗಾಮುತ್ತೀರ್ಯ ಪರ್ವತಂ**
**ಚಿತ್ರಕೂಟಂ ಮಹಿಲಯಾ ಲಕ್ಷ್ಮಣೇನ ಸಮನ್ವಿತಃ ॥ ೧೬೮ ॥**

**ಭರತಸ್ತಂ ವನೇ ಶ್ರುತ್ವಾ ಜಗಾಮ ಭ್ರಾತರಂ ನಯೀ ।**
**ತಮಪ್ರಾಪ್ಯ ಸ್ವಯಂ ನಂದಿಗ್ರಾಮೇ ವಾಸಮಚೀಕರತ್ ॥ ೧೬೯ ॥**

**ಬಾಲಮೇತಚ್ಛೃಣುಷ್ವಾನ್ಯದಾರಣ್ಯಕಸಮುದ್ಭವಂ ।**
**ಮುನೀನಾಮಾಶ್ರಮೇ ವಾಸಸ್ತತ್ರ ತತ್ರೋಪವರ್ಣನಂ ॥ ೧೭೦ ॥**

**ಶೂರ್ಪಣಖ್ಯಾ ನಸಚ್ಛೇದಃ ಖರದೂಷಣನಾಶನಂ ।**
**ಮಾಯಾಮಾರೀಚಹನನಂ ದೈತ್ಯಾದ್ರಾಮಾಪಹಾರಣಂ ॥ ೧೭೧ ॥**

**ವನೇ ವಿರಹಿಣಾ ಭ್ರಾಂತಂ ಮನುಷ್ಯಚರಿತಂ ಧೃತಂ ।**
**ಕಬಂಧಪ್ರೇಕ್ಷಣಂ ತತ್ರ ಪಂಪಾಯಾಂ ಗಮನಂ ತಥಾ ॥ ೧೭೨ ॥**

**ಹನೂಮತಾ ಸಂಗಮನಮಿತ್ಯೇತದ್ವನಸಂಜ್ಞಿತಂ ।**
**ಅಪರಂ ಚ ಶೃಣು ಮುನೇ ಸಂಕ್ಷಿಪ್ಯ ಕಥಯಾಮ್ಯಹಂ ॥ ೧೭೩ ॥**

---

ಗರ್ವಭಂಗ, ಊರಿಗೆ ಬಂದು ಯೌವರಾಜ್ಯಕ್ಕೆ ಸಿದ್ಧತೆ, ಕೈಕೇಯೀ ಮಾತಿನಿಂದ ವನಗಮನ, ಗಂಗೆಯನ್ನು ದಾಟಿ ಚಿತ್ರಕೂಟದಲ್ಲಿ ಸೀತಾಲಕ್ಷ್ಮಣರೊಡನಿರುವುದು. ಭರತನು ನಂದಿಗ್ರಾಮದಲ್ಲಿ ವಾಸಮಾಡುವುದು, ಇವಿಷ್ಟೂ ಬಾಲಕಾಂಡದ ವಿಷಯಗಳು.

೧೭೦-೧೭೩. ಇವಿಷ್ಟೂ ಬಾಲಕಾಂಡದ ವಿಷಯವಾಯಿತು. ಮತ್ತೊಂದನ್ನು ಕೇಳು, ಅದು ಅರಣ್ಯಕಾಂಡದ ವಿಷಯ. ಮುನಿಗಳ ಆಶ್ರಮಗಳಲ್ಲಿ ಅಲ್ಲಲ್ಲೀ ವಾಸವು, ಅದರ ವರ್ಣನೆ, ಶೂರ್ಪಣಖಿಯ ಮೂಗನ್ನು ಕೊಯ್ದುದು. ಖರದೂಷಣರನ್ನು ಕೊಂದುದು, ಮಾರೀಚನ ಹನನ, ರಾವಣನು ಸೀತೆಯನ್ನು ಕದ್ದುದು. ವನದಲ್ಲಿ ಮನುಷ್ಯರಂತೆ ವಿರಹಿಯಾಗಿ ಸುತ್ತುವುದು, ಕಬಂಧನಿಗೆ ಸಿಕ್ಕಿದುದು. ಪಂಪೆಗೆ ಹೋದುದು, ಹನುಮಂತನೊಡನೆ ಸ್ನೇಹ, ಇದು ಅರಣ್ಯಕಾಂಡ. ಮತ್ತೊಂದನ್ನು ಕೇಳು, ಸಂಕ್ಷೇಪವಾಗಿ ಹೇಳುತ್ತೇನೆ.

ಸಪ್ತತಾಳಪ್ರಭೇದಶ್ಚ ವಾಲೀನಿರ್ಮರ್ದನಮದ್ಭುತಂ ।
ಸುಗ್ರೀವರಾಜ್ಯದಾನಂ ಚ ನಗವರ್ಣನಮಿತ್ಯುತ ॥ ೧೭೪ ॥

ಲಕ್ಷ್ಮಣಾತ್ಕರ್ಮಸಂದೇಶಃ ಸುಗ್ರೀವಸ್ಯ ವಿವಾಸನಂ ।
ತಥಾ ಸೈನ್ಯಸಮುದ್ದೇಶಃ ಸೀತಾನ್ವೇಷಣಮುತ್ಸೃತ ॥ ೧೭೫ ॥

ಸಂಪಾತಿಪ್ರೇಕ್ಷಣಂ ತತ್ರ ವಾರಿಧೇರ್ಲಂಘನಂ ತಥಾ ।
ಪರತೀರೇ ಕಪಿಪ್ರಾಪ್ತಿಃ ಕೈಷ್ಕಿಂಧಂ ಕಾಂಡಮದ್ಭುತಂ ॥ ೧೭೬ ॥

ಸುಂದರಂ ಶೃಣು ಕಾಂಡಂ ವೈ ಯತ್ರ ರಾಮಕಥಾದ್ಭುತಾ ।
ಪ್ರತಿಗೇಹಂ ಪರಿಭ್ರಾಂತಿಃ ಕಪೇಶ್ಚಿತ್ರಸ್ಯ ದರ್ಶನಂ ॥ ೧೭೭ ॥

ಸೀತಾಸಂದರ್ಶನಂ ತತ್ರ ಜಾನಕ್ಯಾ ಭಾಷಣಂ ತಥಾ ।
ವನಭಂಗಃ ಪ್ರಕುಪಿತೈರ್ಬಂಧನಂ ವಾನರಸ್ಯ ವೈ ॥ ೧೭೮ ॥

ಲಂಕಾಪ್ರಜ್ವಲನಂ ತತ್ರ ವಾನರೈಸ್ಸಂಗತಿಸ್ತತಃ ।
ರಾಮಾಭಿಜ್ಞಾನದಪನಂ ಸೈನ್ಯಪ್ರಸ್ಥಾನಮೇವ ಚ ॥ ೧೭೯ ॥

---

೧೭೪-೧೭೬. ಏಳು ತಾಳೆಯ ಮರಗಳನ್ನು ಕಡಿದುದು, ವಾಲಿಯ ಹನನ, ಸುಗ್ರೀವನ ಪಟ್ಟಾಭಿಷೇಕ, ಪರ್ವತ ವರ್ಣನೆ, ಲಕ್ಷ್ಮಣನು ಸುಗ್ರೀವನನ್ನು ಕೆಲಸಕ್ಕೆ ಬಾ ಎನ್ನುವುದು, ಸುಗ್ರೀವನು ಹೊರಡುವುದು, ಸೈನ್ಯಗಳನ್ನು ಸೇರಿಸುವುದು, ಸೀತಾನ್ವೇಷಣ, ಸಂಪಾತಿಯನ್ನು ಕಾಣುವುದು, ಸಮುದ್ರಲಂಘನ, ಆಚೆದಡದಲ್ಲಿ ಕಪಿಯು ನಿಂತುದು, ಇದು ಕಿಷ್ಕಿಂಧಾಕಾಂಡವು.

೧೭೭-೧೭೯. ರಾಮ ಕಥೆಯು ಅದ್ಭುತವಾಗಿರುವ ಸುಂದರಕಾಂಡವನ್ನು ಕೇಳು. ಹನುಮನು ಪ್ರತಿಮನೆಯಲ್ಲಿಯೂ ಹುಡುಕುವುದು, ಕಪಿಯು ನಾನಾಬಗೆಗಳನ್ನು ನೋಡುವುದು, ಸೀತಾದರ್ಶನ, ಆಕೆಯೊಡನೆ ಸಂಭಾಷಣ, ವನಭಂಗ, ಹನುಮಂತನ ಬಂಧನ, ಲಂಕಾದಹನ, ಪುನಃ ಕಪಿಗಳೊಡನೆ ಸೇರುವುದು, ರಾಮನಿಗೆ ಗುರುತುಕೊಡುವುದು, ಸೈನ್ಯಗಳನ್ನು ತೆಗೆದುಕೊಂಡು ಹೊರಡುವುದು, ಸಮುದ್ರದಲ್ಲಿ ಸೇತುವೆ ಕಟ್ಟುವುದು, ಶುಕಸಾರಣರು ಬರುವುದು.

ಸಮುದ್ರೇಸೇತುಕರಣಂ ಶುಕಸಾರಣಸಂಗತಿಃ ।
ಇತಿ ಸುಂದರಮಾಖ್ಯಾತಂ ಯುದ್ಧೇ ಸೀತಾಸಮಾಗಮಃ ॥ ೧೮೦ ॥

ಉತ್ತರೇ ತ್ವೃಷಿಸಂವಾದೋ ಯಜ್ಞಸ್ಯಾರಂಭ ಏವ ಚ ।
ತತ್ರಾನೇಕಾ ರಾಮಕಥಾಃ ಶೃಣ್ವತಾಂ ಪಾಪನಾಶಕಾಃ ॥ ೨೮೧ ॥

ಇತಿ ಷಟ್ಕಾಂಡಮಾಖ್ಯಾತಂ ಬ್ರಹ್ಮಹತ್ಯಾಪನೋದನಂ ।
ಸಂಕ್ಷೇಪತೋ ಮಯಾ ತುಭ್ಯಮಾಖ್ಯಾತಂ ಸುಮನೋಹರಂ ॥ ೧೮೨ ॥

ಚತುರ್ವಿಂಶತಿಸಾಹಸ್ರಂ ಷಟ್ಕಾಂಡಪರಿಚಿಹ್ನಿತಂ ।
ತದ್ವೈ ರಾಮಾಯಣಂ ಪ್ರೋಕ್ತಂ ಮಹಾಪಾತಕನಾಶನಂ ॥ ೧೮೩ ॥

ತಚ್ಛ್ರುತ್ವಾ ರಾಘವಃ ಪ್ರೀತಃ ಪುತ್ರಾವಾಧಾಯ ಚಾಸನೇ ।
ದೃಢಂ ತೌ ಪರಿರಭ್ಯಾಥ ಸೀತಾಂ ಸಸ್ಮಾರ ವಲ್ಲಭಾಂ ॥ ೧೮೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ರಾಮಾಯಣಗಾನಂ ನಾಮ
ಷಟ್‌ಷಷ್ಟಿತಮೋಽಧ್ಯಾಯಃ

---

೧೮೦. ಇದು ಸುಂದರಕಾಂಡದ ವಿಷಯ, ಯುದ್ಧಕಾಂಡದಲ್ಲಿ—ಸೀತೆಯು ಪುನಃ ರಾಮನಿಗೆ ದೊರೆಯುವುದು.

೧೮೧. ಉತ್ತರಕಾಂಡದಲ್ಲಿ ಋಷಿಗಳ ಸಂವಾದ, ಯಜ್ಞದ ಪ್ರಾರಂಭ, ಅಲ್ಲಿ ಅನೇಕವಾದ ಪಾಪನಾಶಕವಾದ ರಾಮನ ಕಥೆಗಳಿವೆ. ಅವು ಪಾಪನಾಶಕವಾದುವು.

೧೮೨. ಈ ರೀತಿ ಆರು ಕಾಂಡಗಳಾಗಿರುವ, ಬ್ರಹ್ಮಹತ್ಯಾನಾಶಕವಾದ ರಾಮ ಕಥೆಯನ್ನು ಸಂಕ್ಷೇಪವಾಗಿ ನಿನಗೆ ಹೇಳಿದ್ದೇನೆ.

೧೮೩. ರಾಮಾಯಣವು ಇಪ್ಪತ್ತುನಾಲ್ಕು ಸಾವಿರ ಗ್ರಂಥಗಳಿಂದ ಕೂಡಿ ಆರು ಕಾಂಡವಾಗಿ ವಿಭಾಗಿಸಲ್ಪಟ್ಟಿದೆ, ಮಹಾಪಾಪಹರವು.

೧೮೪. ಅದನ್ನು ಕೇಳಿ ಶ್ರೀರಾಮನು ಸಂತುಷ್ಟನಾಗಿ, ಮಕ್ಕಳನ್ನು ತನ್ನ ಆಸನದ ಮೇಲೆ ಕೂರಿಸಿಕೊಂಡು ಆಲಿಂಗಿಸಿ ಸೀತಾದೇವಿಯನ್ನು ಸ್ಮರಿಸಿಕೊಂಡನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನಸಂವಾದದ
ರಾಮಾಶ್ವಮೇಧದಲ್ಲಿ ರಾಮಾಯಣಗಾನವೆಂಬ ಅರವತ್ತಾರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
# ಸಪ್ತಷಷ್ಟಿತಮೋಽಧ್ಯಾಯಃ

॥ ಶೇಷ ಉವಾಚ ॥

ಅಥ ಸೌಮಿತ್ರಿರಾಗತ್ಯ ಜಾನಕೀಂ ನತವಾನ್ಮುಹುಃ ।
ಪ್ರೇಮಗದ್ಗದಯಾ ಶಂಸನ್ವಾಚಂ ರಾಮಪ್ರಣೋದಿತಾಂ ॥ ೧ ॥

ಸೀತಾ ಸಮಾಗತಂ ದೃಷ್ಟ್ವಾ ಲಕ್ಷ್ಮಣಂ ವಿನಯಾನ್ವಿತಂ ।
ತನ್ಮುಖಾದ್ರಾಮಸಂದೇಶಂ ಶ್ರುತ್ವೋವಾಚ ವಿಲಜ್ಜಿತಾ ॥ ೨ ॥

॥ ಸೀತೋವಾಚ ॥

ಸೌಮಿತ್ರೇ ಕಥಮಾಗಚ್ಛೇ ರಾಮತ್ಯಕ್ತಾ ಮಹಾವನೇ ।
ತಿಷ್ಠಾಮಿ ರಾಮಂ ಸ್ಮರಂತೀ ವಾಲ್ಮೀಕೇರಾಶ್ರಮೇ ತ್ವಹಂ ॥ ೩ ॥

---

## ಅರವತ್ತೇಳನೆಯ ಅಧ್ಯಾಯವು.

೧. ಶೇಷನು ಹೇಳಿದನು :—ಆಮೇಲೆ ಲಕ್ಷ್ಮಣನು ವಾಲ್ಮೀಕಿಯ ಆಶ್ರಮಕ್ಕೆ ಬಂದು, ಸೀತೆಗೆ ನಮಸ್ಕರಿಸಿ, ಪ್ರೇಮದಿಂದ ತೊದಲಿದಮಾತುಳ್ಳವನಾಗಿ ಇಂತೆಂದನು.

೨. ಸೀತೆಯು ಲಕ್ಷ್ಮಣನು ಬಂದದನ್ನು ನೋಡಿ, ಆತನ ಮುಖದಿಂದ ರಾಮನು ಹೇಳಿ ಕಳುಹಿಸಿರುವುದನ್ನು ಕೇಳಿ ಲಜ್ಜೆಯಿಂದ ಇಂತೆಂದಳು.

೩. ಸೀತೆಯು ಹೇಳಿದಳು :—ಲಕ್ಷ್ಮಣ, ರಾಮನೇ ಕಾಡಿನಲ್ಲಿ ಬಿಟ್ಟಿರುವಾಗ್ಯೆ ನಾನು ಹೇಗೆ ಬರಲಿ? ರಾಮನನ್ನು ಸ್ಮರಿಸುತ್ತಾ ವಾಲ್ಮೀಕಿಯ ಆಶ್ರಮದಲ್ಲಿಯೇ ಇರುತ್ತೇನೆ.

ತಸ್ಯಾ ಮುಖೋದಿತಂ ವಾಕ್ಯಂ ಶ್ರುತ್ವಾ ಸೌಮಿತ್ರಿರಬ್ರವೀತ್ ।
ಮಾತಃ ಪತಿವ್ರತೇ ರಾಮಸ್ತ್ವಾಮಾಕಾರಯತೇ ಮುಹುಃ ॥ ४ ॥

ಪತಿವ್ರತಾ ಪತಿಕೃತಂ ದೋಷಂ ನಾನಯತೇ ಹೃದಿ ।
ತಸ್ಮಾದಾಗಚ್ಛ ಹಿ ಮಯಾ ಸ್ಥಿತ್ವಾ ಸ್ಯಂದನ ಉತ್ತಮೇ ॥ ೫ ॥

ಇತ್ಯಾದಿ ವಚನಂ ಶ್ರುತ್ವಾ ಜಾನಕೀ ಪತಿದೇವತಾ ।
ಮನೋರೋಷಂ ಪರಿತ್ಯಜ್ಯ ತಸ್ಥೌ ಸೌಮಿತ್ರಿಣಾ ರಥೇ ॥ ೬ ॥

ತಾಪಸೀಸ್ಸಕಲಾ ನತ್ವಾ ಮುನೀಂಶ್ಚ ನಿಗಮೋದ್ಧರಾನ್ ।
ರಾಮಂ ಸ್ಮರಂತೀ ಮನಸಾ ರಥೇ ಸ್ಥಿತ್ವಾಗಮತ್ಪುರೀಂ ॥ ೭ ॥

ಕ್ರಮೇಣ ನಗರೀಂ ಪ್ರಾಪ್ಯ ಮಹಾಹಾರ್ಭರಣಾನ್ವಿತಾ ।
ಸರಯೂಂ ಸರಿತಂ ಪ್ರಾಪ ಯತ್ರ ರಾಮಃ ಸ್ವಯಂ ಸ್ಥಿತಃ ॥ ೮ ॥

ರಥಾದುತ್ತೀರ್ಯ ಲಲಿತಾ ಲಕ್ಷ್ಮಣೇನ ಸಮನ್ವಿತಾ ।
ರಾಮಸ್ಯ ಪಾದಯೋರ್ಲಗ್ನಾ ಪತಿವ್ರತಪರಾಯಣಾ ॥ ೯ ॥

---

೪. ಆಕೆಯು ಹೇಳಿದುದನ್ನು ಕೇಳಿ ಲಕ್ಷ್ಮಣನು ಅಮ್ಮ, ಪತಿವ್ರತೆಯೇ ! ರಾಮನು ಮತ್ತೆ ನಿನ್ನನ್ನು ಕರೆಯುತ್ತಾನೆ.

೫. ಪತಿವ್ರತೆಯಾದ ಹೆಂಗಸು ಗಂಡನ ದೋಷವನ್ನು ಮನಸ್ಸಿನಲ್ಲಿಡುವುದಿಲ್ಲ. ಆದ್ದರಿಂದ ನೀನು ರಥದಲ್ಲಿ ಕುಳಿತುಕೊಂಡು ಬಾ ಎಂದನು.

೬. ಇವೇ ಮುಂತಾದುವುಗಳನ್ನು ಕೇಳಿ, ಪತಿವ್ರತೆಯಾದ ಜಾನಕಿಯು ಮನಸ್ಸಿನ ರೋಷವನ್ನು ಬಿಟ್ಟು ಲಕ್ಷ್ಮಣನೊಡನೆ ರಥದಲ್ಲಿ ಕುಳಿತಳು.

೭. ತಾಪಸಿಯರಿಗೆಲ್ಲಾ ನಮಸ್ಕರಿಸಿ, ವೇದವಿತ್ತುಗಳಾದ ಋಷಿಗಳಿಗೂ ನಮಸ್ಕರಿಸಿ, ಮನಸ್ಸಿನಲ್ಲಿ ರಾಮನನ್ನು ಸ್ಮರಿಸುತ್ತಾ ರಥದಲ್ಲಿ ಕುಳಿತು ಅಯೋಧ್ಯಾಪಟ್ಟಣಕ್ಕೆ ಹೊರಟಳು.

೮. ಉತ್ತಮವಾದ ಆಭರಣಗಳನ್ನು ಹಾಕಿಕೊಂಡು ರಾಜಧಾನಿಗೆ ಹೋಗಿ ಸರಯೂ ಸಮೀಪದಲ್ಲಿ ರಾಮನಿರುವಲ್ಲಿಗೆ ಹೋದಳು.

೯. ರಥದಿಂದಿಳಿದು ಲಕ್ಷ್ಮಣನ ಜೊತೆಯಲ್ಲಿ ಹೋಗಿ ರಾಮನಿಗೆ ನಮಸ್ಕರಿಸಿದಳು.

ರಾಮಸ್ತ್ವಾಮಾಗತಾಂ ದೃಷ್ಟ್ವಾ ಜಾನಕೀಂ ಪ್ರೇಮವಿಹ್ವಲಾಂ ।
ಸಾಧ್ವಿ ತ್ವಯಾ ಸಹೇದಾನೀಂ ಕುರ್ವೇ ಯಜ್ಞಸಮಾಪನಂ ॥ ೧೦ ॥

ವಾಲ್ಮೀಕಿಂ ಸಾ ನಮಸ್ಕೃತ್ಯ ತಥಾನ್ಯಾನ್ವಿಪ್ರಸತ್ತಮಾನ್ ।
ಜಗಾಮ ಮಾತೃಪದಯೋಃ ಸನ್ನತಿಂ ಕರ್ತುಮುತ್ಸುಕಾ ॥ ೧೧ ॥

ಕೌಸಲ್ಯಾ ತಾಮಥಾಯಾಂತೀಂ ವೀರಸೂಂ ಜಾನಕೀಂ ಪ್ರಿಯಾಂ ।
ಆಶೀರ್ಭಿರಭಿಸಂಯುಜ್ಯ ಯಯೌ ಹರ್ಷಮನೇಕಧಾ ॥ ೧೨ ॥

ಕೈಕೇಯೀ ಪಾದಯೋರ್ನಮ್ರಾಂ ವೀಕ್ಷ್ಯ ವೈದೇಹಪುತ್ರಿಕಾಂ ।
ಭರ್ತ್ರಾ ಸಹ ಚಿರಂ ಜೀವ ಸಪುತ್ರಾಶೀರಿತಿ ವ್ಯಧಾತ್ ॥ ೧೩ ॥

ಸುಮಿತ್ರಾ ಸ್ವಪದೇ ನಮ್ರಾಂ ಜಾನಕೀಂ ವೀಕ್ಷ್ಯ ಪುತ್ರಿಣೀಂ ।
ಆಶಿಷಂ ವ್ಯದಧಾತ್ತಸ್ಯಾಃ ಪುತ್ರಪೌತ್ರಪ್ರದಾಯಿನೀಂ ॥ ೧೪ ॥

ಜಾನಕೀ ಸರ್ವಶೋ ನತ್ವಾ ರಾಮಭದ್ರಪ್ರಿಯಾ ಸತೀ ।
ಪರಮಂ ಹರ್ಷಮಾಪನ್ನಾ ಬಭೂವ ಕಿಲ ಬಾಡಬ ॥ ೧೫ ॥

---

೧೦. ರಾಮನು ಸೀತೆಯು ಬಂದುದನ್ನು ನೋಡಿ ಪ್ರೇಮದಿಂದ ಸಾಧ್ವಿಯೇ. ನಿನ್ನೊಡನೆ ಈಗ ಯಾಗವನ್ನು ಸಮಾಪ್ತಿಮಾಡಬೇಕೆಂದಿದ್ದೇನೆ. ಎಂದನು.

೧೧. ಸೀತೆಯು ವಾಲ್ಮೀಕಿಯನ್ನೂ, ಮತ್ತು ಇತರ ಪೂಜ್ಯರನ್ನೂ ನಮಸ್ಕರಿಸಿ ಅತ್ತೆಯರಿಗೆ ನಮಸ್ಕಾರಮಾಡಲು ಹೋದಳು.

೧೨. ಕೌಸಲ್ಯೆಯು ಸೀತೆ ಬರುತ್ತಿರುವುದನ್ನು ನೋಡಿ ಆ ವೀರಮಾತೆಗೆ ಆಶೀರ್ವದಿಸಿ ಬಹು ಸಂತೋಷಪಟ್ಟಳು.

೧೩. ಕೈಕೇಯಿಗೆ ನಮಸ್ಕರಿಸಲು ಆಕೆಯು ಗಂಡನೊಡನೆಯೂ ಮಕ್ಕಳೊಡನೆಯೂ ಬಹುಕಾಲ ಬದುಕು. ಇದು ನನ್ನ ಆಶೀರ್ವಾದವೆಂದಳು.

೧೪. ಸುಮಿತ್ರೆಗೆ ನಮಸ್ಕರಿಸಲು ಆಕೆಯು ಪುತ್ರಪೌತ್ರರನ್ನು ಪಡೆ ಎಂದಳು.

೧೫. ಜಾನಕಿಯು ಎಲ್ಲರಿಗೂ ನಮಸ್ಕರಿಸಿ ರಾಮನ ಪ್ರೀತಿಗೆ ಪಾತ್ರಳಾಗಿ ಬಹು ಸಂತೋಷಪಟ್ಟಳು.

ಸಮಾಗತಾಂ ವೀಕ್ಷ್ಯ ಪತ್ನೀಂ ರಾಮಚಂದ್ರಸ್ಯ ಕುಂಭಜಃ ।
ಸುವರ್ಣಪತ್ನೀಂ ಧಿಕ್ಕೃತ್ವಾ ತಾಮಧಾದ್ಧರ್ಮಚಾರಿಣೀಂ ॥ ೧೬ ॥

ರಾಮಸ್ತದಾ ಯಜ್ಞಮಧ್ಯೇ ಶುಶುಭೇ ಸೀತಯಾ ಸಹ
ತಾರಯಾನುಗತೋ ಯದ್ವಚ್ಛಶೀವ ಸ ರಘೂತ್ತಮಃ ॥ ೧೭ ॥

ಪ್ರಯೋಗಮಕರೋತ್ತತ್ರ ಕಾಲೇ ಪ್ರಾಪ್ತೇ ಮನೋರಮೇ ।
ವೈದೇಹ್ಯಾ ಧರ್ಮಚಾರಿಣ್ಯಾ ಸರ್ವಪಾಪಾಪನೋದನಂ ॥ ೧೮ ॥

ಸೀತಯಾ ಸಹಿತಂ ರಾಮಂ ಪ್ರಸಕ್ತಂ ಯಜ್ಞಕರ್ಮಣಿ ।
ನಿರೀಕ್ಷ್ಯ ಜಹೃಷುಸ್ತತ್ರ ಕೌತುಕೇನ ಸಮನ್ವಿತಾಃ ॥ ೧೯ ॥

ವಸಿಷ್ಠಂ ಪ್ರಾಹ ಸುಮತಿಂ ರಾಮಸ್ತತ್ರ ಕ್ರತೌ ವರೇ ।
ಕಿಂ ಕರ್ತವ್ಯಂ ಮಯಾ ಸ್ವಾಮಿನ್ನತಃ ಪರಮವಶ್ಯಕಂ ॥ ೨೦ ॥

ರಾಮಸ್ಯ ವಚನಂ ಶ್ರುತ್ವಾ ಗುರುಃ ಪ್ರಾಹ ಮಹಾಮತಿಃ ।
ಬ್ರಾಹ್ಮಣಾನಾಂ ಪ್ರಕರ್ತವ್ಯಾ ಪೂಜಾ ಸಂತೋಷಕಾರಿಕಾ ॥ ೨೧ ॥

---

೧೬. ಸೀತೆಯು ಬಂದುದನ್ನು ನೋಡಿ ಅಗಸ್ತ್ಯನು ಸುವರ್ಣದ ಹೆಂಡತಿಯನ್ನು ಬಿಟ್ಟು ಈಕೆಯನ್ನು ಸಹಚಾರಿಣಿಯನ್ನಾಗಿ ಯಾಗದಲ್ಲಿ ಮಾಡಿದನು.

೧೭. ಆಗ ರಾಮನು ಯಾಗದ ಮಧ್ಯದಲ್ಲಿ ಸೀತೆಯಿಂದ ಕೂಡಿ ನಕ್ಷತ್ರದಿಂದ ಕೂಡಿದ ಚಂದ್ರನಂತೆ ಪ್ರಕಾಶಿಸಿದನು.

೧೮. ಸಕಾಲದಲ್ಲಿ ಧರ್ಮಚಾರಿಣಿಯಾದ ಸೀತೆಯೊಡನೆ ಸರ್ವಪಾಪಹರವಾದ ಪ್ರಯೋಗವನ್ನೂ ಮಾಡಿದನು.

೧೯. ಸೀತೆಯೊಡನೆ ಯಜ್ಞಕರ್ಮವನ್ನು ಮಾಡುತ್ತಿರುವ ರಾಮನನ್ನು ನೋಡಿ ಎಲ್ಲರೂ ಸಂತೋಷಪಟ್ಟರು.

೨೦. ಆಗ ಆ ಯಾಗದಲ್ಲಿ ವಸಿಷ್ಠನನ್ನು ಕುರಿತು ರಾಮನು ಸ್ವಾಮಿ, ಇನ್ನು ಮೇಲೆ ನಾನೇನು ಅವಶ್ಯಕವಾದುದನ್ನು ಮಾಡಬೇಕು ? ಎಂದನು.

೨೧. ರಾಮನ ಮಾತನ್ನು ಕೇಳಿ ಈಗ ಬ್ರಾಹ್ಮಣಪೂಜೆಯನ್ನು ಮಾಡಬೇಕೆಂದನು.

ಮರುತ್ತೇನ ಕ್ರತುಃ ಸೃಷ್ಟಃ ಪೂರ್ವಂ ಸಂಭಾರಸಂಭೃತಃ ।
ಬ್ರಾಹ್ಮಣಾಸ್ತತ್ರ ವಿತ್ತಾದ್ಯೈಸ್ತೋಷಿತಾ ಹ್ಯಭವಂಸ್ತದಾ ॥ ೨೨ ॥

ಅತ್ಯಂತಂ ವಿತ್ತಸಂಭಾರಂ ನೇತುಂ ವಿಪ್ರಾಅಶಕನ್ನ ಹಿ ।
ಪ್ರಾಕ್ಷಿಪನ್ಹಿಮವದ್ದೇಶೇ ವಿತ್ತಭಾರಾಸಹಾ ದ್ವಿಜಾಃ ॥ ೨೩ ॥

ತಸ್ಮಾತ್ತ್ವಮಪಿ ರಾಜಾಗ್ರ್ಯ ಲಕ್ಷ್ಮೀವಾನ್ನೃಪಸತ್ತಮ ।
ದೇಹಿ ದಾನಾದಿ ವಿಪ್ರೇಭ್ಯೋ ಯಥಾ ಸ್ಯಾತ್ತೃಪ್ತಿರುತ್ತಮಾ ॥ ೨೪ ॥

ಏತಚ್ಛ್ರುತ್ವಾ ಸ ರಾಜಾಗ್ರ್ಯಃ ಪೂಜ್ಯಂ ಮತ್ವಾ ಘಟೋದ್ಭವಂ ।
ಪ್ರಥಮಂ ಪೂಜಯಾಮಾಸ ಬ್ರಹ್ಮಪುತ್ರಂ ತಪೋನಿಧಿಂ ॥ ೨೫ ॥

ಅನೇಕರತ್ನಸಂಭಾರೈಃ ಸ್ವರ್ಣಭಾರೈರನೇಕಧಾ ।
ದೇಶೈರ್ಜನೈಃ ಪರಿಪೂರ್ಣೈರತ್ಯಂತಂ ಪ್ರೀತಿದಾಯಕೈಃ ॥ ೨೬ ॥

ಅಗಸ್ತ್ಯಂ ಪೂಜಯಾಮಾಸ ಸಪತ್ನೀಕಂ ಮನೋರಮಂ ।
ತಥೈವ ರತ್ನೈಃ ಸ್ವರ್ಣೈಶ್ಚ ದೇಶೈಶ್ಚ ವಿವಿಧೈರಪಿ ।
ವ್ಯಾಸಂ ಸತ್ಯವತೀಪುತ್ರಂ ತಥೈವ ಸಮಪೂಜಯತ್ ॥ ೨೭ ॥

---

೨೨. ಮರುತ್ತರಾಜನೇ ಮೊದಲು ಯಾಗಮಾಡಿದವನು. ಎಲ್ಲಾ ಸಿದ್ಧತೆಗಳನ್ನೂ ಸೇರಿಸಿಕೊಂಡು ಕ್ರಮವಾಗಿ ಮಾಡಿದನು. ಆಗ ಹಣ ಮುಂತಾದವುಗಳಿಂದ ಬ್ರಾಹ್ಮಣರನ್ನು ಅತಿಯಾಗಿ ಸಂತೋಷಪಡಿಸಿದನು.

೨೩, ಅವರು ತಮಗೆ ಕೊಟ್ಟ ದುಡ್ಡನ್ನು ತೆಗೆದುಕೊಂಡು ಹೋಗಲಾರದೆ ಹಿಮವತ್ಪರ್ವತದ ಪಕ್ಕದಲ್ಲಿ ಹಾಕಿಬಿಟ್ಟರು.

೨೪. ಎಲೈ ರಾಜನೇ, ನೀನು ಕೂಡ ಹಣವುಳ್ಳವನು, ಅವರಿಗೆ ಸಂತೋಷವಾಗುವವರೆಗೂ ಹಣವನ್ನು ಕೊಡು. ಎನ್ನಲು.

೨೫. ಇದನ್ನು ಕೇಳಿ ಆ ರಾಘವನು ಅಗಸ್ತ್ಯನು ಪ್ರಥಮ ಪೂಜಾರ್ಹನೆಂದು ತಿಳಿದು ಪೂಜಿಸಿದನು.

೨೬. ಅನೇಕವಾದ ರತ್ನ, ಚಿನ್ನ, ದೇಶ ಮುಂತಾದುವುಗಳನ್ನು ಕೊಟ್ಟು ಪೂಜಿಸಿದನು. ಈ ರೀತಿ ಸಪತ್ನೀಕನಾದ ಅಗಸ್ತ್ಯನನ್ನು ಪೂಜಿಸಿದನು.

೨೭. ಅದೇ ರೀತಿ ಅನೇಕ ರತ್ನಗಳು ದೇಶ, ಕೋಶ ಮುಂತಾದವುಗಳಿಂದ ಋಷಿಯನ್ನೂ ಪೂಜೆಮಾಡಿದನು.

ಚ್ಯವನಂ ಭಾರ್ಯಯಾ ಸಾಕಂ ಸುರತ್ನೈಸ್ಸಮಪೂಜಯತ್ ॥ ೨೮ ॥

ಅನ್ಯಾನಪಿ ಮುನೀನ್ಸರ್ವಾನೃತ್ವಿಜಸ್ತಪಸಾಂ ನಿಧೀನ್ ।
ಪೂಜಯಾಮಾಸ ರತ್ನಾದ್ಯೈಃ ಸ್ವರ್ಣಭಾರೈರನೇಕಧಾ ॥ ೨೯ ॥

ಅದಾತ್ತದಾ ಕ್ರತೌ ರಾಮೋ ವಿಪ್ರೇಭ್ಯೋ ಭೂರಿದಕ್ಷಿಣಾಂ ।
ಲಕ್ಷಂ ಲಕ್ಷಂ ಸುವರ್ಣಸ್ಯ ಪ್ರತ್ಯೇಕಂ ತ್ವಗ್ರಜನ್ಮನೇ ॥ ೩೦ ॥

ದೀನಾಂಧಕೃಪಣೇಭ್ಯಶ್ಚ ದದೌ ದಾನಮನೇಕಧಾ ।
ಯಥಾಸಂತೋಷವಿಹಿತೈರ್ವಿತ್ತೈ ರತ್ನೈರ್ಮನೋಹರೈಃ ॥ ೩೧ ॥

ವಾಸಾಂಸಿ ಚ ವಿಚಿತ್ರಾಣಿ ಭೋಜನಾನಿ ಮೃದೂನಿ ಚ ।
ತತ್ರ ಪ್ರಾದಾದ್ಯಥಾಶಾಸ್ತ್ರಂ ಸರ್ವೇಷಾಂ ಪ್ರೀತಿಕಾರಕಂ ॥ ೩೨ ॥

ಹೃಷ್ಟಪುಷ್ಟಜನಾಕೀರ್ಣಂ ಸರ್ವಸತ್ತ್ವೋಪಬೃಂಹಿತಂ ।
ಅತ್ಯಂತಮಭವದ್ಧೃಷ್ಟಂ ಪುರಂ ಪುಂಸ್ತ್ರೀಸಮಾವೃತಂ ॥ ೩೩ ॥

---

೨೮. ಚ್ಯವನ ದಂಪತಿಗಳನ್ನೂ ಅಂತೆಯೇ ಪೂಜಿಸಿದನು.

೨೯. ಮಿಕ್ಕ ಋಷಿಗಳನ್ನೂ, ಋತ್ವಿಕ್ಕುಗಳನ್ನೂ ರತ್ನ ಸ್ವರ್ಣ ಮುಂತಾದುವುಗಳಿಂದ ಪೂಜಿಸಿದನು.

೩೦. ಆಗ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಲಕ್ಷ ಲಕ್ಷ ಸಂಖ್ಯೆಯುಳ್ಳ ಸುವರ್ಣ ನಾಣ್ಯಗಳನ್ನು ಕೊಟ್ಟನು.

೩೧. ದೀನರು, ಅಂಧರು, ಕೃಪಣರುಗಳಿಗೆ ಅವರವರಿಗೆ ಸಂತೋಷವಾಗುವವರೆಗೂ ಹಣವನ್ನು ಕೊಟ್ಟನು.

೩೨. ನಾನಾಬಗೆಯ ಬಟ್ಟೆ ಭೋಜನಗಳನ್ನೂ ಅವರಿಗೆ ಶಾಸ್ತ್ರೋಕ್ತವಾಗಿ ತೃಪ್ತಿಯಾಗುವವರೆಗೂ ಕೊಟ್ಟನು.

೩೩. ಆ ಊರು ಸಂತೋಷ ಗಟ್ಟಿಗತನಗಳಿಂದ ಕೂಡಿದ ಜನರಿಂದಲೂ, ಎಲ್ಲಾ ವಿಧವಾದ ಪ್ರಾಣಿಗಳಿಂದಲೂ, ಹೆಂಗಸರು ಗಂಡಸರಿಂದಲೂ ತುಂಬಿದ್ದಿತು.

ದಾನಂ ದದತಂ ಸರ್ವೇಷಾಂ ವೀಕ್ಷ್ಯ ಕುಂಭೋದ್ಭವೋ ಮುನಿಃ ।
ಅತ್ಯಂತಂ ಪರಮಪ್ರೀತಿಂ ಯಯೌ ಕ್ರತುವರೇ ದ್ವಿಜಃ ॥ ೩೪ ॥

ತದಾ ಕ್ಷಾಳನತೋಯಾರ್ಥಂ ಪಾನೀಯಮಮೃತೋಪಮಂ ।
ಆನೇತುಂ ಚ ಚತುಃಷಷ್ಟಿ ನೃಪಾನ್ಸಸ್ತ್ರೀನ್ಸಮಾಹ್ವಯತ್ ॥ ೩೫ ॥

ರಾಮಸ್ತು ಸೀತಯಾ ಸಾಕಮಾನೇತುಮುದಕಂ ಯಯೌ ।
ಘಟೇನ ಸ್ವರ್ಣವರ್ಣೇನ ಸ್ವರ್ಣಾಲಂಕಾರಶೋಭಯಾ ॥ ೩೬ ॥

ಸೌಮಿತ್ರಿರೂರ್ಮಿಲಯಾ ಚ ಮಾಂಡವ್ಯಾ ಭರತೋ ನೃಪ ।
ಶತ್ರುಘ್ನಶ್ಶ್ರುತಕೀರ್ತ್ಯಾ ಚ ಕಾಂತಿಮತ್ಯಾ ಚ ಪುಷ್ಕಲಃ ॥ ೩೭ ॥

ಸುಬಾಹುಸ್ಸತ್ಯವತ್ಯಾ ಚ ಸತ್ಯವಾನ್ವೀರಭೂಷಯಾ ।
ಸುಮದಸ್ತತ್ರ ಸತ್ಕೀರ್ತ್ಯಾ ರಾಜ್ಞ್ಯಾ ಚ ವಿಮಲೋ ನೃಪಃ ॥ ೩೮ ॥

ರಾಜಾ ವೀರಮಣಿಸ್ತತ್ರ ಶ್ರುತವತ್ಯಾ ಮನೋಜ್ಞಯಾ ।
ಲಕ್ಷ್ಮೀನಿಧಿಃ ಕೋಮಲಯಾ ರಿಪುತಾಪೋಽಂಗಸೇನಯಾ ॥ ೩೯ ॥

ವಿಭೀಷಣೋ ಮಹಾಮೂರ್ತ್ಯಾ ಪ್ರತಾಪಾಗ್ರ್ಯಃ ಪ್ರತೀತಯಾ ।
ಉಗ್ರಾಶ್ವಃ ಕಾಮಗಮಯಾ ನೀಲರತ್ನೋಽಧಿರಮ್ಯಯಾ ॥ ೪೦ ॥

---

೩೪. ಎಲ್ಲರಿಗೂ ಯಥೇಷ್ಟವಾಗಿ ದಾನಕೊಡುತ್ತಿರುವುದನ್ನು ನೋಡಿ ಅಗಸ್ತ್ಯನು ಬಹು ಸಂತೋಷಪಟ್ಟನು.

೩೫. ಮಂಗಳೋದಕ ನೀರನ್ನು ತರಲು ಅರವತ್ತುನಾಲ್ಕು ಜನ ರಾಜದಂಪತಿಗಳನ್ನು ಕರೆಸಿದನು.

೩೬. ರಾಜನು ಒಳ್ಳೆಯ ಉಡುಗೆ ತೊಡಿಗೆಗಳನ್ನು ಹೊಂದಿ ಚಿನ್ನದ ಬಿಂದಿಗೆಯನ್ನು ತೆಗೆದುಕೊಂಡಿರುವ ಸೀತೆಯೊಡನೆ ನೀರು ತರಲು ಹೊರಟನು.

೩೭-೪೧. ಊರ್ಮಿಳಾ ಲಕ್ಷ್ಮಣರೂ, ಮಾಂಡವೀಭರತರೂ, ಶ್ರುತಕೀರ್ತಿ ಶತ್ರುಘ್ನರೂ, ಕಾಂತಿಮತೀ ಪುಷ್ಕಲರೂ, ಸತ್ಯವತಿ ಸುಬಾಹುಗಳೂ, ವೀರಭೂಷಾ ಸತ್ಯವಂತರೂ, ಸತ್ಕೀರ್ತಿಸುಮದರೂ, ರಾಜ್ಞೀವಿಮಲರೂ, ಶ್ರುತವತೀ ವೀರಮಣಿಯರೂ, ಕೋಮಲಾ ಲಕ್ಷ್ಮೀನಿಧಿಯರೂ. ಅಂಗಸೇನಾ ರಿಪುತಾಪರೂ, ಮಹಾಮೂರ್ತಿ

ಸುರಥಸ್ಸುಮನೋಹಾರ್ಯಾ ತಥಾ ಮೋಹನಯಾ ಕಪಿಃ ।
ಇತ್ಯಾದಿನ್ನೃಪತೀನ್ವಿಪ್ರೋ ವಸಿಷ್ಠಃ ಪ್ರಾಹಿಣೋನ್ಮುನಿಃ ॥ ೪೧ ॥

ವಸಿಷ್ಠಸ್ಸರಯೂಂ ಗತ್ವಾ ಶಿವಪುಣ್ಯಜಲಾಪ್ಲುತಾಂ ।
ಉದಕಂ ಮಂತ್ರಯಾಮಾಸ ವೇದಮಂತ್ರೇಣ ಮಂತ್ರವಿತ್ ॥ ೪೨ ॥

ಪಯಃ ಪುನೀಹ್ಯಮುಂ ವಾಹಮುದಕೇನ ಮನೋಹೃತಾ ।
ಯಜ್ಞಾರ್ಥಂ ರಾಮಚಂದ್ರಸ್ಯ ಸರ್ವಲೋಕೈಕರಕ್ಷಿತುಃ ॥ ೪೩ ॥

ಉದಕಂ ತನ್ಮುನಿಸ್ಪೃಷ್ಟಂ ಸರ್ವೇ ರಾಮಾದಯೋ ನೃಪಾಃ ।
ಆಜಹ್ರುರ್ಮಂಟಪತಲೇ ವಿಪ್ರವರ್ಯೈರುಪಸ್ಕೃತೇ ॥ ೪೪ ॥

ಪಯೋಭಿರ್ನಿರ್ಮಲೈಸ್ಸ್ಪೃಷ್ಯ ವಾಜಿನಂ ಕ್ಷೀರಸನ್ನಿಭಂ ।
ಮಂತ್ರೇಣ ಮಂತ್ರಯಾಮಾಸ ರಾಮಹಸ್ತೇನ ಕುಂಭಜಃ ॥ ೪೫ ॥

---

ವಿಭೀಷಣರೂ, ಪ್ರತೀತಾಪ್ರತಾಪಾಗ್ರ್ಯರೂ, ಕಾಮಗಮಾ ಉಗ್ರಾಶ್ವರೂ, ಅಧಿರವ್ಯ ನೀಲರತ್ನರೂ, ಸುಮನೋಹಾರಿ ಸುರಥರೂ, ಮೋಹನಾ ಸುಗ್ರೀವರೂ. ಇವರೇ ಮೊದಲಾದವರನ್ನು ವಸಿಷ್ಠನು ಕಳುಹಿಸಿದನು

೪೨. ವಸಿಷ್ಠನು ಉತ್ತಮವಾದ ಜಲವುಳ್ಳ ಆ ಸರಯೂ ನೀರನ್ನು ವೇದ ಮಂತ್ರಗಳಿಂದ ಮಂತ್ರಿಸಿದನು.

೪೩. ಒಳ್ಳೆಯ ತೀರ್ಥದಿಂದ ಕೂಡಿರುವ ನದಿಯೇ! ಸರ್ವ ಲೋಕರಕ್ಷಕನಾದ ರಾಮಚಂದ್ರನ ಈ ಕುದುರೆಯನ್ನು ಪವಿತ್ರವನ್ನಾಗಿಮಾಡು.

೪೪. ಆ ಋಷಿಯು ಮಂತ್ರಿಸಿದ ತೀರ್ಥವನ್ನು ರಾಮಾದಿಗಳು ಬ್ರಾಹ್ಮಣರೊಡನೆ ಮಂಟಪಕ್ಕೆ ತಂದರು.

೪೫. ಬೆಳ್ಳಗಿರುವ ಆ ಕುದುರೆಯನ್ನು ಆ ನಿರ್ಮಲವಾದ ನೀರಿನಿಂದ ಅಗಸ್ತ್ಯನು ರಾಮನ ಕೈಯಲ್ಲಿ ಮಂತ್ರಿಸಿಸಿದನು.

ಪುನೀಹಿ ಮಾಂ ಮಹಾವಾಹ ಅಸ್ಮಿನ್ಬ್ರಹ್ಮಸಮಾಕುಲೇ ।
ತ್ವನ್ಮೇಧೇನಾಖಿಲಾ ದೇವಾಃ ಪ್ರೀಣಂತು ಪರಿತೋಷಿತಾಃ ॥ ೪೬ ॥

ಇತ್ಯುಕ್ತ್ವಾ ಸ ನೃಪೋ ರಾಮಃ ಸೀತಯಾ ಸಮನುಸ್ಪೃಶತ್ ।
ತದಾ ಸರ್ವೇ ದ್ವಿಜಾಶ್ಚಿತ್ರಮನುಮುಸ್ಯಂತ ಕುತೂಹಲಾತ್ ॥ ೪೭ ॥

ಪರಸ್ಪರಮವೋಚಂಸ್ತೇ ಯನ್ನಾಮಸ್ಮರಣಾನ್ನರಾಃ ।
ಮಹಾಪಾಪಾತ್ಪ್ರಮುಚ್ಯಂತೇ ಸ ರಾಮಃ ಕಿಂ ವದತ್ಯಹೋ ॥ ೪೮ ॥

ಇತ್ಯುಕ್ತವತಿ ಭೂಮೀಶೇ ರಾಮೇ ಕುಂಭೋದ್ಭವೋ ಮುನಿಃ ।
ಕರವಾಳಂ ಚಾಭಿಮಂತ್ರ್ಯ ದದೌ ರಾಮಕರೇ ಮುನಿಃ ॥ ೪೯ ॥

ಕರವಾಳೇ ಧೃತೇ ಸ್ಪೃಷ್ಟೇ ರಾಮೇಣ ಸ ಹಯಃ ಕ್ರತೌ ।
ಪಶುತ್ವಂ ತು ವಿಹಾಯಾಶು ದಿವ್ಯರೂಪಮಪದ್ಯತ ॥ ೫೦ ॥

---

೪೬. ಈ ಬ್ರಾಹ್ಮಣರ ಸಮೂಹದಲ್ಲಿ ಎಲೈ ಯಜ್ಞದ ಕುದುರೆಯೇ. ನನ್ನನ್ನು ಪವಿತ್ರನನ್ನಾಗಿ ಮಾಡು, ಈ ನಿನ್ನ ಯಾಗದಿಂದ ಎಲ್ಲಾ ದೇವತೆಗಳೂ ತೃಪ್ತಿಯನ್ನು ಹೊಂದಲಿ.

೪೭. ಇಂತೆಂದು ಹೇಳಿ ಆ ರಾಮನೂ ಸೀತೆಯೂ, ಕುದುರೆಯನ್ನು ಸವರಿದರು. ಆಗ ಬ್ರಾಹ್ಮಣರೆಲ್ಲರೂ ಆಶ್ಚರ್ಯವೆಂದು ಸೋಜಿಗಪಟ್ಟರು.

೪೮. ಯಾವ ರಾಮನಾಮಸ್ಮರಣೆಯಿಂದ ನರರು ಮಹಾಪಾತಕದಿಂದ ಮುಕ್ತರಾಗುತ್ತಾರೆಯೋ ಅಂತಹ ರಾಮನು ಹೇಳುತ್ತಿರುವುದನ್ನು ಕೇಳಿದಿರಾ ! ಎಂದು ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದರು.

೪೯. ರಾಮನು ಹೀಗೆ ಹೇಳಿದನಂತರ ಅಗಸ್ತ್ಯನು ಕತ್ತಿಯನ್ನು ಮಂತ್ರಿಸಿ ರಾಮನ ಕೈಗೆ ಕೊಟ್ಟನು.

೫೦. ರಾಮನು ಆ ಯಾಗದಲ್ಲಿ ಆ ಪಶುವನ್ನು ಕತ್ತಿಯಿಂದ ವಧಿಸುವುದಕ್ಕೆ ಮುಟ್ಟಿದೊಡನೆಯೇ ಆ ಕುದುರೆಯು ಪಶುತ್ವವನ್ನು ಬಿಟ್ಟು ದಿವ್ಯರೂಪವನ್ನು ಹೊಂದಿತು.

ವಿಮಾನವರಮಾರೂಢಶ್ಚಾಪ್ಸರೋಭಿಃ ಸಮನ್ವಿತಃ ।
ಚಾಮರೈರ್ವೀಜ್ಯಮಾನಶ್ಚ ವೈಜಯಂತ್ಯಾ ವಿಭೂಷಿತಃ ॥ ೫೧ ॥

ತದಾ ತಂ ವಾಜಿತಾಂ ತ್ಯಕ್ತ್ವಾ ದಿವ್ಯರೂಪಧರಂ ನರಂ ।
ವೀಕ್ಷ್ಯ ಲೋಕಾಃ ಕ್ರತೌ ಸರ್ವೇ ವಿಸ್ಮಯಂ ಪ್ರಾಪ್ನುವಂಸ್ತದಾ ॥ ೫೨ ॥

ತದಾ ರಾಮಃ ಸ್ವಯಂ ಜಾನನ್ಜ್ಞಾಪಯನ್ಸರ್ವತೋ ನರಾನ್ ।
ಪ್ರಪಚ್ಛ ದಿವ್ಯರೂಪಸ್ಥಂ ಸುರಂ ಪರಮಧಾರ್ಮಿಕಃ ॥ ೫೩ ॥

॥ ಶ್ರೀರಾಮ ಉವಾಚ ॥

ಕಸ್ತ್ವಂ ದಿವ್ಯವಪುಃ ಪ್ರಾಪ್ತಃ ಕಸ್ಮಾತ್ತ್ವಂ ವಾಜಿತಾಂ ಗತಃ ।
ಕಥಂ ಸುರಸ್ತ್ರೀಸಹಿತಃ ಕಿಂ ಚಿಕೀರ್ಷಸಿ ತದ್ವದ ॥ ೫೪ ॥

ರಾಮಸ್ಯ ವಚನಂ ಶ್ರುತ್ವಾ ದೇವಃ ಪ್ರೋವಾಚ ಭೂಮಿಪಂ ।
ಪ್ರಸನ್ನೋ ಘರವಾಂ ವಾಣೀಮವದತ್ಸುಮನೋಹರಾಂ ॥ ೫೫ ॥

॥ ದೇವ ಉವಾಚ ॥

ತವಾಜ್ಞಾತಂ ನ ಸರ್ವತ್ರ ಬಾಹ್ಯಾಭ್ಯಂತರಚಾರಿಣಃ ।
ತಥಾಪಿ ಪೃಚ್ಛತೇ ತುಭ್ಯಂ ಕಥಯಾಮಿ ಯಥಾತಥಂ ॥ ೫೬ ॥

---

೫೧. ಒಳ್ಳೆಯ ವಿಮಾನದಲ್ಲಿ ಕುಳಿತು ಅಪ್ಸರರೊಡನೆ ಕಲೆತು ಚಾಮರ ಗಳಿಂದ ಬೀಸಿಸಿಕೊಳ್ಳುತ್ತಾ ಹಾರದಿಂದಲಂಕೃತನಾಯಿತು.

೫೨. ಆಗ ಆ ಕುದುರೆಯು ಕುದುರೆಯ ರೂಪವನ್ನು ಬಿಟ್ಟು ಸುಂದರನಾದ ಮನುಷ್ಯನಾದುದನ್ನು ನೋಡಿ ಆ ಯಾಗದಲ್ಲಿದ್ದವರೆಲ್ಲರೂ ಆಶ್ಚರ್ಯಹೊಂದಿದರು.

೫೩. ಆಗ ರಾಮನು ತನಗೆ ಗೊತ್ತಿದ್ದರೂ ಜನಗಳಿಗೆ ತಿಳಿಸುವುದಕ್ಕೋಸ್ಕರ ದಿವ್ಯರೂಪವನ್ನು ಹೊಂದಿರುವ ಮನುಷ್ಯನನ್ನು ಇಂತೆಂದು ಕೇಳಿದನು.

೫೪. ದಿವ್ಯವಪುವನ್ನು ಹೊಂದಿರುವ ನೀನಾರು ? ಏತಕ್ಕೆ ಕುದುರೆಯಾದೆ ? ಏತಕ್ಕೆ ಈ ದೇವಸ್ತ್ರೀಯರೊಡನಿದ್ದೀಯೆ? ಏನು ಮಾಡುತ್ತೀ ? ಹೇಳು.

೫೫. ರಾಮನ ಮಾತನ್ನು ಕೇಳಿ ಗಂಭೀರವಾದ ಧ್ವನಿಯಿಂದ ಇಂತೆಂದನು.

೫೬. ದೇವನು ಹೇಳಿದನು :— ಒಳಗೆ ಹೊರಗೆ ಎಲ್ಲಾ ಕಡೆಯಲ್ಲೂ ಇರುವ ನಿನಗೆ ತಿಳಿಯದಿರುವ ವಿಷಯವು ಒಂದೂ ಇಲ್ಲ. ಆದರೂ ನೀನು ಕೇಳಿದುದರಿಂದ ಇರುವ ವಿಷಯವನ್ನು ಹೇಳುತ್ತೇನೆ.

ಅಹಂ ಪುರಾಭವೇ ರಾಮ ದ್ವಿಜಃ ಪರಮಧಾರ್ಮಿಕಃ ।
ಚಚಾರ ಪ್ರತಿಕೂಲಂ ತು ದೇವಸ್ಯ ರಿಪುತಾಪನ ॥ ೫೭ ॥

ಕದಾಚಿದ್ಧೂತಪಾಪಾಯಾಸ್ತೀರೇಽಹಂ ಗತವಾನ್ಪುರಾ ।
ಅನೇಕವೃಕ್ಷಲಲಿತೇ ಸರ್ವತ್ರ ಸುಮನೋರಮೇ ॥ ೫೮ ।

ತತ್ರ ಸ್ನಾತ್ವಾ ಪಿತೄಂಸ್ತೃಪ್ತ್ವಾ ದಾನಂ ದತ್ವಾ ಯಥಾವಿಧಿ ।
ಧ್ಯಾನಂ ತವ ಮಹಾಬಾಹೋ ಕೃತವಾನ್ ವೇದಸಮ್ಮಿತಂ ॥ ೫೯ ॥

ತದಾ ಜನಾಸ್ಸಮಾಯಾತಾ ಬಹವಸ್ತತ್ರ ಭೂಪತೇ ।
ತೇಷಾಂ ಪ್ರವಂಚನಾರ್ಥಾಯ ದಂಭಮೇನಮಕಾರಿಷಂ ॥ ೬೦ ॥

ಅನೇಕಕ್ರತುಸಂಭಾರೈಃ ಪೂರ್ಣಮಜಿರಮುತ್ತಮಂ ।
ವಾಸೋಭಿಶ್ಛಾದಿತಂ ರಮ್ಯಂ ಚಷಾಲಾದಿಯುತಂ ಮಹತ್ ॥ ೬೧ ॥

ಅಗ್ನಿಹೋತ್ರೋದ್ಭವೋ ಧೂಮಃ ಸರ್ವತೋ ನಭಸೋಂಗಣಂ ।
ಚಕಾರ ರಮ್ಯಮತುಲಂ ಚಿತ್ರಕಾರಿವಪುರ್ಧರಃ ॥ ೬೨ ॥

---

೫೭. ಎಲೈ ರಾಮನೇ, ನಾನು ಹಿಂದಿನ ಜನ್ಮದಲ್ಲಿ ಧರ್ಮಿಷ್ಠನಾದ ಬ್ರಾಹ್ಮಣನು. ಸ್ವಾಮಿಗೆ ಪ್ರತಿಕೂಲವಾಗಿ ನಡೆದೆನು.

೫೮. ಒಂದು ಸಾರಿ ಅನೇಕ ವೃಕ್ಷಗಳಿಂದ ಕೂಡಿದ ಮನೋಹರವಾದ ಧೂತಪಾಪೆಯ ತೀರಕ್ಕೆ ಹೋಗಿದ್ದೆನು.

೫೯. ಅಲ್ಲಿ ಸ್ನಾನಮಾಡಿ ಪಿತೃತರ್ಪಣಮಾಡಿ ದಾನಗಳನ್ನು ಕೊಟ್ಟು ವೇದೋಕ್ತವಾಗಿ ಧ್ಯಾನವನ್ನೂ ಮಾಡಿದೆನು.

೬೦. ಅಲ್ಲಿಗೆ ಬಹಳ ಜನರು ಬಂದರು. ಅವರನ್ನು ವಂಚಿಸಲು ದಂಭಕ್ಕೆ ಮೊದಲುಮಾಡಿದೆನು.

೬೧. ಯಾಗಕ್ಕೋಸ್ಕರ ಅನೇಕ ಬಗೆಯ ಸಾಮಾನುಗಳನ್ನು ಸಿದ್ಧಮಾಡಿಕೊಂಡೆನು. ಅದಕ್ಕೆ ಬೇಕಾದ ಬಟ್ಟೆ ಸೌಟುಗಳನ್ನು ಸಿದ್ಧಪಡಿಸಿಕೊಂಡೆನು.

೬೨. ಅಗ್ನಿಹೋತ್ರದಿಂದ ಹುಟ್ಟಿದ ಹೊಗೆಯು ಚಿತ್ರಚಿತ್ರವಾಗಿ ಎಲ್ಲಾ ಕಡೆಯಲ್ಲೂ ಹರಡಿದ್ದಿತು.

ಅನೇಕತಿಲಕಶ್ಚಿತ್ರೈಃ ಶೋಭಿತಾಂಗೋ ಮಹಾತಪಃ ।
ದರ್ಭಶೋಭೀ ಸಮಿತ್ಪಾಣಿರ್ದಂಭೋ ಮೂರ್ತಿಧರಃ ಕಿಮು ॥ ೬೩ ॥

ದುರ್ವಾಸಾಸ್ತತ್ರ ಸ್ವಚ್ಛಂದಂ ಪರ್ಯಟನ್ ಜಗತೀತಲಂ ।
ಪ್ರಾಪ ತತ್ರ ಮಹಾತೇಜಾ ಘೂತಪಾಪಸ್ಸರಿತ್ತಟೇ ॥ ೬೪ ॥

ದದರ್ಶ ಮಾಂ ದಂಭಕರಂ ಮೌನಧಾರಣಮುಗ್ರತಃ ।
ಅನರ್ಘ್ಯಕರಮುನ್ಮತ್ತಮಸ್ವಾಗತವಚಃಕರಂ ॥ ೬೫ ॥

ದೃಷ್ಟ್ವಾ ತೀವ್ರಕ್ರೋಧಾಕ್ರಾಂತಃ ಸಮುದ್ರ ಇವ ಪರ್ವಣಿ ।
ಶಶಾಪಾಸೌ ಮುನಿಸ್ತೀವ್ರೋ ದಂಭಿನಂ ಮಾಂ ಮಹಾಮತಿಃ ॥ ೬೬ ॥

॥ ದುರ್ವಾಸಾ ಉವಾಚ ॥

ಯದಿ ತ್ವಂ ಸರಯೂತೀರೇ ಕರೋಷಿ ದಂಭಮುಗ್ರಕಂ ।
ತಸ್ಮಾತ್ಪ್ರಾಪ್ನುಹಿ ನಿರ್ವಾಚ್ಯಂ ಪಶುತ್ವಂ ತಾಪಸಾಧಮ ॥ ೬೭ ॥

ಶಾಪಂ ಪ್ರದತ್ತಂ ಸಂಶ್ರುತ್ಯ ದುಃಖಿತೋಽಹಂ ತದಾಭವಂ ।
ಅಗ್ರಹೀಷಂ ಪದೇ ತಸ್ಯ ಮುನೇರ್ದುರ್ವಾಸಸಃ ಕಿಲ ॥ ೬೮ ॥

---

೬೩. ಅನೇಕವಾಗಿ ನ್ಮೈಗೆ ನಾಮಗಳನ್ನು ಬಳಿದುಕೊಂಡು ದರ್ಭೆಯನ್ನು ಹಾಕಿಕೊಂಡು ಸಮಿತ್ತನ್ನು ಹಿಡಿದುಕೊಂಡು ಮೂರ್ತಿವತ್ತಾದ ದಂಭದಂತೆಯೇ ತಪಸ್ವಿಸಿಂದ ಶೋಭಿಸುತ್ತಿದ್ದೆನು.

೬೪. ದೂರ್ವಾಸಋಷಿಯು ಸ್ವಚ್ಛಂದದಿಂದ ಭೂಮಿಯನ್ನು ಸುತ್ತುತ್ತಾ ಆ ನದಿಯ ದಡಕ್ಕೆ ಅಕಸ್ಮಾತ್ತಾಗಿ ಬಂದನು.

೬೫. ಮೌನದಿಂದಿದ್ದು ಅರ್ಘ್ಯಪಾದ್ಯಗಳನ್ನು ಕೊಡದೆ ಸ್ವಾಗತವನ್ನು ಕೋರದೇ ಇರುವ ದಂಭಕರನಾದ ನನ್ನನ್ನು ನೋಡಿದನು.

೬೬. ದಂಭಿಯಾದ ನನ್ನನ್ನು ನೋಡಿ ಪರ್ವಕಾಲದ ಸಮುದ್ರದಂತೆ ಕೋಪಗೊಂಡು ನನ್ನನ್ನು ಶಪಿಸಿದನು.

೬೭. ದುರ್ವಾಸನು ಹೇಳಿದನು :—ನೀನು ಸರಯೂನದಿಯ ತೀರದಲ್ಲಿ ದಂಭವನ್ನಾಚರಿಸುತ್ತಿರುವುದರಿಂದ ಪಶುವಾಗು ಎಂದನು.

೬೮. ಶಾಪಕೊಟ್ಟುದನ್ನು ತಿಳಿದು ದುಃಖಗೊಂಡು ಆ ದೂರ್ವಾಸನ ಪಾದಗಳನ್ನು ಹಿಡಿದೆನು.

ತದಾ ಮೇ ಕೃತವಾನ್ರಾಮ ದ್ವಿಜೋಽನುಗ್ರಹಮುತ್ತಮಂ ।
ವಾಜಿತಾಂ ಪ್ರಾಪ್ನುಹಿ ಮಖೇ ರಾಜರಾಜಸ್ಯ ತಾಪಸ ॥ ೬೯ ॥

ಪಶ್ಚಾತ್ತದ್ಧಸ್ತಸಂಪರ್ಕಾದ್ಯಾಹಿ ತತ್ಪರಮಂ ಪದಂ ।
ದಿವ್ಯಂ ವಪುರ್ಮನೋಹಾರಿ ಧೃತ್ವಾ ದಂಭವಿವರ್ಜಿತಂ ॥ ೭೦ ॥

ತೇನ ಶಾಪೋಽಪಿ ಸಂದಿಷ್ಟೋ ಮಮಾನುಗ್ರಹತಾಂ ಗತಃ ।
ಯದಹಂ ತವ ಹಸ್ತಸ್ಯ ಸ್ಪರ್ಶಂ ಪ್ರಾಪ್ತೋ ಮನೋರಮಂ ॥ ೭೧ ॥

ಯದೇವ ರಾಮ ದೇವಾದಿದುರ್ಲಭಂ ಬಹುಜನ್ಮಭಿಃ ।
ತತ್ತೇಽಹಂ ಕರಜಸ್ಪರ್ಶಂ ಪ್ರಾಪ್ತವಾನತಿದುರ್ಲಭಂ ॥ ೭೨ ॥

ಆಜ್ಞಾಪಯ ಮಹಾರಾಜ ತ್ವತ್ಪ್ರಸಾದಾದಹಂ ಮಹತ್ ।
ಗಚ್ಛಾಮಿ ಶಾಶ್ವತಂ ಸ್ಥಾನಂ ತವ ದುಃಖಾದಿವರ್ಜಿತಂ ॥ ೭೩ ॥

ನ ಯತ್ರ ಶೋಕೋ ನ ಜರಾ ನ ಮೃತ್ಯುಃ ಕಾಲವಿಭ್ರಮಃ ।
ತತ್ಸ್ಥಾನಂ ದೇವ ಗಚ್ಛಾಮಿ ತ್ವತ್ಪ್ರಸಾದಾನ್ನರಾಧಿಪ ॥ ೭೪ ॥

ಇತ್ಯುಕ್ತ್ವಾ ತಂ ಪರಿಕ್ರಮ್ಯ ವಿಮಾನವರಮಾರುಹತ್ ।
ಅನೇಕರತ್ನರಚಿತಂ ಸರ್ವದೇವಾದಿವಂದಿತಂ ॥ ೭೫ ॥

---

೬೯-೭೦. ಆಗ ಆ ತಾಪಸನೇ ನನಗೆ ಅನುಗ್ರಹಿಸಿದನು. ರಾಜರಾಜನಾದ ರಾಮನ ಯಾಗದ ಕುದುರೆಯಾಗಿ ಹುಟ್ಟು, ಆಮೇಲೆ ಅವನ ಕೈಸಂಪರ್ಕದಿಂದ ದಿವ್ಯವಾದ ಶರೀರವನ್ನು ಹೊಂದಿ ಪರಮಪದವನ್ನು ಹೊಂದು.

೭೧. ಆ ರಾಮನು ಮನೋಹರವಾದ ಕೈಯಿಂದ ಮುಟ್ಟಿದುದರಿಂದ ಆ ಶಾಪವೂ ನನಗೆ ಅನುಗ್ರಹವೇ ಆಗಿದೆ.

೭೨. ಬಹು ಜನ್ಮಗಳನ್ನು ಹೊಂದಿದರೂ ದೇವಾದಿಗಳಿಗೂ ಕೂಡ ಹೊಂದಲು ಸಿಕ್ಕದ ನಿನ್ನ ಕರಸ್ಪರ್ಶವನ್ನು ಹೊಂದಿದ್ದೇನೆ.

೭೩. ಮಹಾರಾಜನೇ, ಅಪ್ಪಣೆಕೊಡು. ನಿನ್ನ ಅನುಗ್ರಹದಿಂದ ದುಃಖವರ್ಜಿತವಾದ ನಿನ್ನ ಸ್ಥಾನವನ್ನೇ ಹೊಂದುತ್ತೇನೆ.

೭೪-೭೫. ಎಲ್ಲಿ ದುಃಖ, ಮುಪ್ಪು, ಮೃತ್ಯು, ಕಾಲದ ವ್ಯತ್ಯಾಸಗಳಿಲ್ಲವೋ ಅಂತಹ ಸ್ಥಾನವನ್ನು ನಿನ್ನ ಅನುಗ್ರಹದಿಂದ ಹೊಂದುತ್ತೇನೆ.

**ಗತೋಽಸೌ ಶಾಶ್ವತಂ ಸ್ಥಾನಂ ರಾಮಪಾದಪ್ರಸಾದತಃ ।**
**ಪುನರಾವೃತ್ತಿರಹಿತಂ ಶೋಕಮೋಹವಿವರ್ಜಿತಂ ॥ ೭೬ ॥**

**ತೇನ ತತ್ಕಥಿತಂ ಶ್ರುತ್ವಾ ರಾಮಂ ಜ್ಞಾತ್ವೇತರೇ ಜನಾಃ ।**
**ವಿಸ್ಮಯಂ ಪ್ರಾಪಿರೇ ಸರ್ವೇ ವರಸ್ಪರಮುದುನ್ಮದಾಃ ॥ ೭೭ ॥**

**ಶೃಣು ದ್ವಿಜ ಮಹಾಬುದ್ಧೇ ದಂಭೇನಾಪಿ ಸ್ಮೃತೋ ಹರಿಃ ।**
**ದದಾತಿ ಮೋಕ್ಷಂ ಸುತರಾಂ ಕಿಂ ಪುನರ್ದಂಭವರ್ಜಿತಾತ್ ॥ ೭೮ ॥**

**ಯಥಾಕಥಂಚಿದ್ರಾಮಸ್ಯ ಕರ್ತವ್ಯಂ ಸ್ಮರಣಂ ಪರಂ ।**
**ಯೇನ ಪ್ರಾಪ್ನೋತಿ ಪರಮಂ ಪದಂ ದೇವಾದಿದುರ್ಲಭಂ ॥ ೭೯ ॥**

**ತಚ್ಚಿತ್ರಂ ವೀಕ್ಷ್ಯ ಮುನಯೋ ಕೃತಾರ್ಥಂ ಮೇನಿರೇ ನಿಜಂ ।**
**ಯದ್ರಾಮಚರಣಪ್ರೇಕ್ಷಾಕರಸ್ಪರ್ಶಪವಿತ್ರಿತಂ ॥ ೮೦ ॥**

---

೭೬. ಮತ್ತು ಪುನರಾವೃತ್ತಿರಹಿತವಾದ, ಶೋಕಮೋಹಗಳಿಲ್ಲದ ಶಾಶ್ವತ ಸ್ಥಾನವನ್ನು ರಾಮನಾದ ನಿನ್ನ ಅನುಗ್ರಹದಿಂದ ಹೊಂದಿದನು.

೭೭. ಅವನು ಹೇಳಿದುದನ್ನು ಕೇಳಿ ಜನರೆಲ್ಲರೂ ರಾಮನ ಸ್ವರೂಪವನ್ನು ತಿಳಿದು ಆಶ್ಚರ್ಯವನ್ನು ಹೊಂದಿದರು.

೭೮. ಹರಿಯನ್ನು ದಂಭದಿಂದ ಸ್ಮರಿಸಿದರೂ ಕೂಡ ಉತ್ತಮ ಗತಿಯನ್ನೇ ಕೊಡುವಾಗ್ಯೆ ದಂಭವನ್ನು ಬಿಟ್ಟು ಸ್ಮರಿಸಿದರೆ ಹೇಳತಕ್ಕದ್ದೇನಿದೆ?

೭೯. ಹೇಗಾದರೂ ರಾಮಸ್ಮರಣೆಯನ್ನು ಮಾಡಬೇಕು. ಅದರಿಂದ ಉತ್ತಮಪದವನ್ನು ಹೊಂದುತ್ತಾನೆ.

೮೦. ಅದರಿಂದ ಆ ಋಷಿಗಳು ತಾವು ಕೃತಾರ್ಥರಾದವೆಂದು ತಿಳಿದರು. ಅವನ ಕರಸ್ಪರ್ಶವೂ ಚರಣದರ್ಶನವೂ ಆಗುವುದಷ್ಟೆ!

ಗತೇ ತಸ್ಮಿನ್ಸುರೇ ಸ್ವರ್ಗಂ ಹಯರೂಪಧರೇ ಪುರಾ ।
ಉವಾಚ ರಾಮಸ್ತಪಸಾಂ ನಿಧೀನ್ವೇದವಿದುತ್ತಮಾನ್ ॥ ೮೧ ॥

॥ ಶ್ರೀರಾಮ ಉವಾಚ ॥

ಕಿಂ ಕರ್ತವ್ಯಂ ಮಯಾ ಬ್ರಹ್ಮನ್ ಹಯೋ ನಷ್ಟೋ ಗತಸ್ಸುಖಂ ।
ಹೋಮಃ ಕಥಂ ಪುರೋ ಭಾವೀ ಸರ್ವದೈವತತರ್ಪಕಃ ॥ ೮೨ ॥

ಯಥಾ ಸ್ಯಾತ್ಸುರಸಂತೃಪ್ತಿರ್ಯಥಾ ಮೇ ಮಖ ಉತ್ತಮಃ ।
ತಥಾ ಕುರ್ವಂತು ಮುನಯೋ ಯಥಾ ಮೇ ಸ್ಯಾದ್ವಿಧಿಶ್ರುತಂ ॥ ೮೩ ॥

ಇತಿ ವಾಕ್ಯಂ ಸಮಾಶ್ರುತ್ಯ ಜಗಾದ ಮುನಿಸತ್ತಮಃ ।
ವಸಿಷ್ಠಸ್ಸರ್ವದೇವಾನಾಂ ಚಿತ್ತಾಭಿಜ್ಞಾನಕೋವಿದಃ ॥ ೮೪ ॥

ಕರ್ಪೂರಂ ಸಮಾಹರ ಕ್ಷಿಪ್ರಂ ಯೇನ ದೇವಾಃ ಸ್ವಯಂ ಪುರಃ ।
ಪ್ರಾಪ್ಯ ಹವ್ಯಂ ಗ್ರಹೀಷ್ಯಂತಿ ಮದ್ವಾಕ್ಯಪ್ರೇರಿತಾಧುನಾ ॥ ೮೫ ।

---

೮೧. ಹಯರೂಪ ಧರಿಸಿದ್ದ ಆ ದೇವನು ಸ್ವರ್ಗಕ್ಕೆ ಹೋಗಲು ರಾಮನು ಋಷಿಗಳಿಗಿಂತೆಂದನು.

೮೨. ಶ್ರೀರಾಮನು ಹೇಳಿದನು:—ಎಲೈ ಬ್ರಹ್ಮನೇ, ಈಗೇನು ಮಾಡಬೇಕು? ಕುದುರೆಯನ್ನು ಮುಟ್ಟಿದಕೂಡಲೇ ಸುರನಾಗಿ ಹೊರಟುಹೋದನು. ಸುಖ ನಷ್ಟವಾಯಿತಲ್ಲವೇ?

೮೩. ದೇವತೆಗಳಿಗೆ ತೃಪ್ತಿಯಾಗುವಂತೆಯೂ, ನನ್ನ ಯಾಗವು ಉತ್ತಮವಾಗುವಂತೆಯೂ, ವಿಧಿವತ್ತಾಗುವಂತೆಯೂ ಮಾಡಿಸಿ.

೮೪. ಈ ಮಾತನ್ನು ಕೇಳಿ ಮನಸ್ಸುಗಳನ್ನೂ ತಿಳಿಯುವುದರಲ್ಲಿ ಚತುರನಾದ ವಸಿಷ್ಠನು ಇಂತೆಂದನು.

೮೫. ಕರ್ಪೂರವನ್ನು ಶೀಘ್ರವಾಗಿ ತೆಗೆದುಕೊಂಡು ಬಾ. ಅದನ್ನು ಕಂಡರೆ ದೇವತೆಗಳು ತೃಪ್ತಿಪಡುತ್ತಾರೆ. ಆದರಿಂದ ನನ್ನ ಮಾತಿನಂತೆ ದೇವತೆಗಳು ಹವಿಸ್ಸನ್ನು ತೆಗೆದುಕೊಳ್ಳಲಿ.

ಇತಿ ವಾಕ್ಯಂ ಸಮಾಕರ್ಣ್ಯ ರಾಮಃ ಕ್ಷಿಪ್ರಮುಪಾಹರತ್ ।
ಕರ್ಪೂರಂ ಬಹು ದೇವಾನಾಂ ಪ್ರೀತ್ಯರ್ಥಂ ಬಹುಶೋಭನಂ ॥ ೮೬

ತದಾ ಮುನಿಃ ಪ್ರಹೃಷ್ಟಾತ್ಮಾ ದೇವಾನಾಹ್ವಯದದ್ಭುತಾನ್ ।
ತೇ ಸರ್ವೇ ತತ್ಕ್ಷಣಾತ್ಪ್ರಾಪ್ತಾಃ ಸ್ವಪರೀವಾರಸಂಯುತಾಃ ॥ ೮೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಯಜ್ಞಪ್ರಾರಂಭವರ್ಣನಂ ನಾಮ
ಸಪ್ತಷಷ್ಟಿತಮೋಽಧ್ಯಾಯಃ

---

೮೬. ಈ ಮಾತನ್ನು ಕೇಳಿದೊಡನೆಯೇ ಶ್ರೀರಾಮಚಂದ್ರನು ಕರ್ಪೂರವನ್ನು ತಂದನು. ಕರ್ಪೂರವು ದೇವತೆಗಳಿಗೆ ಬಹು ಪ್ರೀತಿ ಕರವು. ಮತ್ತೂ ಬಹು ಮಂಗಳಕರವಾದುದ್ದು.

೮೭. ಆಗ ವಸಿಷ್ಠನು ಸಂತೋಷಗೊಂಡು ದೇವತೆಗಳನ್ನು ಕರೆಯಲು ಒಡನೆಯೇ ಅವರೆಲ್ಲರೂ ಪರಿವಾರದೊಡನೆ ಬಂದುಬಿಟ್ಟರು.

ಇಲ್ಲಿಗೆ ಶ್ರೀಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಯಜ್ಞಪ್ರಾರಂಭ ವರ್ಣನವೆಂಬ
ಅರವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಷಷ್ಟಿತಮೋಽಧ್ಯಾಯಃ

॥ ಶೇಷ ಉವಾಚ ॥

ಇಂದ್ರಸ್ತತ್ರ ಹವಿರ್ಮೃಷ್ಟಂ ರಾಮಚಂದ್ರೇಣ ವೀಕ್ಷಿತಂ ।
ಪರಿಸ್ವಾದನ್ಕ್ರತೌ ತೃಪ್ತಿಂ ನ ಪ್ರಾಪ ಸುರಸಂಯುತಃ ॥ ೧ ॥

ನಾರಾಯಣೋ ಮಹಾದೇವೋ ಬ್ರಹ್ಮಾ ತತ್ರ ಚತುರ್ಮುಖಃ ।
ವರುಣಶ್ಚ ಕುಬೇರಶ್ಚ ತಥಾನ್ಯೇ ಲೋಕಪಾಲಕಾಃ ॥ ೨ ॥

ತತ್ರಾಸ್ವಾದ್ಯ ಹವಿಸ್ಸ್ನಿಗ್ಧಂ ವಸಿಷ್ಠೇನ ಪರಿಷ್ಕೃತಂ ।
ತತ್ರ ಪುನರ್ಹಿ ವಿಪ್ರೇಂದ್ರಾಃ ಕ್ಷುಧಾರ್ತಾ ಇವ ಭೋಜನಾತ್ ॥ ೩ ॥

ಸರ್ವಾನ್ದೇವಾಂಶ್ಚ ಸಂತರ್ಪ್ಯ ಹವಿಷಾ ಕರುಣಾನಿಧಿಃ ।
ವಸಿಷ್ಠಪ್ರೇರಿತಸ್ಸರ್ವಮಿತಿಕರ್ತವ್ಯಮಾಚರತ್ ॥ ೪ ॥

---

## ಅರವತ್ತೆಂಟನೆಯ ಅಧ್ಯಾಯವು.

೧. ಶೇಷನು ಹೇಳಿದನು:—ಇಂದ್ರನು ಅಲ್ಲಿ ರಾಮಚಂದ್ರನು ನೋಡಿದ ಹವಿಸ್ಸನ್ನು ಪರಿವಾರದೊಡನೆ ಎಷ್ಟು ತಿಂದರೂ ತೃಪ್ತಿಯನ್ನು ಪಡೆಯಲಿಲ್ಲ.

೨-೩. ನಾರಾಯಣ, ಬ್ರಹ್ಮ, ವರುಣ, ಕುಬೇರ, ಇವರೇ ಮುಂತಾದವರು ವಸಿಷ್ಠನಿಂದ ಸಿದ್ಧಪಡಿಸಿದ ಆ ಸ್ನಿಗ್ಧವಾದ ಹವಿಸ್ಸನ್ನು ತಿಂದೂ ಇನ್ನೂ ಬೇಕೆನ್ನುವಂತೆಯೇ ಇದ್ದರು.

೪. ಆ ಶ್ರೀರಾಮನು ಎಲ್ಲಾ ದೇವತೆಗಳನ್ನೂ ತೃಪ್ತಿಪಡಿಸಿ ವಸಿಷ್ಠನು ಹೇಳಿದಂತೆ ಎಲ್ಲಾ ಕೆಲಸಗಳನ್ನೂ ಮಾಡಿದನು.

ಬ್ರಾಹ್ಮಣಾ ದಾನಸಂತುಷ್ಟಾ ಹವಿಸ್ತುಷ್ಟಾ ಸುರಾ ವರಾಃ ।
ತೃಪ್ತಾಸ್ಸರ್ವೇ ಸ್ವಕಂ ಭಾಗಂ ಗೃಹೀತ್ವಾ ನಿಲಯಂ ಯಯುಃ ॥ ೫ ॥

ಋಷಿಭ್ಯೋ ಹೋತೃಮುಖ್ಯೇಭ್ಯಃ ಪ್ರಾದಾದ್ರಾಜ್ಯಂ ಚತುರ್ದಿಶಂ ।
ಸಂತುಷ್ಟಾಸ್ತೇ ದ್ವಿಜಾಃ ಕಾಮಮಾಶೀರ್ಭಿರವದುಶ್ಶುಭಂ ॥ ೬ ॥

ಪೂರ್ಣಾಹುತಿಂ ತತಃ ಕೃತ್ವಾ ವಸಿಷ್ಠಃ ಪ್ರಾಹ ಸುಸ್ತ್ರಿಯಃ ।
ನರ್ಥಾಪಯಂತು ಭೂಮೀಶಂ ಯಜ್ಞಪೂರ್ತಿಕರಂ ಪರಂ ॥ ೭ ॥

ತದ್ವಾಕ್ಯಂ ತಾಸ್ತ್ರಿಯಶ್ಶ್ರುತ್ವಾ ಲಾಜೈರವಾಕಿರನ್ಮುದಾ ।
ಲಾವಣ್ಯಜಿತಕಂದರ್ಪಂ ಮಹಾಭೂಮೀಶಪೂಜಿತಂ ॥ ೮ ॥

ತತೋಽವಭೃಥಸ್ನಾನಾರ್ಥಂ ಪ್ರೇರಯಾಮಾಸ ಭೂಮಿಪಂ ।
ಯಯೌ ರಾಮಃ ಸಹ ಸ್ತ್ರೀಯೈಃ ಸರಯೂತೀರಮುತ್ತಮಂ ॥ ೯ ॥

ಅನೇಕರಾಜಕೋಟೀಭಿಃ ಪೂರಿತಃ ಪಾದಚಾರಿಭಿಃ ।
ಜಗಾಮ ಸ ಸರಿಚ್ಛ್ರೇಷ್ಠಾಂ ಪಕ್ಷಿವೃಂದಸಮಾಕುಲಾಂ ॥ ೧೦ ॥

---

೫. ಬ್ರಾಹ್ಮಣರು ದಾನ ತೆಗೆದುಕೊಂಡು ತುಷ್ಟರಾದರು, ದೇವತೆಗಳು ಹವಿಸ್ಸಿನಿಂದ ತೃಪ್ತರಾದರು. ಅನಂತರ ಎಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

೬. ಹೋತೃ ಮುಂತಾದ ಋತ್ವಿಕ್ಕುಗಳಿಗೆ ಒಂದೊಂದು ದಿಕ್ಕಿನ ರಾಜ್ಯಗಳನ್ನು ದಕ್ಷಿಣೆಯಾಗಿ ಕೊಟ್ಟನು. ಅವರು ಸಂತೋಷಗೊಂಡು ಮಂಗಳವನ್ನು ಕೋರಿದರು.

೭. ಪೂರ್ಣಾಹುತಿಯನ್ನು ಮಾಡಿದನಂತರ ವಸಿಷ್ಠನು ರಾಮನಿಗೆ ಆರತಿ ಬೆಳಗುವಂತೆ ಮುತ್ತೈದೆಯರಿಗೆ ಹೇಳಿದನು.

೮. ಈ ಮಾತನ್ನು ಹೆಂಗಸರು ಕೇಳಿ ಆ ಸುಂದರನಾದ ರಾಮನಿಗೆ ಆರತಿ ಎತ್ತಿ ಅರಳನ್ನೆರಚಿ ಆಶೀರ್ವದಿಸಿದರು.

೯. ಅನಂತರ ಅವಭೃಥಸ್ನಾನಕ್ಕೋಸ್ಕರ ಆ ರಾಮನು ತಮ್ಮವರೊಡನೆ ಸರಯೂತೀರಕ್ಕೆ ಹೋದನು.

೧೦-೧೧. ಪಾದಚಾರಿಗಳಾದ ಅನೇಕ ರಾಜರೊಡನೆಯೂ, ತಮ್ಮ ಹೆಂಡತಿಯರೊಡನೆಯೂ, ಕೂಡಿಕೊಂಡು ವೈಭವದಿಂದ ನೀರು ಪಕ್ಷಿಗಳಿಂದ ಶೋಭಿಸುತ್ತಿರುವ

ತಾರಾಪತಿರಿವ ಸ್ವಾಭಿರ್ಭಾರ್ಯಾಭಿರ್ವೃತ ಉತ್ಪ್ರಭಃ ।
ವಿರೋಚತೇ ಯಥಾ ತದ್ವದ್ರಾಮೋ ರಾಜಗಣೈರ್ವೃತಃ ॥ ೧೧ ॥

ತದುತ್ಸವಂ ಸಮಾಜ್ಞಾಯ ಯಯುರ್ಲೋಕಾಸ್ತ್ವರಾಯುತಾಃ ।
ಸೀತಾಪತಿಮುಖಾಲೋಕನಿಶ್ಚಲೀಭೂತಲೋಚನಾಃ ॥ ೧೨ ॥

ರಾಜೇಂದ್ರಂ ಸೀತಯಾ ಸಾಕಂ ಗಚ್ಛಂತಂ ಸರಿತಂ ಪ್ರತಿ ।
ವಿಲೋಕ್ಯ ಮುದಿತಾ ಲೋಕಾಶ್ಚಿರಂ ದರ್ಶನಲಾಲಸಾಃ ॥ ೧೩ ॥

ಅನೇಕನಟಗಂಧರ್ವಾ ಗಾಯಂತೋ ಯಶ ಉಜ್ಜ್ವಲಂ ।
ಅನುಜಗ್ಮುರ್ಮಹೀಶಾನಂ ಸರ್ವಲೋಕನಮಸ್ಕೃತಂ ॥ ೧೪ ॥

ನರ್ತಕ್ಯಸ್ತತ್ರ ನೃತ್ಯಂತ್ಯಃ ಕ್ಷೋಭಯಂತ್ಯಃ ಪತೇರ್ಮನಃ ।
ಜಲಯಂತ್ರೈಶ್ಚ ಸಿಂಚಂತ್ಯಃ ಯಯುಃ ಶ್ರೀರಾಮಸೇವನಂ ॥ ೧೫ ॥

ಮಹಾರಾಜಂ ವಿಲಿಂಪಂತ್ಯೋ ಹರಿದ್ರಾಕುಂಕುಮಾದಿಭಿಃ ।
ಪರಸ್ಪರಂ ವಿಲಿಂಪಂತ್ಯೋ ಮುದಂ ಪ್ರಾಪುರ್ಮಹತ್ತರಾಂ ॥ ೧೬ ॥

---

ಸರಯೂ ನದಿಯ ದಡಕ್ಕೆ ಹೋದನು.

೧೨. ಆ ಉತ್ಸವವನ್ನು ಕೇಳಿ ಜನರು ಆತುರದಿಂದ ಸೀತಾಪತಿಯನ್ನು ನೋಡಲು ಓಡಿ ಬಂದರು.

೧೩. ಸೀತೆಯೊಡನೆ ಹೋಗುತ್ತಿರುವ ಆ ಶ್ರೀರಾಮನನ್ನು ಆ ಜನರು ಸಂತೋಷದಿಂದ ನೋಡಿದರು.

೧೪. ಅನೇಕರಾದ ನಟರು, ಗಂಧರ್ವರು, ರಾಮನ ಯಶಸ್ಸನ್ನು ಗಾನ ಮಾಡುತ್ತಾ ಆ ಪೂಜ್ಯನನ್ನು ಅನುಸರಿಸಿಹೋದರು.

೧೫. ನರ್ತಕಿಯರು ಗಂಡಂದಿರ ಮನಸ್ಸನ್ನು ಉದ್ರೇಕಗೊಳಿಸುತ್ತಾ ನೀರಿನ ಕೊಳವಿಯಿಂದ ಓಕಳಿಯಾಡುತ್ತ ಶ್ರೀರಾಮನ ಸೇವೆಯನ್ನು ಸಲ್ಲಿಸುತ್ತಿದ್ದರು.

೧೬. ಅರಶಿನ ಕುಂಕುಮಗಳನ್ನು ಮಹಾರಾಜನಿಗೂ ಹಚ್ಚುತ್ತಾ ತಾವೂ ಹಚ್ಚಿಕೊಳ್ಳುತ್ತಾ ಬಹು ಸಂತೋಷಪಟ್ಟರು.

ಕುಚಯುಗ್ಮೋಪರಿನ್ಯಸ್ತಮುಕ್ತಾಹಾರಸುಶೋಭಿತಾಃ ।
ಶ್ರವಣದ್ವಂದ್ವಸಂಸ್ಪೃಷ್ಟಸ್ವರ್ಣಕುಂಡಲಲಕ್ಷಿತಾಃ ॥ ೧೭ ॥

ಅನೇಕನರನಾರೀಭಿಃ ಸಂಕೀರ್ಣಂ ಮಾರ್ಗಮಾಚರತ್ ।
ಯಥಾವತ್ಸರಿತಂ ಪ್ರಾಪ ಶಿವಪುಣ್ಯಜಲಾಪ್ಲುತಾಂ ॥ ೧೮ ॥

ತತ್ರ ಗತ್ವಾ ಸ ವೈದೇಹ್ಯಾ ರಾಮಃ ಕಮಲಲೋಚನಃ ।
ಪ್ರವಿವೇಶ ಜಲಂ ಪುಣ್ಯಂ ವಸಿಷ್ಠಾದಿಭಿರನ್ವಿತಃ ॥ ೧೯ ॥

ಅನುಪ್ರವಿವಿಶುಃ ಸರ್ವೇ ರಾಜಾನೋ ಜನತಾಸ್ತಥಾ ।
ತತ್ಪಾದರಜಸಾ ಪೂತಂ ಜಲಂ ಲೋಕೈಕವಂದಿತಂ ॥ ೨೦ ॥

ಪರಸ್ಪರಂ ಪ್ರಸಿಂಚಂತೋ ಜಲಯಂತ್ರೈರ್ಮನೋರಮೈಃ ।
ಸುಶೋಣನಯನಾಸ್ಸರ್ವೇ ಹರ್ಷಂ ಪ್ರಾಪುರ್ಮನೋಧಿಕಂ ॥ ೨೧ ॥

ಸ ರಾಮಸ್ಸೀತಯಾ ಸಾರ್ಧಂ ಚಿರಂ ಪುಣ್ಯಜಲಪ್ಲವೇ ।
ಕ್ರೀಡಿತ್ವಾ ಜಲಕಲ್ಲೋಲೈರ್ನಿರಗಾದ್ಧರ್ಮಸಂಯುತಃ ॥ ೨೨ ॥

---

೧೭. ಆ ಹೆಂಗಸರೆಲ್ಲರೂ ಹಾರಗಳನ್ನು ಹಾಕಿಕೊಂಡು, ಕಿವಿಗಳಲ್ಲಿ ಓಲೆಯನ್ನು ಧರಿಸಿದ್ದರು.

೧೮. ಈ ರೀತಿಯಲ್ಲಿ ಅನೇಕ ಜನ ಹೆಂಗಸರು ಗಂಡಸರುಗಳು ದಾರಿಯ ತುಂಬ ತುಂಬಿಕೊಂಡು ನೋಡುತ್ತಿರಲು, ರಾಮನು ಆ ಸರಯೂ ನದಿಯ ದಡಕ್ಕೆ ಹೋದನು.

೧೯. ರಾಮನು ಸೀತೆಯೊಡನೆ ಬಂದು ಆಕೆಯೊಡನೆಯೂ, ವಸಿಷ್ಠಾದಿಗಳೊಡನೆಯೂ ಅವಭೃಥಸ್ನಾನಕ್ಕೆ ಇಳಿದನು.

೨೦. ಶ್ರೀರಾಮನ ಪಾದಧೂಳಿಯಿಂದ ಪೂತವಾದ ಆ ನೀರನ್ನು ಆ ರಾಜರೂ ಮಿಕ್ಕ ಜನಗಳೂ, ರಾಮನನ್ನು ಅನುಸರಿಸಿ ಪ್ರವೇಶಿಸಿದರು.

೨೧. ಎಲ್ಲರೂ ನೀರಿನಿಂದ ಉಜ್ಜಿ ಕಣ್ಣನ್ನು ಕೆಂಪಗೆ ಮಾಡಿಕೊಳ್ಳುತ್ತ ನೀರು ಕೊಳವಿಯಿಂದ ನೀರನ್ನು ಎರಚಾಡಿದರು.

೨೨. ಆ ರಾಮನು ಸೀತೆಯೊಡನೆ ಬಹುಕಾಲ ಜಲಕ್ರೀಡೆಯನ್ನಾಡಿ ಧರ್ಮವನ್ನು ಹೊಂದಿದ್ದ ನೀರಿನಿಂದೆದ್ದನು.

ದುಕೂಲವಾಸಾಸ್ಸಕಿರೀಟಕುಂಡಲಃ
ಕೇಯೂರಶೋಭಾವರಕಂಕಣಾನ್ವಿತಃ ।
ಕಂದರ್ಪಕೋಟಿಶ್ರಿಯಮುದ್ವಹನ್ನೃಪೋ
ರಾಜಾಗ್ರ್ಯವರ್ಯೈರುಪಸಂಸ್ತುತೋ ಬಭೌ ॥ ೨೩ ॥

ಸ ಯಾಗಯೂಪಂ ವರವರ್ಣಶೋಭಿತಂ
ಕೃತ್ವಾ ಸರಿತ್ತೀರವರೇ ಮಹಾಮನಾಃ ।
ತ್ರೈಲೋಕ್ಯಲೋಕಶ್ರಿಯಮಾಪ ಹ್ಯದ್ಭುತಾ-
ಮನ್ಯೈರ್ದುರಾಪಾಂ ನೃಪತಿಭಿರ್ಜಿತೈರ್ವರೈಃ ॥ ೨೪ ॥

ಏವಂ ಜನಕಪುತ್ರ್ಯಾಸೌ ಹಯಮೇಧತ್ರಯಂ ಚರನ್ ।
ತ್ರೈಲೋಕ್ಯೇ ಕೀರ್ತಿಮತುಲಾಂ ಪ್ರಪೇದೇ ವೈ ಸುದುರ್ಲಭಾಂ ॥ ೨೫ ॥

ಏವಂ ತೇ ವರ್ಣಿತಂ ತಾತ ಯತ್ಪೃಷ್ಟೋ ರಾಮಸತ್ಕಥಾಂ ।
ವಿಸ್ತೃತಃ ಕಥಿತೋ ಮೇಧೋ ಭೂಯಃ ಕಿಂ ಪೃಚ್ಛಸಿ ದ್ವಿಜ ॥ ೨೬ ॥

---

೨೩. ನೀರಿನಿಂದ ಮೇಲಕ್ಕೆದ್ದು ಒರಸಿಕೊಂಡು ರೇಷ್ಮೆಯ ಬಟ್ಟೆಗಳನ್ನುಟ್ಟು, ಕಿರೀಟ ಕುಂಡಲ ಕೇಯೂರ, ಕಂಕಣಗಳನ್ನು ಹಾಕಿಕೊಂಡು ಮನ್ಮಥನ ಕಾಂತಿಯನ್ನು ತಿರಸ್ಕರಿಸುತ್ತಾ ರಾಜರುಗಳಿಂದ ಕೂಡಿಕೊಂಡು ಪ್ರಕಾಶಿಸಿದನು

೨೪. ಆ ನದಿಯ ದಡದಲ್ಲಿ ಆ ಯೂಪದ ಮರವನ್ನು ನೆಟ್ಟು ಇತರ ರಾಜರಿಗೆ ಹೊಂದಲಸಾಧ್ಯವಾದ ಸಂಪತ್ತನ್ನೂ ಶಾಂತಿಯನ್ನೂ ಕೀರ್ತಿಯನ್ನೂ ಹೊಂದಿದನು.

೨೫. ಹೀಗೆ ರಾಮನು ಸೀತೆಯೊಡನೆ ಮೂರು ಅಶ್ವಮೇಧಗಳನ್ನು ಮಾಡಿ ಮೂರು ಲೋಕದಲ್ಲಿಯೂ, ಉತ್ಕೃಷ್ಟವಾದ ಕೀರ್ತಿಯನ್ನು ಪಡೆದನು.

೨೬. ನೀನು ಕೇಳಿದುದನ್ನು ಹೇಳಿದ್ದೇನೆ. ಅವರಲ್ಲೂ ಅಶ್ವಮೇಧವನ್ನು ವಿಸ್ತಾರವಾಗಿ ಹೇಳಿದ್ದೇನೆ.

ಯಶ್ಶೃಣೋತಿ ಹರೇರ್ಭಕ್ತ್ಯಾ ರಾಮಚಂದ್ರಸ್ಯ ಸನ್ಮಖಂ ।
ಬ್ರಹ್ಮಹತ್ಯಾಂ ಕ್ಷಣಾತ್ತೀತ್ವಾ ಬ್ರಹ್ಮ ಶಾಶ್ವತಮಾಪ್ನುಯಾತ್ ॥ ೨೭ ॥

ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಧನಮಾಪ್ನುಯಾತ್ ।
ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ೨೮

ಯತ್ಕಥಾಶ್ರವಣಾದ್ದುಷ್ಟಃ ಶ್ವಪಚೋಽಪಿ ಪರಂ ಪದಂ ।
ಸ್ರಾಪ್ನೋತಿ ಕಿಮು ವಿಪ್ರಾಗ್ರ್ಯೋ ರಾಮಭಕ್ತಿಪರಾಯಣಃ ॥ ೨೯ ॥

ರಾಮಂ ಸ್ಮೃತ್ವಾ ಮಹಾಭಾಗಂ ಪಾಪಿನೋಽಪಿ ಪರಂ ಪದಂ ।
ಸ್ರಾಪ್ನುಯುಃ ಪರಮಂ ಸ್ವರ್ಗಂ ಶಕ್ರದೇವಾದಿದುರ್ಲಭಂ ॥ ೩೦ ॥

ತೇ ಧನ್ಯಾ ಮಾನವಾ ಲೋಕೇ ಯೇ ಸ್ಮರಂತಿ ರಘೂದ್ವಹಂ ।
ತೇ ಕ್ಷಣಾತ್ಸಂಸೃತಿಂ ತೀರ್ತ್ವಾ ಗಚ್ಛಂತಿ ಸುಖಮವ್ಯಯಂ ॥ ೩೧ ॥

---

೨೭. ರಾಮಚಂದ್ರನ ಯಾಗಕಥೆಯನ್ನು ಭಕ್ತಿಯಿಂದಕೇಳಿದವನು ಬ್ರಹ್ಮಹತ್ಯೆಯನ್ನು ಕಳೆದುಕೊಂಡು ಶಾಶ್ವತವಾದ ಬ್ರಹ್ಮನಲ್ಲಿ ಐಕ್ಯವಾಗುತ್ತಾನೆ.

೨೮. ಇದನ್ನು ಕೇಳಿದರೆ ಮಕ್ಕಳಿಲ್ಲದವರಿಗೆ ಮಕ್ಕಳೂ, ಧನವಿಲ್ಲದವರಿಗೆ ಧನವೂ ಸಿಕ್ಕುತ್ತದೆ. ರೋಗಿಗಳು ಅದರಿಂದ ಮುಕ್ತರಾಗುತ್ತಾರೆ. ಬಂಧನದಲ್ಲಿರುವವರಿಗೆ ಬಿಡುಗಡೆಯಾಗುತ್ತದೆ.

೨೯. ಈ ಕಥೆಯನ್ನು ಕೇಳಿದುದರಿಂದ ದುಷ್ಟನಾದ ಚಂಡಾಲನೂ ಕೂಡ ಪರಮಪದವನ್ನು ಹೊಂದುವಾಗ್ಯೆ, ರಾಮಭಕ್ತರಾದ ವಿಪ್ರನಿಗೆ, ಹೇಳತಕ್ಕದ್ದೇನಿದೆ?

೩೦. ರಾಮಸ್ಮರಣೆಮಾಡಿದರೆ, ಪಾಪಿಗಳೂ ಕೂಡ ಇಂದ್ರನಿಗೂ ದುರ್ಲಭವಾದ ಪರಮಪದವನ್ನು ಹೊಂದುತ್ತಾರೆ.

೩೧. ರಾಮಸ್ಮರಣೆ ಮಾಡುತವರೇ ಲೋಕದಲ್ಲಿ ಧನ್ಯರು. ಅವರು ಕ್ಷಣಕಾಲದಲ್ಲಿ ಸಂಸಾರವನ್ನು ದಾಟಿ ಉತ್ತಮಲೋಕವನ್ನು ಹೊಂದುತ್ತಾರೆ.

ಪ್ರತ್ಯೇಕಮಕ್ಷರಂ ಬ್ರಹ್ಮಹತ್ಯಾವಂಶದವಾನಲಃ ।
ತಂ ಯಶ್ರಾವಯತೇ ಧೀಮಾಂಸ್ತಂ ಸಗುರುಂ ಸಂಪ್ರಪೂಜಯೇತ್ ॥ ೩೨ ॥

ಶ್ರುತ್ವಾ ಕಥಾಂ ವಾಚಕಾಯ ಗವಾಂ ದ್ವಂದ್ವಂ ಪ್ರದಾಪಯೇತ್ ।
ಸಪತ್ನೀಕಾಯ ಸಂಪೂಜ್ಯ ವಸ್ತ್ರಾಲಂಕಾರಭೋಜನೈಃ ॥ ೩೩ ॥

ಕುಂಡಲಾಭ್ಯಾಂ ವಿರಾಜಂತ್ಯಾ ಮುದ್ರಿಕಾಭಿರಲಂಕೃತೇ ।
ರಾಮಸೀತೇ ಸ್ವರ್ಣಮಯ್ಯಾ ಪ್ರತಿಮೇ ಶೋಭನೇ ವರೇ ॥ ೩೪ ॥

ಕೃತ್ವಾ ತು ವಾಚಕಾಯೈವ ದೀಯತೇ ಹಿ ದ್ವಿಜೋತ್ತಮ ।
ತಸ್ಯ ದೇವಾಶ್ಚ ಪಿತರೋ ವೈಕುಂಠಂ ಪ್ರಾಪ್ನುಯುಸ್ತದಾ ॥ ೩೫ ॥

ತ್ವಯಾ ದೃಷ್ಟಾ ರಾಮಕಥಾ ಮಯಾ ತೇ ಕಥಿತಾ ಪುರಾ ।
ಕಿಮನ್ಯತ್ಕಥ್ಯತಾಂ ಬ್ರಹ್ಮನ್ಪುರತಸ್ತವ ಧೀಮತಃ ॥ ೩೬ ॥

---

೩೨. ಇದರಲ್ಲಿರುವ ಒಂದೊಂದು ಅಕ್ಷರವೂ, ಬ್ರಹ್ಮಹತ್ಯೆಯೆಂಬ ಕಾಡಿಗೆ ಕಿಚ್ಚಿನ ರೂಪವಾದುದು. ಅದನ್ನು ಓದಿ ಹೇಳುವ ಗುರುವನ್ನು ಚೆನ್ನಾಗಿ ಪೂಜಿಬೇಕು.

೩೩. ಕಥೆಯನ್ನು ಕೇಳಿದ ಮೇಲೆ ಓದಿದವನಿಗೆ ಎರಡು ಹಸುಗಳನ್ನು ಕೊಡಬೇಕು. ವಸ್ತ್ರ ಆಲಂಕಾರ ಭೋಜನಗಳಿಂದ ತೃಪ್ತಿಪಡಿಸಿ ಅವರಿಗೆ ದಂಪತಿಪೂಜೆಯನ್ನೂ ಮಾಡಬೇಕು.

೩೪-೩೫. ಸೀತಾರಾಮರ ವಿಗ್ರಹಗಳನ್ನು ಚಿನ್ನದಲ್ಲಿ ಮಾಡಿಸಿ ಅವುಗಳಿಗೆ ಕುಂಡಲಗಳನ್ನು ಹಾಕಿಸಿ ಕಥೆಯನ್ನು ಹೇಳಿದ ಬ್ರಾಹ್ಮಣನಿಗೆ ಕೊಡಬೇಕು. ಆಗ ಅವನ ದೇವತೆಗಳೂ ಪಿತೃಗಳೂ ವೈಕುಂಠವನ್ನು ಹೊಂದಿ ಸುಖಿಸುತ್ತಾರೆ.

೩೬. ನೀನು ರಾಮಕಥೆಯನ್ನು ಕೇಳಿದುದರಿಂದ ಹೇಳಿದೆನು. ನಿನಗೆ ಇನ್ನೇನು ಬೇಕು, ಕೇಳು. ಹೇಳುತ್ತೇನೆ.

**ಶೃಣ್ವಂತಿ ಯೇ ಕಥಾಮೇತಾಂ ಬ್ರಹ್ಮಹತ್ಯಾಘನಾಶಿನೀಂ ।**
**ತೇ ಯಾಂತಿ ಪರಮಂ ಸ್ಥಾನಂ ಸರ್ವದೇವೈಸ್ಸುದುರ್ಲಭಂ　　॥ ೩೭ ॥**

**ಗೋಘ್ನಶ್ಚ ತು ಸುತಘ್ನಶ್ಚ ಸುರಾಪೋ ಗುರುತಲ್ಪಗಃ ।**
**ಕ್ಷಣಾತ್ಪೂತೋ ಭವತ್ಯೇವಮಚಿರೇಣ ದ್ವಿಜರ್ಷಭ　　॥ ೩೮ ॥**

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
ಶೇಷವಾತ್ಸ್ಯಾಯನಸಂವಾದೇ ರಾಮಾಶ್ವಮೇಧ-
ವರ್ಣನಂ ನಾಮ ಅಷ್ಟಷಷ್ಟಿತಮೋಽಧ್ಯಾಯಃ

---

೩೭. ಬ್ರಹ್ಮಹತ್ಯಾನಾಶಕವಾದ ಈ ಕಥೆಯನ್ನು ಕೇಳಿದರೆ ದೇವತೆಗಳಿಗೂ ದುರ್ಲಭವಾದ ಪರಮಪದವನ್ನು ಹೊಂದುತ್ತಾರೆ.

೩೮. ಗೋವನ್ನು ಕೊಂದವನು, ಬಾಲಕರನ್ನು ಕೊಂದವನು, ಸುರೆಯನ್ನು ಕುಡಿದವನು, ಗುರುವಿನ ಹೆಂಡತಿಯಲ್ಲಿ ಗಮಿಸಿದವನು, ಇಂತಹ ಪಾಪಿಷ್ಠರೂ ಕೂಡ ಇದನ್ನು ಕೇಳಿದರೆ, ತಕ್ಷಣದಲ್ಲಿಯೇ ಪವಿತ್ರರಾಗುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಪಾತಾಳಖಂಡದ ಶೇಷವಾತ್ಸ್ಯಾಯನ
ಸಂವಾದದ ರಾಮಾಶ್ವಮೇಧದಲ್ಲಿ ಅಶ್ವಮೇಧವರ್ಣನವೆಂಬ
ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಮಂಗಳಂ ॥

